# ಅಮರ ಸುಳ್ಯದ ಸ್ವಾತಂತ್ರ್ಯ ಸಮರ

ಎನ್. ಎಸ್. ದೇವಿಪ್ರಸಾದ್ ಸಂಪಾಜೆ



ಅಮರಕ್ರಾಂತಿ ಸಂಸ್ಮರಣ ಸಮಿತಿ, ಸಂಪಾಜೆ, ದ.ಕ.

# ಅಮರ ಸುಳ್ಯದ ಸ್ವಾತಂತ್ರ್ಯ ಸಮರ

ಎನ್. ಎಸ್. ದೇವಿಪ್ರಸಾದ್ ಸಂಪಾಜೆ

೨೦೦೫

ಅಮರಕ್ರಾಂತಿ ಸಂಸ್ಮರಣ ಸಮಿತಿ

ಸಂಪಾಜೆ - ೫೭೪ ೨೩೪,

ದಕ್ಷಿಣ ಕನ್ನಡ.

**AMARA SULLIADA SWATHANTHRYA SAMARA -**
A Book in Kannada on the Freedom Struggle of
Amara Sullia by N. S. Devi Prasad Sampaje
P. O. Sampaje, Sullia Taluk, Dakshina Kannada District
Published by Amara kranthi Utsava, Amara Kranthi Samsmarana Samithi, Sampaje, Dakshina Kannada.

First Impression : 1999
Revised Impression: 2005
Price : Rs. 90-00
Pages : ix +151

ರಕ್ಷಾಕವಚ ವಿನ್ಯಾಸ : ಮೋಹನ ಸೋನ

ಅಕ್ಷರ ಜೋಡಣೆ : ಪ್ರಸಾಧನ್ ಕಂಪ್ಯೂಟರ್ಸ್, ಭಾರತೀನಗರ, ಬಿಜೈ, ಮಂಗಳೂರು.

ಮುದ್ರಣ : ಪ್ರಕಾಶ್ ಆಫ್‌ಸೆಟ್ ಪ್ರಿಂಟರ್ಸ್, ಬೈಕಂಪಾಡಿ, ಮಂಗಳೂರು.

# ಮುನ್ನುಡಿ

ನನ್ನ ಆತ್ಮೀಯರಾದ ಎನ್. ಎಸ್. ದೇವಿಪ್ರಸಾದರು ಅಮರ ಸುಳ್ಯದ ಸ್ವಾತಂತ್ರ್ಯ ಸಮರದ ಕುರಿತು ವಿವಿಧ ದಾಖಲೆಗಳನ್ನು ಪರಿಶೀಲಿಸಿ, ಹಲವು ಸಂದರ್ಭಗಳಲ್ಲಿ ವಿಚಾರ ಪ್ರಚೋದಕ ಭಾಷಣ, ಹಾಗೂ ಲೇಖನ ಪ್ರಕಟಣ ಮುಂತಾದ ಕಾರ್ಯದಲ್ಲಿ ಕೆಲವು ವರ್ಷಗಳಿಂದ ನಿರತರಾಗಿದ್ದರು. ಹಿಂದೆ ಬ್ರಿಟಿಷರು, ಮತ್ತೆ ಅವರ ಹಿಂಬಾಲಕರು ಬರೆದಿಟ್ಟುದನ್ನೇ ನಾವು ಚರಿತ್ರೆಯೆಂದುಕೊಂಡು, ಗಿಳಿಪಾಠ ಮಾಡುವುದನ್ನು ಕುರಿತು, ಚರಿತ್ರೆಯನ್ನೇ ಅಧ್ಯಯನ ವಿಷಯವನ್ನಾಗಿ ಆಯ್ದುಕೊಂಡಿದ್ದ ಅವರು ವ್ಯಗ್ರಮನಸ್ಕರಾಗಿ ಆಡುತ್ತಿದ್ದ ಮಾತುಗಳು ಅವರ ಸತ್ಯಶೋಧಕ ಚಿಕಿತ್ಸಕ ಮನಸ್ಸನ್ನು ಪ್ರತಿಬಿಂಬಿಸುತ್ತಿದ್ದವು. ಈ ಸಂದರ್ಭದಲ್ಲೆಲ್ಲ ನೇತಾಜಿ ಸುಭಾಸ್‌ಚಂದ್ರ ಬೋಸರು Black hole of Calcutta ಎಂಬ ಬ್ರಿಟಿಷರು ಅಪಪ್ರಚಾರ ಮಾಡಿದ ವಿಷಯವನ್ನು ಆಧಾರ ಸಮೇತ ಖಂಡತುಂಡವಾಗಿ ನಿರಾಕರಿಸಿದ ಸಂಗತಿ ನನಗೆ ನೆನಪಾಗುತ್ತಿತ್ತು. ಚರಿತ್ರೆಯ ಪಾಠದಲ್ಲಿ ಸಿಪಾಯಿದಂಗೆಯ (ಮೊದಲ ಸ್ವಾತಂತ್ರ್ಯ ಸಮರ) ಕಾಲದಲ್ಲಿ, ಹಿಂಸೆ ಕ್ರೌರ್ಯಗಳನ್ನು ದೇಶೀಯರು ಮಾತ್ರ ನಡೆಸಿದರೆಂಬುದನ್ನು ವೈಭವೀಕರಿಸಿ, ಅವರು ನಡೆಸಿದ ಅತ್ಯಾಚಾರಗಳನ್ನು ಕಡೆಗಣಿಸಿ ಮಾಡಿದ ವರ್ಣನೆಯ ಪಠ್ಯವನ್ನು ಎಲ್ಲ ಉಪಾಧ್ಯಾಯರೂ ರಾಜನಿಷ್ಠೆ ಮತ್ತು ಆಸಕ್ತಿಯಿಂದ ಬೋಧಿಸುತ್ತಿದ್ದರು. ನಮಗೆ ಸ್ವಾತಂತ್ರ್ಯ ಬಂದ ಮೇಲೂ ಹಿಂದೆಯೇ Brain wash ಆಗಿದ್ದ ಅಭಿಮಾನಶೂನ್ಯ ಭಾರತೀಯ ಜಡಬುದ್ಧಿ ಪರದೇಶೀಯರು, ಅರ್ಥಾತ್ ಬಿಳಿಯರು ಬರೆದಿಟ್ಟುದೆಲ್ಲವೂ ವೇದವಾಕ್ಯವೆಂದು ನಂಬಿ ನಡೆದುಕೊಂಡು ಬಂದಿದೆ. ದೇವಿಪ್ರಸಾದರ ಮನೋವೃತ್ತಿ ಇದಕ್ಕೆ ವಿರುದ್ಧವಾದುದು. ನಿಜವಾದ ಸತ್ಯಶೋಧನೆಯಾಗಬೇಕೆಂದು ತುಡಿಯುತ್ತಿರುವುದು ಅವರ ಕೈಂಕರ್ಯದ ಒಳತೋಟಿ. ಇದನ್ನು ಕುರಿತು ಈ ಗ್ರಂಥದ ಪ್ರಸ್ತಾವನೆಯಲ್ಲಿ ಅವರೇ ಹೇಳಿಕೊಂಡಿದ್ದಾರೆ.

ಮೊದಲ ಸ್ವಾತಂತ್ರ್ಯ ಸಮರಕ್ಕಿಂತ ೨-೩ ದಶಕಗಳಷ್ಟು ಹಿಂದೆಯೇ ಬ್ರಿಟಿಷ್ ಸಾಮ್ರಾಜ್ಯ ಶಾಹಿಯ ವಿರುದ್ಧ ಜನತೆ ಸಿಡಿದೆದ್ದ ಅಸಾಧಾರಣ ಘಟನೆ ಅಮರ ಸುಳ್ಯ ಎಂದರೆ ಈಗಣ ಬರೇ ಸುಳ್ಯವೆಂಬ ಸೀಮೆಯೇ ಕೇಂದ್ರಬಿಂದುವಾಗಿ ನಡೆಯಿತು. ಆಗಿನ ಕೊಡಗು ಭೌಗೋಳಿಕವಾಗಿ ಈಗಿನದಕ್ಕಿಂತ ವಿಸ್ತೃತವಾಗಿತ್ತು ಎಂಬುದನ್ನು ದೇವಿಪ್ರಸಾದರು ವಿಶದೀಕರಿಸಿದ್ದಾರೆ. ಇದರಲ್ಲಿ ಸುಳ್ಯ-ಪುತ್ತೂರು ಭಾಗಗಳೂ ಸಮಾವೇಶಗೊಂಡಿದ್ದುವು. ಇಲ್ಲಿ ನಡೆದ ಕ್ರಾಂತಿ ತೋರನೋಟಕ್ಕೆ ಪ್ರಾದೇಶಿಕ ವ್ಯಾಪ್ತಿಯದೆಂದು ತೋರಬಹುದು. ಆದರೆ ಈ ಕ್ರಾಂತಿಯ ಸೂತ್ರಧಾರಿಗಳಲ್ಲಿ ಒಬ್ಬನಾದ ಹುಲಿಕಡಿದ ನಂಜಯ್ಯ, ಮೈಸೂರು, ಮದರಾಸು, ಹೈದರಾಬಾದ್, ದೆಹಲಿ, ಲಾಹೋರ್, ತಿರುಚಿನಾಪಳ್ಳಿ ಮುಂತಾದೆಡೆಗಳಲ್ಲಿ ಸಂಚರಿಸಿದ್ದ, ಸಂಪರ್ಕವಿರಿಸಿಕೊಂಡಿದ್ದ. ಇದು ಕೇವಲ ವಿಹಾರಾರ್ಥವಾಗಲ್ಲ, ಯಾವುದೋ ಕ್ರಾಂತಿಯ ಉದ್ದೇಶಕ್ಕಾಗಿಯೇ ಎಂದಿರುವಾಗ ಇದರ ವ್ಯಾಪ್ತಿ ವಿಸ್ತಾರವಾದುದು ಎಂಬುದು

ಸ್ವಯಂವೇದ್ಯವಾಗುತ್ತದೆ. ಆದುದರಿಂದ ಇದು ಕೇವಲ ಸ್ಥಳೀಯ, ಇದು ಕಾಟಕಾಯಿ, ಇದರ ವೀರರು 'ಕೊತ್ತಳಿಕೆ ವೀರರು' ಎಂದೆಲ್ಲ ನಮ್ಮವರೇ ಹೇಳಿಕೊಂಡಿರುವುದು, ತಾತ್ಸಾರದ ಮಾತನ್ನಾಡುವುದು ಸಂಕುಚಿತ ಮನೋವೃತ್ತಿಗೆ ಪ್ರತೀಕವಾಗುತ್ತದೆ. ಏನೇ ಆದರೂ, ಸ್ವದೇಶೀ ಕ್ರಾಂತಿಯ ಕಿಡಿ ಇಲ್ಲಿಂದ ಪ್ರಜ್ವಲಿಸಿತು. ಪ್ರಚಂಡ ಬ್ರಿಟಿಷ್ ಕಂಪೆನಿ ಸರಕಾರವನ್ನು ಅಲ್ಲಾಡಿಸಿತು. ಇಲ್ಲಿಂದ ಹೊರಟ ಸ್ವಾತಂತ್ರ್ಯವಾಹಿನಿಗೆ ಬೆಳ್ಳಾರೆ, ಸುಬ್ರಹ್ಮಣ್ಯ, ಪುತ್ತೂರು, ಬಂಟ್ವಾಳ ಮುಂತಾದ ಕಡೆಯ ಉಪವಾಹಿನಿಗಳೂ ಸೇರಿ, ವಿಸ್ತಾರವಾಗಿ ಮಂಗಳೂರಿಗೆ ಧಾವಿಸಿ, ಅಲ್ಲಿಂದ ಬ್ರಿಟಿಷರನ್ನು ಹೊಡೆದೋಡಿಸಿ, ಹದಿನಾಲ್ಕು ದಿನಗಳವರೆಗೆ ಮಂಗಳೂರಿನ ಬಾವುಟಗುಡ್ಡೆಯಲ್ಲಿ ಸ್ವಾತಂತ್ರ್ಯ ಧ್ವಜವನ್ನು ಹಾರಿಸಿ, ರಾಜ್ಯಭಾರ ಮಾಡಿತ್ತೆಂಬುದು ತುಂಬ ರೋಚಕವಾದ ವಿಷಯ.

ಇಂತಹ ನಮ್ಮ ಹಿರಿಯರು ಮಾಡಿದ ಅಂದಿನ ಸಾಹಸ, ಸಾಧನೆ, ತ್ಯಾಗ, ಬಲಿದಾನಗಳು ಇಂದಿನ ಕೃತಘ್ನ ಸಮಾಜದ ಅವಜ್ಞೆಯಿಂದ, ಉದಾಸೀನ ಮನಸ್ಕತೆಯಿಂದ ಅರಿವಳಿಕೆಗೆ ಪಕ್ಕಾಗಿವೆ. ಈ ನೆಲದ ನೀರುಂಡು, ಅವರು ಉಸಿರಾಡಿದ ಗಾಳಿಯನ್ನೇ ಉಸಿರಾಡಿ, ಉದರಂಭರಣ ಮಾಡುತ್ತಿರುವ ನಾವು ಅಂತಹ ಹಿರಿಯರಿಗೆ ಕೃತಜ್ಞತೆ ತೋರದೆ, ಅವರ ನೆನಪನ್ನು ಹಸಿರಾಗಿರಿಸದೆ, ಅವರಿಂದ ಸ್ಫೂರ್ತಿಯನ್ನು ಪಡೆದು, ನಮ್ಮ ಜೀವನವನ್ನು ಅಭಿಮಾನಧನರಾಗಿ ನಡೆಸದೆ, ಜಡದೇಹಿಗಳಾಗಿ, ಜಡಮತಿಗಳಾಗಿ, ಹೇಗೋ ಹಾಗೆ ಜೀವಿಸಿದ್ದರೆ, ಸ್ವಾಭಿಮಾನಶಾಲಿಗಳಾದ ಇತರ ಜನಾಂಗಗಳಿಗಿಂತ ಹಿಂದೆ ಬಿದ್ದು ಹೇಳ ಹೆಸರಿಲ್ಲದೆ ನಶಿಸುವುದು ನಿಶ್ಚಯ. ಇದನ್ನು ಮನಗಂಡು ಪರಿತಾಪಗೊಂಡು, ಪ್ರಸ್ತುತ ಗ್ರಂಥದ ಲೇಖಕರು ಶ್ರಮಪಟ್ಟು, ಆಧಾರಗಳನ್ನು ಸಂಗ್ರಹಿಸಿ, ಅವಲೋಕಿಸಿ, ಇದನ್ನು ಬರೆದಿರುತ್ತಾರೆ. ಕಳೆದ ವರ್ಷ, ಅಂದರೆ ೧೯೯೮ರಲ್ಲಿ ಸುಳ್ಯದಿಂದ ಮಂಗಳೂರುವರೆಗೆ ಒಂದು ಕಾಲ್ನಡಿಗೆಯ ಜಾಥಾವನ್ನೂ ಏರ್ಪಡಿಸಿದ್ದರು. ಇದಕ್ಕೆ ಎಲ್ಲ ಜನತೆಯಿಂದ ಅಭಿಮಾನದ ಅಭೂತಪೂರ್ವ ಸ್ವಾಗತ, ಬೆಂಬಲಗಳು ದೊರೆತು ಜಾಥಾ ಯಶಸ್ವಿಯಾಯಿತು. ಆ ಸಂದರ್ಭದಲ್ಲಿ ಕೈಗೊಂಡ ನಿರ್ಣಯಗಳು ಇನ್ನೂ ನಿಜರೂಪ ತಳೆಯದೆ ಉಳಿದುಕೊಂಡಿವೆ. ಇವೆಲ್ಲವೂ ಮತ್ತೆ ಮರೆತುಹೋಗುವ ಮುನ್ನ ಸದಾ ನೆನಪನ್ನುಕ್ಕಿಸುವ ಸಲುವಾಗಿ ಈಗ ಈ ಗ್ರಂಥ ಮೈತಳೆದು ಹೊರಬರುತ್ತಿದೆ. ಈ ಪ್ರದೇಶದ ಜನತೆ, ಎಳೆಯರೂ, ಹಳೆಯರೂ ಸೇರಿದಂತೆ ಇದನ್ನೋದಿ ಸ್ಫೂರ್ತಿ ಪಡೆದು ಮುಂದೆ ನಡೆಯಬೇಕಾದ ಕಾರ್ಯಭಾರಗಳನ್ನು ನೆರವೇರಿಸಲಿ. ಅಖಂಡ ಕರ್ನಾಟಕದ ಬೇರೆಡೆಯ ಜನತೆ ಇದನ್ನೋದಿ, ಈ ಪ್ರದೇಶದ ಹಿಂದಿನ ತಲೆಮಾರಿನವರ ಸಾಹಸಗಾಥೆಯನ್ನು ಕೇಳಿ ಪುಳಕಿತಗೊಳ್ಳುವಂತಾಗಲಿ, ದೇವಿಪ್ರಸಾದರ ಸಾಹಿತ್ಯಿಕ, ಸಾಮಾಜಿಕ ಸೇವಾ ಕೈಂಕರ್ಯಗಳಿಗೆ ಭಗವತ್ಕೃಪೆಯಿಂದ ನಿರಂತರ ಯಶಸ್ಸು ದೊರೆಯುತ್ತಿರಲಿ ಎಂಬುದು ನನ್ನ ಹಾರ್ದಿಕ ಬಯಕೆ.

ಮಾನಸ, ಜಟ್ಟಿಪಳ್ಳ, ಸುಳ್ಯ **ಕೆ. ಕುಶಾಲಪ್ಪ ಗೌಡ**

ದಿನಾಂಕ ೦೭-೦೭-೧೯೯೯

## ಈ ಕೃತಿಗೆ ಕಾರಣರು

೧೮೩೪ರಲ್ಲಿ ಬ್ರಿಟಿಷರು ನಮ್ಮೂರು ಸಂಪಾಜೆಯನ್ನು ಸೀಳಿಹಾಕಿದರು. ಈಗಲೂ ಕೊಡಗು ಸಂಪಾಜೆ, ದಕ್ಷಿಣ ಕನ್ನಡ ಸಂಪಾಜೆ, ಪ್ರತ್ಯೇಕ ಗ್ರಾಮಪಂಚಾಯಿತಿ, ಸಹಕಾರಿ ಸಂಘ, ದೂರವಾಣಿ ಕೇಂದ್ರ ಇತ್ಯಾದಿ ಇತ್ಯಾದಿ. ಕೊಡಗಿನ ಪಶ್ಚಿಮ ಇಳಿಜಾರು ಕರಿಕೆ, ಪೆರಾಜೆ, ಚೆಂಬು ಮೊದಲಾದ ಗ್ರಾಮಗಳಲ್ಲಿ ಕಾಫಿ ಬೆಳೆಯುವುದಿಲ್ಲ. ಅಡಿಕೆ, ತೆಂಗು, ಆಚಾರ-ವಿಚಾರಗಳಿಂದ ದಕ್ಷಿಣ ಕನ್ನಡ ಜಿಲ್ಲೆಯನ್ನು ಹೋಲುತ್ತವೆ. ಕೊಡಗಿನ ಸುಮಾರು ಮೂರನೇ ಒಂದು ಭಾಗ ಸಾಂಸ್ಕೃತಿಕವಾಗಿ ದಕ್ಷಿಣ ಕನ್ನಡಕ್ಕೆ ಸೇರಬೇಕು ಅನ್ನಿಸುವಂತಿದೆ. ಕೊಡಗಿನವರು ನಮ್ಮನ್ನು ಕನ್ನಡ ಜಿಲ್ಲೆಯವರೆನ್ನುವುದು ನಾವು ಸಂತೋಷದಿಂದ ಒಪ್ಪಿಕೊಳ್ಳುವುದು ವಾಸ್ತವವಾಗಿ ನಡೆದುಬಂದಿದೆ. ಬೇರೆ ಬೇರೆ ಆಡಳಿತಗಳಲ್ಲಿದ್ದು ಕೊನೆಗೆ ನಾವು ಅನಗತ್ಯವಾಗಿ ಕೊಡಗಿಗೆ ಸೇರಿಸಲ್ಪಟ್ಟಿದ್ದೇವೆ.

ಒಂದು ರೀತಿಯಲ್ಲಿ ಕೊಡಗು ನನ್ನ ಬಾಲ್ಯದಿಂದಲೇ ಕುತೂಹಲ ಹುಟ್ಟಿಸಿತ್ತು. ಆಗ ದಕ್ಷಿಣ ಕನ್ನಡ ಜಿಲ್ಲೆಯವರಲ್ಲೂ, ಕೊಡಗಿನವರಲ್ಲೂ ಅಜಗಜ ವ್ಯತ್ಯಾಸ ಇತ್ತು. ಹ್ಯಾಟ್, ಬೂಟು, ಸೂಟು, ನಡೆ, ನುಡಿ- ಕೊಡಗಿನವರನ್ನು ಸುಲಭವಾಗಿ ಗುರುತಿಸಬಹುದಿತ್ತು. ಈ ಕಡೆ ಕರಾವಳಿಯ ಸರಳ ಉಡುಪು - ಶ್ರೀಮಂತರನ್ನು, ವಿದ್ಯಾವಂತರನ್ನು ಗುರುತಿಸುವುದೇ ಕಷ್ಟ! ಒಟ್ಟಿನಲ್ಲಿ ಕೊಡಗಿನ ಬಗ್ಗೆ ಎಲ್ಲರಿಗೂ ಒಂದು ರೀತಿಯ ಮೋಹಾಕರ್ಷಣೆ ಇತ್ತು. ನನ್ನ ಬಾಲ್ಯದಲ್ಲಿ 'ರಾಜೇಂದ್ರನಾಮೆ' ಓದಿ - ಮಹಾರಾಜ ಕಾಲೇಜಿನ ವಾರ್ಷಿಕ ಸಂಚಿಕೆಗೆ 'ದೊಡ್ಡ ವೀರರಾಜನ ಕೊನೆಯ ದಿನಗಳು' ಎಂಬ ಒಂದು ಚಾರಿತ್ರಿಕ ಕಥೆ ಬರೆದುಕೊಟ್ಟೆ. ಇದಕ್ಕೆ ಪ್ರೇರಣೆ ನಿರಂಜನರ 'ಕಲ್ಯಾಣಸ್ವಾಮಿ'. ನನ್ನ ಅಕ್ಷರ ಮುದ್ರಿಸಲ್ಪಟ್ಟಾಗ ಸಿಗುವ ಸಂತಸಕ್ಕೆ ಕಾರಣರಾದ ಗುರುಗಳು, ಸ್ನೇಹಿತರು ಪ್ರಥಮ ವಂದನೆಗೆ ಪಾತ್ರರು.

ನನ್ನ ರಾಜಕೀಯ ಪ್ರವೇಶ ಬರಹಕ್ಕೆ ಪೂರ್ಣವಿರಾಮ ಕೊಡಿಸಿತು. ಎಪ್ಪತ್ತರ ದಶಕದಲ್ಲಿ ಒಂದು ವಾರ ನಮ್ಮಲ್ಲಿ ಅತಿಥಿಯಾಗಿದ್ದ ಬೀಚಿಯವರು ನನ್ನನ್ನು ಸಾಂಸ್ಕೃತಿಕ ಪ್ರಪಂಚಕ್ಕೆ ಸೆಳೆಯರು ಕಾರಣರಾದರು. ತಾಲೂರು ಬೋರ್ಡು, ಭೂ ಅಭಿವೃದ್ಧಿ ಬ್ಯಾಂಕ್, ಲಯನ್ಸ್ ಕ್ಲಬ್ ಇವೆಲ್ಲ 'ಥ್ಯಾಂಕ್‌ಲೆಸ್ ಜಾಬ್'. ಏನಾದರೂ ಬರೆಯಿರಿ - ಹೀಗೆ

ಹೇಳುತ್ತಾ ದಶಕದ ಕೊನೆಯಲ್ಲಿ ಸಿನೆಮಾ ಮಾಡಲು ಪ್ರೇರೇಪಿಸಿದರು. ನಂತರ ನಾಟಕ ಬರೆದೆ, ನಿರ್ದೇಶಿಸಿದೆ. ಹೀಗೆ ಗೆಳೆಯರ ಬಳಗವೇ ಬದಲಾಯಿತು.

ನಾನು ತಾಲೂಕು ಬೋರ್ಡು ಸದಸ್ಯನಾಗಿದ್ದಾಗ - ಜಿಲ್ಲೆ ಪುನರ್ ವಿಂಗಡಣೆಗೆ ವಾಸುದೇವ ರಾವ್ ಸಮಿತಿ ಮಡಿಕೇರಿಗೆ ಬರಲಿತ್ತು. ಆಗ ಸಂಪಾಜೆಯಲ್ಲಿ ಪೋಲೀಸರಾಗಿದ್ದ ದಿ| ಕೊ. ಸ. ಕಾರ್ಯಪ್ಪ ಅವರ ವಿಷಯ ಸಂಗ್ರಹ ನನಗೆ ಕೊಟ್ಟರು. ಅವರ ಸಂಗ್ರಹ ನನಗೆ ಅಚ್ಚರಿ ತಂದಿತು. ಅವರೊಡನೆ ಚರ್ಚಿಸುತ್ತಾ ಕೊಡಗಿನ ಚರಿತ್ರೆಯನ್ನು ಹೊಸ ದೃಷ್ಟಿಕೋನದಿಂದ ನೋಡಲು ಸಾಧ್ಯವಾಯಿತು. ಬೀಚಿಯವರಂತೆ ದಿ| ಕೊ. ಸ. ಕಾರ್ಯಪ್ಪನವರೂ ಈ ಕೃತಿರಚನೆಗೆ ಕಾರಣರು.

ಡಾ. ಪುರುಷೋತ್ತಮ ಬಿಳಿಮಲೆಯವರು ಎಂಬತ್ತರ ದಶಕದಲ್ಲಿ ಪಿಹೆಚ್.ಡಿ. ಮಾಡುವ ಸಂದರ್ಭ ನನ್ನನ್ನು ಭೇಟಿಯಾದರು. ಹಾಗೆಯೇ ಡಾ. ತಂಬಂಡ ವಿಜಯ್ ಪೂಣಚ್ಚ ಮತ್ತು ಡಾ. ವಿಶ್ವನಾಥ ಬದಿಕಾನ. ಈ ಮೂವರು ನನ್ನಲ್ಲಿರುವ ಸಂಗ್ರಹದ ಬಗ್ಗೆ ಆಡಿದ ಪ್ರೋತ್ಸಾಹದಾಯಕ ಮಾತುಗಳು ನನ್ನನ್ನು ಕೆಲಸಕ್ಕೆ ಹಚ್ಚಿದುವು. ಡಾ. ಬಿಳಿಮಲೆ ಮತ್ತು ಡಾ. ಬದಿಕಾನ ಕ್ಷೇತ್ರಕಾರ್ಯಗಳಲ್ಲಿ ನನ್ನೊಡನೆ ಇದ್ದು ಸಹಕರಿಸಿದ್ದಾರೆ.

ಪ್ರೊ. ಕೋಡಿ ಕುಶಾಲಪ್ಪ ಗೌಡರು, ಡಾ. ಪ್ರಭಾಕರ ಶಿಶಿಲ ಮತ್ತು ಡಾ. ಕರುಣಾಕರ, ಕಳೆದೆರಡು ಮೂರು ವರ್ಷಗಳಿಂದ ನನ್ನಲ್ಲಿರುವ ವಿಚಾರಗಳನ್ನು ಬರಹರೂಪಕ್ಕೆ ಇಳಿಸುವಂತೆ ಮಾಡಿದವರು. ನನ್ನ ಬರಹಗಳನ್ನು ತಾಳ್ಮೆಯಿಂದ ಓದಿ, ಅದಕ್ಕೊಂದು ಆಕಾರ, ಚೌಕಟ್ಟು ಕೆಲವೊಮ್ಮೆ ಹೊಸ ಸ್ವರೂಪ ಸಿಗುವಂತೆ ಮಾಡಿ ಸಹಕರಿಸಿದ್ದಾರೆ. ಇವರು ತಮ್ಮ ಅಮೂಲ್ಯ ಸಮಯವನ್ನು ಈ ಕೃತಿಯ ನಿರ್ಮಾಣಕ್ಕೆ ಕೊಟ್ಟಿದ್ದಾರೆ. ಪ್ರೊ. ಕುಶಾಲಪ್ಪ ಗೌಡರು ಹೊತ್ತಗೆಗೆ ಮುನ್ನುಡಿಯನ್ನೂ ಬರೆದುಕೊಟ್ಟು ಹರಸಿದ್ದಾರೆ.

ಕಳೆದ ವರ್ಷ ಭಾರತ ಸ್ವಾತಂತ್ರ್ಯದ ಸ್ವರ್ಣಮಹೋತ್ಸವ ಆಚರಿಸಲ್ಪಟ್ಟಿತು. ಅಮರ ಸುಳ್ಯ ದಂಗೆಯ ಬಗ್ಗೆ ಸರಕಾರ ಸಂಪೂರ್ಣ ನಿರ್ಲಕ್ಷ್ಯದ ನಿಲುವು ತಾಳಿತು. ಜನಜಾಗೃತಿಗಾಗಿ ಅಮರಕ್ರಾಂತಿ ಉತ್ಸವ ಸಮಿತಿ ರಚಿಸಲ್ಪಟ್ಟಿತು. ಪ್ರಧಾನ ಕಾರ್ಯದರ್ಶಿ ಜನಾರ್ದನ ಕಣಕ್ಕೂರು, ಖಜಾಂಜಿ ಕುಕ್ಕೇಟಿ ಮಾಧವ ಗೌಡ ಮತ್ತಿತರ ಪದಾಧಿಕಾರಿಗಳು ಸುಮಾರು ೩-೪ ತಿಂಗಳು ಸತತವಾಗಿ ದುಡಿಯಬೇಕಾಯಿತು. ಎಂ. ಬಿ. ಸದಾಶಿವ, ದಿನೇಶ್ ಮಡಪ್ಪಾಡಿ, ಶಿವಣ್ಣ ನೆಲಮನೆ, ಜವರೇಗೌಡ, ಸಂಜೀವ ಕುದ್ಪಾಜೆ, ಪೂವಪ್ಪ ಕಣಿಯೂರು, ಶಿಶಿಲ, ಹರಿಣಿ, ಶೈಲಿ ಪ್ರಭಾಕರ ಮೊದಲಾದವರು ಕಾಲ್ನಡಿಗೆ ಜಾಥಾವನ್ನು ಯಶಸ್ವಿಗೊಳಿಸಿದರು.

ಕಾಲ್ನಡಿಗೆ ಜಾಥಾ ಪುತ್ತೂರಿಗೆ ತಲಪಿದಾಗ ಬೋಳಂತಕೋಡಿ ಈಶ್ವರ ಭಟ್ಟರು ನನ್ನ ಸಂಗ್ರಹಕ್ಕೆ ಪ್ರಕಾಶಕರಾಗುವ ಆಶ್ವಾಸನೆ ಕೊಟ್ಟರು. ಅವರು ಮತ್ತು ಅವರ ಸ್ನೇಹಿತರ ಒತ್ತಾಸೆಯಿಂದ ಇದು ಪುಸ್ತಕರೂಪ ಪಡೆಯಿತು.

ಎಪ್ರಿಲ್ ಇರಂದು ಬಾವುಟಗುಡ್ಡದ ಸಂತ ಎಲೋಶಿಯಸ್ ಕಾಲೇಜಿನ ಆವರಣದಲ್ಲಿ ಧ್ವಜಾರೋಹಣಕ್ಕೆ ಅವಕಾಶ ಕಲ್ಪಿಸಿದವರು - ಪ್ರಾಂಶುಪಾಲ ರೆ. ಫಾ. ಪ್ರಶಾಂತ್ ಮಾಡ್ತ ಮತ್ತು ಡಾ. ನಾ. ದಾಮೋದರ ಶೆಟ್ಟಿ.

ಸಭೆಯಲ್ಲಿ ಭಾಗವಹಿಸಿ ಪ್ರೋತ್ಸಾಹಿಸಿದವರು - ಮಾಜಿ ಮುಖ್ಯಮಂತ್ರಿ ವೀರಪ್ಪ ಮೊಯಿಲಿ, ಉಸ್ತುವಾರಿ ಮಂತ್ರಿ ಮೊಹೀದ್ದಿನ್, ಮಾಜಿ ಮಂತ್ರಿ ಬ್ಲೇಸಿಯಸ್ ಡಿ'ಸೋಜ, ಶಾಸಕರಾದ ಕುಂಬ್ಳೆ ಸುಂದರ ರಾವ್, ಅಭಯಚಂದ್ರ, ವಿನಯಚಂದ್ರ ಮೊದಲಾದವರು.

**ಎರಡನೇ ಮುದ್ರಣ**

ಎರಡನೇ ಮುದ್ರಣ ಪ್ರತಿಗಳು ಮುಗಿದು ಕೆಲವು ವರ್ಷಗಳೇ ಕಳೆದುಹೋದುವು. ಸ್ನೇಹಿತರ ಪ್ರೋತ್ಸಾಹದ ಮಾತುಗಳಿಂದ ಮತ್ತೆ ಪುನರ್ ಮುದ್ರಣದ ಸಾಹಸಕ್ಕೆ ಇಳಿದಿದ್ದೇವೆ. ದಿ| ಬೊಳಂತಕೋಡಿ ಈಶ್ವರಭಟ್ಟರು ನನ್ನಂತಹ ಬರಹಗಾರನಿಗೆ ನಷ್ಟವಾಗದಂತೆ ನೋಡಿಕೊಂಡಿದ್ದಲ್ಲದೆ, ಹತ್ತು ಶೇಕಡಾ ಲಾಭಾಂಶವನ್ನು ಕೊಟ್ಟಿದ್ದಾರೆ. ಅವರನ್ನು ಭಾಷ್ಪಾಂಜಲಿಯೊಂದಿಗೆ ನೆನಪಿಸಿಕೊಳ್ಳುತ್ತಿದ್ದೇನೆ.

ಸುಂದರ ಮುಖಚಿತ್ರ ನೀಡಿದ ಕಲಾವಿದ ಮೋಹನ ಸೋನ, ಶೀರ್ಷಿಕೆ ನೀಡಿದ ಕಲಾವಿದ ಗೋಪಾಡ್ಕಾರ್, ಬೀದಿ ನಾಟಕದ ಜೀವನ್‌ರಾಂ, ಸಂಗಡಿಗ ಕಲಾವಿದರು, ಶ್ರೀ ಕಿಶೋರ್ ಕೊಡಗಿನ ನಕಾಶೆಯನ್ನು ಪರಿಷ್ಕರಿಸಿ ಕೊಟ್ಟಿದ್ದಾರೆ. ಇವರಿಗೂ, ಅಂದವಾಗಿ ಅಕ್ಷರ ಜೋಡಿಸಿದ ಪ್ರಸಾಧನ್ ಕಂಪ್ಯೂಟರ್ಸ್, ಬಿಜೈ, ಮಂಗಳೂರು ಹಾಗೂ ಸುಂದರವಾಗಿ ಮುದ್ರಿಸಿದ ಪ್ರಕಾಶ್ ಆಫ್‌ಸೆಟ್ ಪ್ರಿಂಟರ್ಸ್, ಬೈಕಂಪಾಡಿ, ಮಂಗಳೂರು - ಇವರಿಗೂ ವಂದನೆಗಳು.

**- ಎನ್. ಎಸ್. ದೇವಿಪ್ರಸಾದ್ ಸಂಪಾಜೆ**

ಸಂಜಯ್ಯನ ಮನೆ
ಸಂಪಾಜೆ
05/04/2005

## ಅರ್ಪಣೆ

'ಕಾಟಕಾಯಿ' ಎಂದು ಕರೆಯಲ್ಪಡುತ್ತಿದ್ದ

ಅಮರ ಸುಳ್ಯದ ರೈತರ ಹೋರಾಟವನ್ನು

ತಮ್ಮ 'ಸ್ವಾಮಿ ಅಪರಂಪಾರ' ಮತ್ತು 'ಕಲ್ಯಾಣಸ್ವಾಮಿ '

ಕಾದಂಬರಿಗಳ ಮೂಲಕ ಬ್ರಿಟಿಷರ ವಿರುದ್ಧ ನಡೆದ

ಸ್ವಾತಂತ್ರ್ಯ ಸಂಗ್ರಾಮವೆಂದು ಚಿತ್ರಿಸಿ ನಾಡಿನ ಗಮನಸೆಳೆದಿದ್ದ,

ಇಂದು ಬದುಕಿದ್ದರೆ ೭೫ ತುಂಬುತ್ತಿದ್ದ,

ಅಮರ ಸುಳ್ಯದವರೇ ಆದ,

ಪ್ರಸಿದ್ಧ ಪ್ರಗತಿಶೀಲ ಸಾಹಿತಿ

ನಿರಂಜನರ ನೆನಪಿಗೆ



# ಅನುಕ್ರಮಣಿಕೆ

# ೧. ಪ್ರಸ್ತಾವನೆ

ಪ್ರತಿಯೊಂದು ಸಮುದಾಯಕ್ಕೂ ಅವರದ್ದೇ ಆದ ಒಂದು ವಿಶಿಷ್ಟ ಚರಿತ್ರೆ ಇರುತ್ತದೆ. ಜಾತಿಗಳ, ಧರ್ಮಗಳ ವೈವಿಧ್ಯವನ್ನು ಮೀರಿ ಸಾಮೂಹಿಕವಾಗುವ ಚರಿತ್ರೆಯೂ ಒಂದು ಸಮುದಾಯಕ್ಕೆ ಇರುತ್ತದೆ. ಈ ಎಲ್ಲಾ ನೆಲೆಯ ಚರಿತ್ರೆಯ ಪರಿಜ್ಞಾನ ಸಮುದಾಯದ ಎಲ್ಲ ಸದಸ್ಯರಿಗೆ ತಿಳಿಯಬೇಕಾದ ಅಗತ್ಯ ಇದೆ. ಆಧುನಿಕ ಬದುಕಿನ ಅನೇಕ ಸಮಸ್ಯೆಗಳಿಗೆ ಆ ಚರಿತ್ರೆಯಲ್ಲಿ ಕಾರಣಗಳೋ, ಪರಿಹಾರಗಳೋ ಇರುವುದರ ಜೊತೆಗೆ ವರ್ತಮಾನದ ಬದುಕಿಗೆ ಸ್ಫೂರ್ತಿಯನ್ನೂ, ವ್ಯಕ್ತಿತ್ವಕ್ಕೆ ಸಂಸ್ಕಾರವನ್ನೂ ಕೊಡಬಲ್ಲಂತಹ ಸಾಮರ್ಥ್ಯವೂ ಇರುತ್ತದೆ. ಈ ಎಲ್ಲಾ ಕಾರಣಗಳಿಗಾಗಿ ನಮ್ಮದೇ ಚರಿತ್ರೆಯ ಕುರಿತಾದ ವಿವರಗಳನ್ನು ಮುಂದಿನ ತಲೆಮಾರುಗಳಿಗೆ ತಲುಪಿಸುವುದು ಎಷ್ಟು ಅಗತ್ಯವೋ, ಪ್ರಸ್ತುತ ಲಭ್ಯವಿರುವ ಸಾಕ್ಷ್ಯಾಧಾರಗಳನ್ನು ಕ್ರೋಢೀಕರಿಸಿ, ಶುದ್ಧ ಸಂಶೋಧನಾತ್ಮಕ ದೃಷ್ಟಿಕೋನದಿಂದ ಅವುಗಳನ್ನು ಪರಿಷ್ಕರಿಸಿ ಸರಿಯಾದ ಚರಿತ್ರೆಯೊಂದನ್ನು ನಿರ್ಣಯಿಸಿಕೊಡಬೇಕಾದ್ದು ಇಂದಿನ ನಮ್ಮ ಜವಾಬ್ದಾರಿಯಾಗಿದೆ.

ಯಾವುದೇ ಪೂರ್ವಗ್ರಹಗಳಿಲ್ಲದೆ ನಮ್ಮದೇ ಚರಿತ್ರೆಯ ಒಂದು ತುಣುಕನ್ನು ಪುನರ್ ನಿರ್ಮಿಸುವ ಮತ್ತು ಅದರ ಕುರಿತಾದ ಅರಿವನ್ನು ಜನರಲ್ಲಿ ಮೂಡಿಸುವ ಒಂದು ಪ್ರಯತ್ನದ ಆಂಶಿಕ ಅಗತ್ಯವನ್ನು ಪೂರೈಸುವುದು ಈ ಬರಹದ - ಅಮರಕ್ರಾಂತಿ ಉತ್ಸವದ - ಕಾಲ್ನಡಿಗೆ ಜಾಥಾದ ಉದ್ದೇಶಗಳಾಗಿವೆ.

**ಕ್ರಾಂತಿಯ ಕಿಡಿ:** ಪ್ರಸ್ತುತ ಈ ಬರಹದಲ್ಲಿ ಚರ್ಚೆಗೊಳಗಾಗುವ ವಿಷಯ, ಇಂದಿಗೆ ಸುಮಾರು ಒಂದುವರೆ ಶತಮಾನದ ಹಿಂದೆ ಕೊಡಗು ಮತ್ತು ಸುಳ್ಯ, ಪುತ್ತೂರು ಪ್ರದೇಶಗಳೂ ಸೇರಿದ್ದ ಆಗಿನ ಬಂಟ್ವಾಳ ತಾಲೂಕಿನಲ್ಲಿ ಬ್ರಿಟಿಷರ ವಿರುದ್ಧ ನಡೆದ ಬಂಡಾಯ. ಇದನ್ನು ಬ್ರಿಟಿಷರ ದಾಖಲೆಗಳು "ಕೊಡಗು, ಕೆನರಾ ಬಂಡಾಯ" (Coorg, Canara Insurrection) ಎಂದು ಗುರುತಿಸುತ್ತವೆ. ವಾಸ್ತವವಾಗಿ ಅದು ಸ್ವಾತಂತ್ರ್ಯ ಸಂಗ್ರಾಮದ ಆರಂಭಿಕ ಕಿಡಿಯೇ ಆಗಿದೆ.

ಈ ಬಂಡಾಯವನ್ನು ಹತ್ತಿಕ್ಕಲು ಬ್ರಿಟಿಷ್ ಸರಕಾರದೊಂದಿಗೆ ದೇಶೀಯ ಪಿತೂರಿಗಾರರು ಕೆಲಸ ಮಾಡಿದ್ದಾರೆ. ವಾಸ್ತವವಾಗಿ ದೇಶೀಯ ಪಿತೂರಿಗಾರರ ನೆರವಿಲ್ಲದೆ ಇದ್ದಿದ್ದರೆ ಈ ಹೋರಾಟಗಾರರನ್ನು ಹಿಡಿಯುವುದು ಬ್ರಿಟಿಷರಿಗೆ ಅಸಾಧ್ಯದ ಮಾತಾಗಿತ್ತು. ಪಿತೂರಿಗಾರರ ನೆರವಿದ್ದಾಗಲೂ ಹೋರಾಟಗಾರರ ಮುಖಂಡರಲ್ಲಿ ಅನೇಕರನ್ನು ಹಿಡಿಯುವುದು ಕೊನೆಯವರೆಗೂ ಬ್ರಿಟಿಷರಿಗೆ ಸಾಧ್ಯವಾಗಲಿಲ್ಲವೆಂಬ ವಿವರ ಮೇಲಿನ ಮಾತನ್ನು ಪುಷ್ಟೀಕರಿಸುತ್ತದೆ. ಇಲ್ಲಿಯ ಜನ ಈ ಮುಖಂಡರನ್ನು ಹಿಡಿಯಲು ಆಸ್ಪದ ಕೊಡಲಿಲ್ಲವೆಂಬುದು ಸ್ಪಷ್ಟ.

ಮುಂದೆ ಬ್ರಿಟಿಷರ ಪರವಾಗಿದ್ದ ದೇಶೀಯ ಪಿತೂರಿಗಾರರು ಬ್ರಿಟಿಷರಿಗೆ ವಿರೋಧಿಗಳಾದವರನ್ನು ದೇಶದ್ರೋಹಿಗಳು, ಬಂಡಾಯಗಾರರು, ದರೋಡೆಕೋರರು ಎಂಬ ಅಭಿಪ್ರಾಯವನ್ನು ಜನಸಾಮಾನ್ಯರಲ್ಲಿ ಮೂಡಿಸುವ ಪ್ರಯತ್ನಕ್ಕೆ ಇಳಿದರು. ಶೀನಪ್ಪ ಹೆಗ್ಡೆಯವರ "ದಕ್ಷಿಣ ಕನ್ನಡ ಜಿಲ್ಲೆಯ ಚರಿತ್ರೆ"ಯಲ್ಲಿ "೧೮೩೭ರಲ್ಲಿ ಕೊಡಗಿನ ಕಲ್ಯಾಣಪ್ಪನೆಂಬವನು ಕೆಲವು ಸೈನ್ಯಗಳ ಸಮೇತ ಪುತ್ತೂರನ್ನು ಕೊಳ್ಳೆ ಹೊಡೆದು, ಮಂಗಳೂರಿಗೆ ಬಂದು ಜೈಲನ್ನು ಮುರಿದನು. ಆಗ ಕರಣಿಕ ದೇವಪ್ಪನವರು ಮಾಡಿದ ಸಾಹಸವು ಚಿರಸ್ಮರಣೀಯವಾದದ್ದು, ಅಲ್ಲದೆ ಕಲ್ಯಾಣಪ್ಪನನ್ನು ಹಿಡಿದು ದೇಹದಂಡನೆ ಶಿಕ್ಷೆಯನ್ನು ವಿಧಿಸಿದರು.... ಬ್ರಿಟಿಷರ ಆಳ್ವಿಕೆಯಲ್ಲಿ ಪ್ರಜೆಗಳಿಗಾಗಿರುವ ಆನಂದವೂ, ಸುಖವೂ, ನ್ಯಾಯ ದಕ್ಷತೆಯೂ ಇನ್ನಾವ ಯುಗದಲ್ಲಿಯೂ ಇರಲಿಲ್ಲವೆಂದು ಇತಿಹಾಸಗಳಿಂದ ತಿಳಿಯಬಹುದು" ಎಂದು ಬರೆಯಲಾಗಿದೆ. "ಕಲ್ಯಾಣಪ್ಪನ ಕಾಟಕಾಯಿ" ಎಂಬ ಯಕ್ಷಗಾನ ಪ್ರಸಂಗದ ಹೆಸರೇ ಸೂಚಿಸುವಂತೆ ಅದು ಬ್ರಿಟಿಷರನ್ನು ಸಂತೋಷಪಡಿಸಲು ತಯಾರಾದಂತೆ ಕಂಡುಬರುತ್ತದೆ. ರಾಮಪ್ಪಯ್ಯನನ್ನು ಖಳನಾಯಕನಾಗಿಸಿದ್ದು, ಹೋರಾಟಗಾರರನ್ನು ಕೊತ್ತಳಿಗೆಯ ಭಟರನ್ನಾಗಿ ವರ್ಣಿಸಿದ್ದು ಈ ಸಂಶಯಕ್ಕೆ ಪೂರಕವಾಗಿದೆ.

**ಇತಿಹಾಸಕಾರರ ನಿರ್ಲಕ್ಷ್ಯ :** ೧೮೫೭ರಲ್ಲಿ ನಡೆದ ಸಿಪಾಯಿದಂಗೆ ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮಕ್ಕೆ (ಬ್ರಿಟಿಷ್ ದಾಖಲೆಗಳ ಪ್ರಕಾರ) ಸರಿಯಾಗಿ ೨೦ ವರ್ಷಗಳ ಮೊದಲು ನಡೆದ ಈ ಬಂಡಾಯವು ಕೇವಲ ಕೊಡಗು ಕೆನರಾ ಪ್ರದೇಶದ ಕಗ್ಗಾಡಿನ ಗ್ರಾಮ ಪರಿಸರದ ಚಟುವಟಿಕೆ ಆಗಿರದೆ, ಸಿಪಾಯಿದಂಗೆಯ ಬೀಜ ಸ್ವರೂಪದ್ದಾಗಿತ್ತು; ರಾಷ್ಟ್ರವ್ಯಾಪ್ತಿಯದಾಗಿತ್ತು ಎಂಬುದು ಅನೇಕರಿಗೆ ಈಗಲೂ ಗೊತ್ತಿಲ್ಲ. ದಂಗೆಯ ಮುಖಂಡರಲ್ಲಿ ಒಬ್ಬನಾದ ಹುಲಿಕಡಿದ ನಂಜಯ್ಯನು ಮೈಸೂರು, ಹೈದರಾಬಾದ್, ದೆಹಲಿ, ಲಾಹೋರ್ ಮತ್ತು ತಿರುಚಿನಾಪಳ್ಳಿಗಳಲ್ಲಿ ಸಂಪರ್ಕವಿರಿಸಿ ಕೊಂಡಿದ್ದನೆಂಬುದು ೧೯೯೩ರಲ್ಲಿ ಕರ್ನಾಟಕ ಸರಕಾರ ಪ್ರಕಟಿಸಿದ ಕನ್ನಡ ಗ್ಯಾಸೆಟಿಯರ್‌ನಲ್ಲಿ ಕೂಡಾ ಕಾಣಿಸಿಕೊಂಡಿಲ್ಲ. ೧೯೫೭ರಲ್ಲಿ ಮೈಸೂರು ಸರಕಾರ

ಪ್ರಕಟಿಸಿದ "ಕರ್ನಾಟಕದಲ್ಲಿ ಸ್ವಾತಂತ್ರ್ಯ ಸಂಗ್ರಾಮ"ದಲ್ಲಿರುವುದನ್ನು ಕೈಬಿಟ್ಟು ಯಕ್ಷಗಾನ ಪ್ರಸಂಗಕ್ಕೆ ಮೊರೆಹೋಗುವುದು ಇತಿಹಾಸಕ್ಕೆ ಮಾಡಿದ ವಂಚನೆ ಎನಿಸುತ್ತದೆ.

ಬ್ರಿಟಿಷ್ ಸರಕಾರವು ದಂಗೆಯನ್ನು ಹತ್ತಿಕ್ಕಲು ಕೈಗೊಂಡ ಗಂಭೀರ ಕ್ರಮಗಳು ದಂಗೆಯ ಅನಂತರದ ಕೈದಿಗಳ ವಿವರವಾದ ವಿಚಾರಣೆಗಳು, ದಂಗೆಯ ಒಟ್ಟು ಚಟುವಟಿಕೆಗಳಿಗೆ ಸಂಬಂಧಿಸಿದಂತೆ ತಯಾರಿಸಿದ ಲೆವಿನ್, ಕಾಟನ್ ಮತ್ತು ಕಬ್ಬನ್ ವರದಿಗಳನ್ನು ಇತಿಹಾಸಕಾರರು ಯಾಕಾಗಿ ನಿರ್ಲಕ್ಷಿಸಿದ್ದಾರೆ ಎಂಬುದು ಅನೇಕ ಗುಮಾನಿಗಳಿಗೆ ಕಾರಣವಾಗಿದೆ. ಈ ಘಟನೆಯ ಬಗ್ಗೆ ಕಳಕಳಿ ಇದ್ದಂತಹ, ಈ ಪ್ರದೇಶದಲ್ಲಿ ಹುಟ್ಟಿ ಬೆಳೆದ ಪ್ರಮುಖ ಕಾದಂಬರಿಕಾರರಾದ ನಿರಂಜನರಿಗೆ ಈ ಸಾಮಗ್ರಿಗಳು ಲಭ್ಯವಿರಲಿಲ್ಲ. ತಿ. ತಾ. ಶರ್ಮರು ಇವುಗಳನ್ನು ಪ್ರಕಟಿಸುವ ಒಂದು ವರ್ಷ ಮೊದಲೇ ಐತಿಹ್ಯ ಪ್ರಧಾನವಾದ ಯಕ್ಷಗಾನ ಪ್ರಸಂಗದ ಆಧಾರದಲ್ಲಿ 'ಕಲ್ಯಾಣಸ್ವಾಮಿ' ಐತಿಹಾಸಿಕ ಕಾದಂಬರಿಯನ್ನು ರಚಿಸಿ ಬಿಡುಗಡೆಗೊಳಿಸಿದ್ದರೂ ಕಾದಂಬರಿಯ ಹಿನ್ನುಡಿಯಲ್ಲಿ ಅವರು ಬರೆದಿರುವ ಈ ಮಾತುಗಳು ಬಹಳ ಮುಖ್ಯವಾದವುಗಳು. "ಇದು ಪ್ರಾದೇಶಿಕ ಕತೆಯಾದರೂ ರಾಷ್ಟ್ರೀಯ ವ್ಯಾಪ್ತಿಯುಳ್ಳದ್ದು.... ಕಲ್ಯಾಣಸ್ವಾಮಿ ಕಾದಂಬರಿಯನ್ನು ಬರೆಯಲು ಹೊರಟಾಗ ನಾನು ಇದಿರಿಸಬೇಕಾದ ಎಡರು-ತೊಡರುಗಳ ಪೂರ್ಣ ಕಲ್ಪನೆ ನನಗೆ ಇರಲೇ ಇಲ್ಲ. ನನಗಿದ್ದ ತಿಳುವಳಿಕೆಯ ಆಧಾರದ ಮೇಲೆಯೇ ವಿಷಯ ಸಂಗ್ರಹಕ್ಕೆ ಕೈಹಾಕಿದಾಗ, ಇದು ಪುಷ್ಪೋದ್ಯಾನದ ವಿಹಾರವಲ್ಲ ಎಂಬುದು ಮನವರಿಕೆಯಾಯಿತು." ಈ ಮಾತಿನಿಂದ ಕೊಡಗು ಕೆನರಾ ಬಂಡಾಯದ ವ್ಯಾಪಕತೆ, ಗಂಭೀರ ಸ್ವರೂಪವು ತೀರಾ ಮಹತ್ವದ್ದು ಎನ್ನುವುದು ಸ್ಪಷ್ಟವಾಗುತ್ತದೆ.

ಇಂದು ಕೊಡಗು ಕೆನರಾ ಬಂಡಾಯವಾಗಲಿ, ಕಲ್ಯಾಣಪ್ಪನ ಕಾಟಕಾಯಿಯಾಗಲಿ, ಮೊದಲ ಸ್ವಾತಂತ್ರ್ಯ ಸಂಗ್ರಾಮದ ಬೀಜವೇ ಆಗಲಿ ಇದರಲ್ಲಿ ಕಲ್ಯಾಣಸ್ವಾಮಿ, ಸ್ವಾಮಿ ಅಪರಂಪಾರ ಎಂಬಂತಹ ಕೃತಿಗಳೇ ಆಗಲಿ ಸಮಾಜದ ಬಹುಸಂಖ್ಯಾತರಿಗೆ ಗೊತ್ತಿಲ್ಲದಿದ್ದರೆ, ಈಗಲೂ ಕೂಡಾ ಸುಳ್ಯ, ಪುತ್ತೂರು ಪ್ರದೇಶದ ಜನ ಕಲ್ಯಾಣಪ್ಪನೆಂಬ ದರೋಡೆಗಾರನಿಗೆ ಸಹಾಯ ಮಾಡಿದವರ ಸಂತತಿಯವರೆಂಬ ಭಾವನೆ ಉಳಿದುಕೊಳ್ಳುತ್ತದೆ. ಇದಕ್ಕೆ ಕಾರಣ ನಮ್ಮದಾದ ಚರಿತ್ರೆಯ ನೈಜ ವಿವರಗಳನ್ನು ತಿಳಿದುಕೊಳ್ಳುವ ನಮ್ಮ ಆಸಕ್ತಿಯ ಕೊರತೆ ಅಥವಾ ಪಾಶ್ಚಾತ್ಯ ಚಿಂತನ ವಿಧಾನಕ್ಕೆ ಶರಣು ಹೊಡೆದ ಆಧುನಿಕ ಬೌದ್ಧಿಕ ಮೌಢ್ಯಗಳೇ ಎಂಬುದನ್ನು ಒಪ್ಪಿಕೊಳ್ಳಬೇಕಾಗುತ್ತದೆ.

ಹೀಗೆನ್ನುವಾಗ ಬ್ರಿಟಿಷರ ಆಳ್ವಿಕೆಯ ಒಳಿತು ಕೆಡುಕುಗಳ ಕುರಿತು ಚರ್ಚೆಯಾಗಲಿ, ಬ್ರಿಟಿಷರೆಂಬ ಆಕ್ರಮಣಕಾರರ ಕುರಿತು ಪ್ರತೀಕಾರ ಮನೋಭಾವವನ್ನು ಮತ್ತೆ ಜಾಗೃತಗೊಳಿಸುವುದಾಗಲಿ, ಈ ಬರಹದ ಉದ್ದೇಶ ಖಂಡಿತಾ ಅಲ್ಲ. ಬರಹದ

ವ್ಯಾಪ್ತಿಯಿಂದ ಆ ವಿಷಯಗಳು ತೀರಾ ಹೊರತಾದವುಗಳಾದ ಕಾರಣ ಇಲ್ಲಿ ಅದು ಅಪ್ರಸ್ತುತವೂ ಹೌದು. ಈ ಎರಡೂ ಭಾವನೆಗಳಿಂದ ಮುಕ್ತವಾದ, ಇಂದಿನ ಆವಶ್ಯಕತೆಯಾದ ರಾಷ್ಟ್ರಪ್ರೇಮದ ನೆಲೆಯಿಂದ ಈ ನೆಲದ ಜನ ತಮ್ಮ ಹಕ್ಕುಗಳಿಗಾಗಿ, ಬದುಕಿನ ಅವಕಾಶಗಳಿಗಾಗಿ, ಎಲ್ಲಕ್ಕೂ ಮಿಗಿಲಾಗಿ, ಸ್ವಾತಂತ್ರ್ಯಕ್ಕಾಗಿ ಹೋರಾಡಿ ಪ್ರಾಣತೆತ್ತು ಚರಿತ್ರೆಯನ್ನು ನಿರ್ಮಿಸಿದ ವಿವರಗಳನ್ನು ಮತ್ತೆ ಎಲ್ಲರ ಸ್ಮರಣೆಯಲ್ಲಿ ಉಳಿಸುವುದು ನಮ್ಮ ಉದ್ದೇಶ.

**ಸಾಮುದಾಯಿಕ ಬಂಡಾಯ:** ವಾಸ್ತವವಾಗಿ ಈ ಹೋರಾಟ ಯಾವುದೇ ಒಂದು ಜಾತಿಯ, ಜಾಗದ ಚಟುವಟಿಕೆ ಅಲ್ಲ ಎಂಬ ಅರಿವನ್ನು ಮೂಡಿಸುವುದು, ಜಾತಿರೋಗಗ್ರಸ್ತವಾದ ಇಂದಿನ ಸಾರ್ವಜನಿಕ ಸಂದರ್ಭದಲ್ಲಿ ಅತ್ಯಂತ ಮಹತ್ವದ ಜವಾಬ್ದಾರಿಯ ವಿಷಯವಾಗಿದೆ. ಕೊಡಗು ಕೆನರಾ ಬಂಡಾಯದ ಸೈನ್ಯದಲ್ಲಿ ಸೇರಿಕೊಂಡವರಲ್ಲಿ ಲಿಂಗಾಯುತರು, ವಕ್ಕಲಿಗರು, ಜೈನರು, ಬಂಟರು, ಬ್ರಾಹ್ಮಣರು, ಮುಸಲ್ಮಾನರು ಸೇರಿದಂತೆ ವಿವಿಧ ಜಾತಿಗಳ ಜನರಿದ್ದರೆಂಬುದು ಈ ಬಂಡಾಯವನ್ನೊಂದು ಸಾಮುದಾಯಿಕ ವಿದ್ಯಮಾನವನ್ನಾಗಿಸುತ್ತದೆ ಮಾತ್ರವಲ್ಲ ಜಾತಿ ತಾರತಮ್ಯದಂತಹ ಸಮಸ್ಯೆಯ ನಡುವೆಯೂ, ಸಮಾನ ಉದ್ದೇಶದ ಸಂದರ್ಭದಲ್ಲಿ ಈ ಅಂತರಗಳನ್ನು ಮೀರಿ ಜನ ಹೋರಾಟಕ್ಕೆ ಒಟ್ಟಾದುದು ತೀರಾ ಸಾಂಕೇತಿಕವೂ, ಅನುಕರಣೀಯವೂ ಹೌದು. ರಿಕ್ತರ್‌ನು ಇದನ್ನು ಗೌಡರ ಮೇಲ್ಬೀಳುವಿಕೆಯೆಂಬುದಾಗಿ ಗುರುತಿಸುವುದರ ಮೂಲಕ ಇತಿಹಾಸ ಓದುಗರನ್ನು ದಾರಿ ತಪ್ಪಿಸಿದ್ದಾನೆ. ಕೊಡಗು ಕೆನರಾ ಬಂಡಾಯದ ಕಾರಣಗಳನ್ನು ವಿಶ್ಲೇಷಿಸುವ ಸಂದರ್ಭದಲ್ಲಿ ಈ ಸಮಾನ ಉದ್ದೇಶದ ಕುರಿತು ವಿವರವಾದ ಚರ್ಚೆಯು ಇಡೀ ಬಂಡಾಯದ ಉದ್ದೇಶ, ಪ್ರೇರಣೆಗಳ ಬಗ್ಗೆ ಹೊಸದೊಂದು ತಿರುವು ಪಡೆಯುವ ಸಾಧ್ಯತೆಯಿದೆ.

**ಇಂದಿನ ಅಗತ್ಯ:** ಇಂಗ್ಲೀಷರನ್ನು ಅಟ್ಟಿ, ಬಂಧಮುಕ್ತರಾದ ಹೋರಾಟಗಾರರ ಸಾಹಸ ಅಲ್ಪಕಾಲಿಕವಾದದ್ದಾದರೂ ಪರಿಣಾಮ ಚಿರಕಾಲದ್ದು - ಎಂದೇ ಈ ಹೋರಾಟಗಾರರಿಗೆ, ಬಲಿದಾನದ ಭಾಗಿಗಳಿಗೆ ಸಲ್ಲಬೇಕಾದ ಗೌರವಗಳು ಇಂದು ಸಲ್ಲಬೇಕಾದುದು ತೀರಾ ಅಗತ್ಯವಾಗಿದೆ. ಗಲ್ಲಿಗೇರಿಸಲ್ಪಟ್ಟ ಪ್ರಮುಖರಲ್ಲಿ ಒಬ್ಬರಾದ ಗುಡ್ಡೆಮನೆ ಅಪ್ಪಯ್ಯ ಗೌಡರ ಹೆಸರನ್ನು ಮಡಿಕೇರಿಯ ಮುಖ್ಯ ರಸ್ತೆಯೊಂದಕ್ಕೆ ಕೊಟ್ಟಿರುವುದು ಇಲ್ಲಿ ಉಲ್ಲೇಖನೀಯ.

ರಸ್ತೆಗೆ ಹೆಸರು ಕೊಟ್ಟ ಮಾತ್ರಕ್ಕೆ, ಕಂಬ ನೆಟ್ಟ ಮಾತ್ರಕ್ಕೆ ಎಲ್ಲವೂ ಸಾಧಿತವಾಯಿತೆಂಬುದು ಇದರರ್ಥವಲ್ಲ. ಹೋರಾಟಗಾರರ ಕುರಿತು ವಿವರವಾದ ಅಧ್ಯಯನ ನಡೆಯಬೇಕು. ಆ ಕುರಿತು ಬರಹಗಳು ಎಳೆಯರಿಗೆ, ಹಿರಿಯರಿಗೆ,

ಜನಸಾಮಾನ್ಯರಿಗೆ ಲಭ್ಯವಾಗಬೇಕು. ಇಡೀ ಬಂಡಾಯದ ಕುರಿತ ಬ್ರಿಟಿಷ್ ಕಲೆಕ್ಟರರ ವರದಿಗಳು, ವಿಚಾರಣಾ ವಿವರಗಳು, ಕಡತಗಳಲ್ಲಿ ಚೆನ್ನೈಯ ಸರಕಾರೀ ಪತ್ರಾಗಾರದಲ್ಲಿ ಸಾವಿರಾರು ಪುಟಗಳಲ್ಲಿ ಸಂಗ್ರಹಿತವಾಗಿರುವವುಗಳ ಅಧ್ಯಯನ ನಡೆಯುವುದು ಮಾತ್ರವಲ್ಲ, ಆ ಎಲ್ಲ ಸಾಕ್ಷ್ಯಾಧಾರಗಳ ತುಲನೆಗಳ ಮೂಲಕ ನೈಜ ಹೋರಾಟದ ಚಿತ್ರಣವನ್ನು ಕಂಡುಕೊಳ್ಳಬೇಕಾದದ್ದೂ ಇಂದಿನ ಅಗತ್ಯವಾಗಿದೆ.

ಬ್ರಿಟಿಷರ ವಿರುದ್ಧ ವಿವಿಧ ಕಾರಣಗಳಿಂದಾಗಿ ಹೋರಾಟ ಮಾಡಿದ ಕೆಲವರನ್ನು ವಿದ್ರೋಹಿಗಳೆಂದು ಚರಿತ್ರೆಯಲ್ಲಿ ದಾಖಲಿಸಲಾಗಿದೆ. ಈ ಘಟನೆಯ ನಂತರ ೧೧೦ ವರ್ಷಗಳ ಬ್ರಿಟಿಷರ ಆಳ್ವಿಕೆಯಲ್ಲಿ ಬ್ರಿಟಿಷ್ ಆಡಳಿತವನ್ನು ಬೆಂಬಲಿಸುವವರೆಲ್ಲ ಅಧಿಕಾರ, ಸ್ಥಾನ-ಮಾನ ಪಡೆದು ಕೊಂಡು ಸಮಾಜದ ಬಹುಸಂಖ್ಯಾತರಿಂದ ಭಿನ್ನವಾಗಿ ನಿಂತರು. ಶ್ರೀಮಂತರಾಗಿ, ವಿದ್ಯಾವಂತರೆನ್ನಿಸಿಕೊಂಡರು. ಬ್ರಿಟಿಷ್ ವಿರೋಧಿಗಳಿಗೆ, ಇಂದಿನ ಬದಲಾದ ಪರಿಸ್ಥಿತಿಯಲ್ಲಿ ಕೂಡಾ ಸಿಗಬೇಕಾದ ಸ್ಥಾನ-ಮಾನಗಳು ಸಿಗದೇ ಹೋಗುವುದಕ್ಕೆ ಇಂಥವರೇ ಕಾರಣವೆನ್ನಬೇಕಾಗುತ್ತದೆ.

ಅದೇನೇ ಇದ್ದರೂ, ಚರಿತ್ರೆಯನ್ನು ಯಾವುದೇ ಪೂರ್ವಗ್ರಹ ಇಟ್ಟುಕೊಳ್ಳದೆ ನೋಡುವಾಗ, ನಮ್ಮ ಹಿರಿಯರು ಬ್ರಿಟಿಷರನ್ನು ಬೆಂಬಲಿಸಿದ್ದರೆಂಬ ಒಂದೇ ಕಾರಣಕ್ಕೆ ನಾವು ವಂಶ ಪಾರಂಪರ್ಯವಾಗಿ ಬ್ರಿಟಿಷರ ಬೆಂಬಲಿಗರಾಗಬೇಕಾಗಿಲ್ಲ. ಅನೇಕರ ಹಿರಿಯರು, ಅನೇಕ ಸಂದರ್ಭ ಸನ್ನಿವೇಶಗಳಿಂದಾಗಿ ಇಂತಹದೊಂದು ಇರಿಸುಮುರಿಸಿನ ಸಂದರ್ಭಗಳಲ್ಲಿ ಸಿಲುಕಿ ದಾರಿ ತಪ್ಪಿರಬಹುದು. ಅವರು ತಪ್ಪುದಾರಿ ತುಳಿದರೂ ಕೂಡಾ ಅವರ ಸಂತತಿ ಹಿಂಜರಿಕೆ, ಪಾಪಪ್ರಜ್ಞೆಗಳಿಂದ ಮುಕ್ತರಾಗುವುದು ತೀರಾ ಅಗತ್ಯ. ಬದಲಾದ ಕಾಲದ ಜೊತೆಗೆ ಬದಲಾಗುವ ಮೌಲ್ಯಗಳು ಮತ್ತು ಬದಲಾಗುವ ಸಾಮಾಜಿಕ ಸನ್ನಿವೇಶಗಳನ್ನು ಪರಿಗಣನೆಗೆ ತೆಗೆದುಕೊಂಡದ್ದಾದರೆ, ನಾವು ಈ ನಿಲುವನ್ನು ತಾಳುವುದು ಅನಿವಾರ್ಯ ಮಾತ್ರವಲ್ಲ ವರ್ತಮಾನದ ಅಗತ್ಯವೂ ಆಗಿದೆ. ನನ್ನದೇ ಉದಾಹರಣೆ ತೆಗೆದುಕೊಂಡರೆ, ನನ್ನ ತಂದೆಯವರು ಕೂಡಾ ಬ್ರಿಟಿಷರ ಸೇವೆಯಲ್ಲಿ ಪಟೇಲರಾಗಿ, ಅವರ ಜೀವನದ ನಾಲ್ಕು ದಶಕಗಳನ್ನು ಕಳೆದವರು. ಆದರೆ ಕೇವಲ ಇದೊಂದು ಮುಲಾಜಿಗಾಗಿ, ನಮ್ಮ ದೇಶವನ್ನು ಲೂಟಿಮಾಡಿದ, ನಮ್ಮ ಹಿರಿಯರನ್ನೆಲ್ಲ ಗುಲಾಮರನ್ನಾಗಿಸಿದ ಬ್ರಿಟಿಷರ ಕುರಿತು ನನಗೆ ಎಳ್ಳಷ್ಟೂ ಅನುಕಂಪ, ವಾತ್ಸಲ್ಯ ಮೂಡಬಾರದು; ಮೂಡುವುದಿಲ್ಲ.

ಬ್ರಿಟಿಷ್ ದಾಖಲೆಗಳೇ ಹೇಳುವಂತೆ, ಇಂದಿಗೆ ಕೇವಲ ಒಂದುವರೆ ಶತಮಾನದ ಹಿಂದೆ, ಬ್ರಿಟಿಷ್ ನೆಲೆಯಾದ ಮಂಗಳೂರಿಂದ ಅವರನ್ನು ಓಡಿಸಿ, ಅಲ್ಲಿನ ಬಾವುಟಗುಡ್ಡದಲ್ಲಿದ್ದ ಬ್ರಿಟಿಷ್ ಧ್ವಜವನ್ನು ಕಿತ್ತೆಸೆದು ತಮ್ಮ ಧ್ವಜವನ್ನೇರಿಸಿದ

ಹೋರಾಟಗಾರರು ಸ್ವಲ್ಪಕಾಲವಾದರೂ, ಮಂಗಳೂರನ್ನು ವಶಪಡಿಸಿಕೊಂಡದ್ದು ಚರಿತ್ರೆಯಲ್ಲಿನ ಅಸಾಮಾನ್ಯ ಘಟನೆಯೇ ಸರಿ. ಇದು ಬಹುಸಂಖ್ಯಾತರಿಗೆ, ದೇಶಕ್ಕೆ ಸ್ವಾತಂತ್ರ್ಯ ಸಿಕ್ಕಿ ಅರ್ಧಶತಮಾನವೇ ಕಳೆದುಹೋದ ಮೇಲೆಯೂ ಗೊತ್ತಿಲ್ಲದ ವಿಚಾರವಾಗಿದೆ.

ಅಮರ ಸುಳ್ಯ ದಂಗೆಯ ಸ್ಪಷ್ಟ ಚಿತ್ರಣ ಸಿಗಬೇಕಾದರೆ ಅಂದಿನ ಕೊಡಗಿನ ಭೌಗೋಳಿಕ ಹಾಗೂ ಐತಿಹಾಸಿಕ ಕಲ್ಪನೆಯನ್ನು ಮನದಟ್ಟು ಮಾಡಿಕೊಳ್ಳಬೇಕಾಗುತ್ತದೆ. ಮುಂದಿನ ವಿವರಗಳು ಲಿಖಿತ ಸಾಕ್ಷ್ಯಾಧಾರಗಳಿಂದ ಆಯ್ದುಕೊಂಡವುಗಳಾಗಿವೆ.



---

೧೮೩೭ನೆಯ ಪಿತೂರಿಯನ್ನು ಕುರಿತೊಂದು ವಿಶೇಷವೆಂದರೆ ಪಿತೂರಿಗಾರರೆಲ್ಲ ಕಾರ್ಯ ಸಾಧನೆಗಾಗಿ ಮೈಸೂರಿಂದ ಹೊರಟರು. ಹೀಗೆ ಇವರು ಹೊರಡುವರೆಂಬ ಸುದ್ದಿಯನ್ನು ಮಹಾರಾಜರೇ (ಕಬ್ಬನ್ ವರ್ಣಿಸಿರುವಂತೆ) ಕೊಟ್ಟರು. ಹೀಗಾಗಿ ಪಿತೂರಿಗಾರರ ರಹಸ್ಯಾಲೋಚನೆಗಳೆಲ್ಲ ಮಣ್ಣುಗೂಡಿದುವು.- ತಿ. ತಾ. ಶರ್ಮರ "ಕೊಡಗು ಮತ್ತು ಕೆನರಾ ಬಂಡಾಯ"

## ೨. ಕೊಡಗಿನ ಭೌಗೋಳಿಕ ಹಿನ್ನೆಲೆ

'ಅಮರ ಸುಳ್ಯ ದಂಗೆ' ವ್ಯಾಪ್ತಿಯ ಪ್ರದೇಶ ಈಗಿನ ಹಾಸನ ಜಿಲ್ಲೆಯ ಪಶ್ಚಿಮ ಭಾಗ, ದಕ್ಷಿಣ ಕನ್ನಡ ಜಿಲ್ಲೆಯ ದಕ್ಷಿಣ ಭಾಗ, ಸಂಪೂರ್ಣ ಕೊಡಗು ಮತ್ತು ಕೇರಳದ ಉತ್ತರ ಭಾಗವೆಂದು ಗುರುತಿಸಬಹುದು. "ಎಲ್ಲಿ ಭೂರಮೆ ದೇವ ಸನ್ನಿಧಿ ಬಯಸಿ ಬಿಮ್ಮನೆ ಬಂದಳೋ" ಎಂಬುದಾಗಿ ಕೊಡಗಿನ ಬಗ್ಗೆ ಪಂಜೆಯವರು ಹಾಡಿದ್ದಾರೆ. ಬೇಂದ್ರೆ, ಜಿ. ಪಿ. ರಾಜರತ್ನಂ ಮೊದಲಾದ ಕವಿಗಳು ಹೊಗಳಿದ್ದಾರೆ. ಡಾ. ಎಂ. ಎನ್. ಶ್ರೀನಿವಾಸ, ಡಾ. ರಾಮಾನುಜಂ, ಮಾಸ್ತಿ ಮೊದಲಾದವರು ಆಸಕ್ತಿಯಿಂದ ಬರೆದಿದ್ದಾರೆ. ಇದಕ್ಕೆಲ್ಲ ಕಾರಣ ಆಂಗ್ಲ ಲೇಖಕರ ಬರಹಗಳು. ಕೊನ್ನರ, ಮೂಗ್ಲಿಂಗ್, ರಿಕ್ತರ್, ಲೂವಿಸ್ ರೈಸ್ ಮೊದಲಾದ ಇತಿಹಾಸಕಾರರು ನಿಜವಾದ ಚರಿತ್ರೆಯ ಮೇಲೆ ಪರದೆ ಎಳೆದು ತಮ್ಮ ಕಪೋಲಕಲ್ಪಿತ ಭ್ರಮಾಲೋಕಕ್ಕೆ ಇದೇ ಚರಿತ್ರೆ ಎಂದು ಹೇಳುತ್ತಾ ಕರೆದೊಯ್ಯುತ್ತಾರೆ. ದೇಶದ ಉದ್ದಗಲದಲ್ಲಿ ಕೊಡಗು ಕಳೆದ ಒಂದುವರೆ ಶತಮಾನಗಳ ಕಾಲ ಕುತೂಹಲ ಮೂಡಿಸಿದ್ದು ಆಶ್ಚರ್ಯ! ಕುವೆಂಪು ವರ್ಣಿಸುವ ಮಲೆನಾಡು - ಸಹ್ಯಾದ್ರಿಯ ಮಿಕ್ಕುಳಿದ ಪ್ರದೇಶ ಕೊಡಗಿಗೆ ಯಾವ ರೀತಿಯಲ್ಲೂ ಕಡಿಮೆಯಿಲ್ಲ. ಇದು ಅನೇಕರಿಗೆ ಗೊತ್ತಿಲ್ಲದಿರುವುದು ಕೂಡಾ ಅಷ್ಟೇ ಆಶ್ಚರ್ಯ!

**ಆರಂಭದಲ್ಲಿ :** ಕ್ರಿಸ್ತಶಕದ ಆದಿಯ ತಮಿಳಿನ ಸಂಗಂ ಸಾಹಿತ್ಯದಲ್ಲಿ ಕೊಡಗಿನ ಪ್ರಸ್ತಾಪ ಬರುತ್ತದೆ ಎನ್ನಲಾಗಿದೆ. 'ಕುಡುಗಂ' ಎಂದು ಅಲ್ಲಿ ಗುರುತಿಸಿದ ಈ ಮಾತಿಗೆ (ಕುಡು=ಕೊಂಕು ಅಥವಾ ಕೋಡು ಅಂದರೆ ಬೆಟ್ಟದ ತುದಿ) + ಅಗಂ = ಪ್ರದೇಶ ಎಂಬುದಾಗಿ ಒಟ್ಟಿನಲ್ಲಿ ಗುಡ್ಡ ಬೆಟ್ಟಗಳಿಂದ ಕೂಡಿದ ಪ್ರದೇಶ ಎಂಬ ಪ್ರಾಕೃತಿಕ ಸ್ವಭಾವದ ಹೆಸರಾಗಿದೆ. ಹಾಗಿದ್ದರೆ ಈ ಪದದ ವ್ಯಾಪ್ತಿ ಇದೇ ಸ್ವಭಾವ ಹೊಂದಿದ ಇತರ ಭೂಪ್ರದೇಶಗಳಿಗೂ ಅನ್ವಯಿಸಬೇಕು. ಈಗ ನಮಗೆ ಕೊಡಗು ಎಂದು ರಾಜಕೀಯ ನಿರ್ಮಿತವಾದ ಭೌಗೋಳಿಕ ಮೇರೆಗಳು ಒಂದು ದೃಷ್ಟಿಯಿಂದ ಕೃತಕ. ಈಗಿನ ಕೊಡಗಿನ ವ್ಯಾಪ್ತಿ ಉತ್ತರ ಅಕ್ಷಾಂಶ ೧೧೦೫೬ರಿಂದ ೧೨೫೨ ಪೂರ್ವರೇಖಾಂಶ ೭೫೦೨೨ರಿಂದ ೭೬೦೧೨ ಎಂದು ಕೊಡಗಿನ ಗ್ಯಾಸೆಟಿಯರ್‌ನಲ್ಲಿ ನಮೂದಾಗಿದೆ. (ಪು. ೨) ಆದರೆ ಈ

ರೀತಿಯ ಗಡಿಗಳು ಬೇರೆ, ಬೇರೆ ಕಾಲ ಘಟ್ಟಗಳಲ್ಲಿ ಬದಲಾಗಿವೆ. ೧೮೩೪ರಲ್ಲಿ ಬ್ರಿಟಿಷ್ ಆಳ್ವಿಕೆ ಪ್ರಾರಂಭವಾದಾಗ ಬಂಟ್ವಾಳ ತಾಲೂಕನ್ನು ಮದರಾಸು ರಾಜ್ಯದ ಆಡಳಿತಕ್ಕೆ ಸೇರಿಸಿದರು. ಅಂದಿನ ಬಂಟ್ವಾಳ ತಾಲೂಕಿನಲ್ಲಿದ್ದ ಈಗಿನ ಬೆಳ್ತಂಗಡಿ, ಬಂಟ್ವಾಳ, ಪುತ್ತೂರು ಮತ್ತು ಸುಳ್ಯ ತಾಲೂಕುಗಳು ಕೊಡಗು ರಾಜನ ಆಳ್ವಿಕೆಯಲ್ಲಿತ್ತು. ಆದರೆ ಇದು ಐಗೂರು ಅರಸ ಆಳ್ವಿಕೆಯಲ್ಲಿದ್ದು ೧೮೦೪ರಲ್ಲಿ ಕೊಡಗಿಗೆ ಸೇರಿಸಲ್ಪಟ್ಟದ್ದು. ಈಗಿನ ಸೋಮವಾರಪೇಟೆ ತಾಲೂಕು ಕೂಡಾ ಅದೇ ವರ್ಷ ಕೊಡಗಿಗೆ ಸೇರಿದ ಭೂಪ್ರದೇಶವಾಗಿದ್ದು ಐಗೂರು ಸಂಸ್ಥಾನಕ್ಕೆ ಸೇರಿತ್ತು.

ಟಿಪ್ಪುವಿನ ಕಾಲದಲ್ಲಿ: ೧೭೮೫ರಲ್ಲಿ ಕೊಡಗು ಹೇಗೆ ಇತ್ತು ಎನ್ನುವುದನ್ನು ಟಿಪ್ಪುಸುಲ್ತಾನನ ಚರಿತ್ರಕಾರ ಹೀಗೆ ಬರೆದಿದ್ದಾರೆ. (ಕೊಡಗಿನ ಇತಿಹಾಸ - ಡಿ. ಎನ್. ಕೃಷ್ಣಯ್ಯ ಪು. ೧೫೬-೧೫೭)

"ಈ ಆಶ್ಚರ್ಯಕರವಾದ ಕಾಡುಸೀಮೆಯನ್ನು ಕುರಿತು ನಾನು ಏನನ್ನು ಹೇಳಬಲ್ಲೆ, ಅದರ ಹೆಸರು ಹೇಳುವಾಗಲೇ ಲೇಖನಿಯು ನಡುಗುತ್ತದೆ. ಅದರ ಬಿದಿರಮೆಳೆಗಳು ಅಬಿಸೀನಿಯದವನ ಕುರಿ ಉಣ್ಣೆ ಕೂದಲಿನ ಗುಂಗುರುಗಳಂತೆ ನುಗ್ಗಲಸಾಧ್ಯವಾಗಿವೆ. ದೊಡ್ಡ ದಾರಿಗಳೂ, ಸಣ್ಣ ದಾರಿಗಳೂ ಆಕಾಶದಲ್ಲಿ ನಕ್ಷತ್ರಗಳ ಮಧ್ಯೆ ನುಸುಳಿದಂತಿವೆ. ಈ ದೇಶದ ಗುಡ್ಡಗಳನ್ನೂ ಕಣಿವೆಗಳನ್ನೂ ಹಾದು ಹೋಗುವುದಕ್ಕೆ ಆಗುವುದೇ ಇಲ್ಲ. ತಗ್ಗು ಭೂಮಿಯಲ್ಲಿ ಭತ್ತದ ಬೆಳೆಯು ಎದೆಯಷ್ಟು ಎತ್ತರಕ್ಕೆ ನಿಂತಿರುತ್ತದೆ. ಸೂರ್ಯನು ಸ್ವತಃ ಶಾಖವುಳ್ಳವನಾದರೂ ಇಲ್ಲಿ ಚಳಿಗೆ ಹೆದರಿ ಪ್ರತಿದಿನವೂ ಮೋಡಗಳಿಂದ ತನ್ನನ್ನು ಮುಚ್ಚಿಕೊಂಡು ಇಲ್ಲಿಂದ ಅವಸರವಸರವಾಗಿ ಹೋಗಿಬಿಡುತ್ತಾನೆ. ಪ್ರತಿರಾತ್ರಿಯೂ ಚುರುಕಾಗಿ ಪ್ರಯಾಣ ಮಾಡುವ ಚಂದ್ರನು ಆಕಾಶದ ನೀಲಬಣ್ಣದ ಮುಸುಕಿನಲ್ಲಿ ತನ್ನ ಮುಖವನ್ನು ಮುಚ್ಚಿಕೊಳ್ಳುತ್ತಾನೆ. ಬೇಸಿಗೆಯಲ್ಲಿ ಹೀಗಾದರೆ ಮಳೆಗಾಲದಲ್ಲಿ ದೇವರೇ ನಮ್ಮನ್ನು ಕಾಪಾಡಬೇಕು. ಮಳೆಗಾಲದ ಆರು ತಿಂಗಳಲ್ಲಿ ಈ ದೇಶದಲ್ಲೆಲ್ಲ ಮಳೆಯು ಸುರಿದು ದುಃಖದಲ್ಲಿರುವವರ ಕಣ್ಣುಗಳಲ್ಲಿ ನೀರು ತುಂಬಿಕೊಂಡಿರುವಂತೆ ಭೂಮಿಯೆಲ್ಲಾ ನೀರಿನಿಂದ ತುಂಬಿಕೊಂಡಿರುತ್ತದೆ. ಸಾಯಂಕಾಲದಿಂದ ಸೂರ್ಯೋದಯವಾಗಿ ಎರಡು ಘಂಟೆಗಳವರೆಗೆ ಹಿಮವು ಗುಡ್ಡಗಳನ್ನೂ ಕಣಿವೆಗಳನ್ನೂ ಮುಚ್ಚಿಕೊಂಡಿರುತ್ತದೆ. ಅನೇಕ ಎತ್ತರವಾದ, ದೃಢಕಾಯರಾದ, ಚಟುವಟಿಕೆಯಿಂದ ಕೂಡಿದ ತರುಣರು ಚಳಿಯಿಂದ ಅವರ ಅಂಗಾಂಗಗಳ ಬಿಸಿಯನ್ನು ಕಳೆದುಕೊಂಡು ರಾತ್ರಿ ಹೊತ್ತಿನಲ್ಲಿ ತಮ್ಮ ಸಣ್ಣ ಗುಡಿಸಲುಗಳಲ್ಲಿ ಕಾಲುಗಳು ಎದೆಗೆ ಮುಟ್ಟುವಂತೆ ಬಿಲ್ಲಿನ ಹಾಗೆ ಶರೀರವನ್ನು ಮುದುಡಿಕೊಂಡು ಮಲಗುತ್ತಾರೆ. ಆರು ತಿಂಗಳುಗಳ ವರೆಗೆ ರೈತರು ತಲೆಯಿಂದ ಕಾಲಿನವರೆಗೂ ಹಳೆ ಕಂಬಳಿ ಅಥವಾ ದಪ್ಪ ಬಟ್ಟೆಯಿಂದ ಮುಚ್ಚಿಕೊಂಡು ಒಂಬತ್ತು, ಹತ್ತು ಘಂಟೆಗಳ ಕಾಲ ಕೆಲಸ ಮಾಡುತ್ತಿರುತ್ತಾರೆ. ಈ ಸಮಯದಲ್ಲಿ ಮರದ ಎಲೆಗಳ

ಮತ್ತು ಕೊಂಬೆಗಳಲ್ಲಿರುವ ಜಿಗಣೆಗಳು ಅವರನ್ನೂ, ಅವರ ದನ ಕರುಗಳನ್ನೂ ಕಚ್ಚಿ ತಮಗೆ ಬೇಕಾದಷ್ಟು ರಕ್ತವನ್ನು ಹೀರಿದ ಮೇಲೆಯೇ ಅವರ ಮೈಯನ್ನು ಬಿಡುತ್ತವೆ. ಇಲ್ಲಿನ ಚಳಿಯನ್ನು ವಿವರಿಸುವಾಗ ಬರೆಯುವುದಕ್ಕೆ ಮೊದಲೇ ಲೇಖನಿ ಹಿಡಿದ ಕೈ ಗಡ್ಡೆಗಟ್ಟಿದ ಸಮುದ್ರದೊಳಗೆ ಕೈಯನ್ನು ಮುಳುಗಿಸಿದರೆ ಹೇಗೋ ಹಾಗೆ ಮರಗಟ್ಟುತ್ತದೆ. ಈ ಹವೆಯನ್ನು ವಿವರಿಸುವ ನಾಲಗೆಯು ತುಟಿಗಳ ಒಳಗಡೆ ಮುಚ್ಚಿಕೊಂಡು ಇದ್ದರೂ ಹೆದರಿಕೆಯಿಂದಲೂ, ಆಶ್ಚರ್ಯದಿಂದಲೂ, ಮಂಜುಗಡ್ಡೆಯ ಹಾಗೆ ಗಟ್ಟಿಯಾಗುತ್ತದೆ."

**ನಾಗರಿಕತೆಯ ಪ್ರವೇಶ:** ಇನ್ನೂರು ವರ್ಷಗಳ ಹಿಂದೆ ಕೊಡಗಿನ ಚಳಿಯು ಉತ್ಪ್ರೇಕ್ಷೆಯಲ್ಲವೆಂಬುದು ೫೦ ವರ್ಷಗಳ ಹಿಂದೆ ಕೊಡಗು ಸಂದರ್ಶಿಸಿದವರಿಗೆ ಗೊತ್ತಿರುವ ವಿಚಾರ. ಇಂದಿನ ಕೊಡಗನ್ನು ಉತ್ತರ ಕೊಡಗು, ದಕ್ಷಿಣ ಕೊಡಗು ಎಂಬುದಾಗಿ ವಿಭಜಿಸಲಾಗಿದೆ. ಕಾವೇರಿ ನದಿಯ ದಕ್ಷಿಣ ದಂಡೆಯಲ್ಲಿ ದಟ್ಟ ಅರಣ್ಯ ಪ್ರದೇಶದಲ್ಲಿ ಎರಡು ಶತಮಾನಗಳ ಹಿಂದೆ ನಾಗರಿಕತೆಯ ಪ್ರವೇಶವಾಯಿತು. ಉತ್ತರ ಕೊಡಗಿನಲ್ಲಿ ವಿವಿಧ ಕಾಲ ಘಟ್ಟಗಳಲ್ಲಿ ಬೇರೆ, ಬೇರೆ ರಾಜರ ಆಳ್ವಿಕೆ ಇದ್ದಂತೆಯೂ, ಅಲ್ಲಿಯ ನಾಗರಿಕತೆ ದಕ್ಷಿಣ ಕೊಡಗು ಸ್ಥಾಪಿಸಲ್ಪಡುವ ಹಲವು ಶತಮಾನಗಳ ಹಿಂದೆಯೇ ಇದ್ದಿತು ಎನ್ನುವುದಕ್ಕೆ ಆಧಾರಗಳಿವೆ. ದಕ್ಷಿಣ ಕೊಡಗಿನ ಪ್ರಥಮ ಪೇಟೆ ವೀರ ರಾಜೇಂದ್ರಪೇಟೆ. ಇದರ ನಿರ್ಮಾಣ ೧೭೯೨ರಲ್ಲಿ ಆಯಿತು. ಟಿಪ್ಪುಸುಲ್ತಾನನ ಆಳ್ವಿಕೆಗೆ ಸೇರಿದ್ದ ಈ ಪ್ರದೇಶವನ್ನು ಅದೇ ವರ್ಷ ಆಗಿದ್ದ ಒಪ್ಪಂದದ ಪ್ರಕಾರ ಬ್ರಿಟಿಷರು ಪಡೆದುಕೊಂಡಿದ್ದರು. ಎರಡನೇ ಪೇಟೆ ೧೮೩೫ರಲ್ಲಿ ನಿರ್ಮಾಣವಾದ ಪೊನ್ನಂಪೇಟೆ. ಆದರೆ ಉತ್ತರ ಕೊಡಗಿನ ನಂಜರಾಜಪಟ್ಟಣ, ಕುಶಾಲನಗರ, ರಾಮಸ್ವಾಮಿ ಕಣಿವೆ, ನಿಡತ, ಗೌಡಳ್ಳಿ, ಶನಿವಾರಸಂತೆ, ಕೊಡ್ಲಿಪೇಟೆ ಮೊದಲಾದವುಗಳು ಯಾವಾಗ ನಿರ್ಮಾಣವಾಯಿತೆಂಬ ದಾಖಲೆಗಳಿಲ್ಲದಷ್ಟು ಪುರಾತನ.

**ವಿಸ್ತರಣೆ :** ಬಯಲು ಸೀಮೆಯಿಂದ ಪ್ರತ್ಯೇಕವಾಗಿ ಗುರುತಿಸಬಹುದಾದ ಉತ್ತರ ಕೊಡಗು ಮತ್ತು ಕರಾವಳಿಯಿಂದ ಪ್ರತ್ಯೇಕವಾಗಿ ಕಾಣುವ ಅಮರ ಸುಳ್ಯ ಅಥವಾ ಆಗಿನ ಬಂಟ್ವಾಳ ತಾಲೂಕು (ಈಗಿನ ಬಂಟ್ವಾಳ, ಬೆಳ್ತಂಗಡಿ, ಪುತ್ತೂರು, ಸುಳ್ಯ ತಾಲೂಕುಗಳು) ಐಗೂರು ಅರಸರ ಆಳ್ವಿಕೆಗೆ ಸೇರಿತ್ತು. ೧೮೦೪ರಲ್ಲಿ ಈ ಪ್ರದೇಶ ಮತ್ತು ಈಗಿನ ಸೋಮವಾರಪೇಟೆ ತಾಲೂಕನ್ನು ಕೊಡಗಿಗೆ ಸೇರಿಸಿದರು. ಐಗೂರು ಈಗ ಹಾಸನ ಜಿಲ್ಲೆಯಲ್ಲಿದೆ. ಗೌಡ ಜನಾಂಗದ ಆರಾಧ್ಯ ದೇವತೆಗಳಾದ ಹೊಸಕೋಟೆ ಕೆಂಚಮ್ಮ, ವಣಗೂರು ಸುಬ್ಬಮ್ಮ ಇತ್ಯಾದಿ ಹಾಸನ ಜಿಲ್ಲೆಯಲ್ಲಿರುವುದು ಗಮನಾರ್ಹ.

ದಂಗೆಯ ಭೌಗೋಳಿಕ ವ್ಯಾಪ್ತಿಯಲ್ಲಿ ಹಾಸನ ಜಿಲ್ಲೆಗೆ ಸೇರಿದ ಸಕಲೇಶಪುರ, ಅರಕಲಗೋಡು, ಮೈಸೂರು ಜಿಲ್ಲೆಗೆ ಸೇರಿದ ಪ್ರದೇಶದವರು ಇದ್ದಾರೆ. ಹಿಂದೆ ಪಿರಿಯಾಪಟ್ಟಣದ - ಬೆಟ್ಟದಪುರದ ಅರಸರು ಕೂಡಾ ಕೊಡಗಿನ ಗಡಿಪ್ರದೇಶಗಳನ್ನು

ತಮ್ಮ ವಶದಲ್ಲಿ ಆಗಾಗ್ಗೆ ಇಟ್ಟುಕೊಂಡಿರುವುದಾಗಿ ತಿಳಿದುಬರುತ್ತದೆ. ಮಾಲ್ಡಾರೆ-ಪಾಲ್ಪರೆ ಚೆಂಗಾಳ್ವರ ಆಳ್ವಿಕೆಯಲ್ಲಿತ್ತು.

ಚೆಂಗಾಳ್ವರು ನಂಜರಾಯಪಟ್ಟಣವನ್ನು ರಾಜಧಾನಿಯಾಗಿರಿಸಿಕೊಂಡು ದಕ್ಷಿಣ ಕೊಡಗಿನ ಕಿಗ್ಗಟ್‌ನಾಡನ್ನು ಆಳುತ್ತಿದ್ದರು. ಇವರು ಪೆರಿಯಪಟ್ಟಣದ ಅರಸರ ವಂಶಕ್ಕೆ ಸೇರಿದವರೆಂದು ತಿಳಿದುಬರುತ್ತದೆ. ಕೊಡಗಿನ ಪೂರ್ವ ಭಾಗವು ವ್ಯವಸಾಯಕ್ಕೆ ಯೋಗ್ಯವಾಗಿದ್ದು ಅಲ್ಲಿಗೆ ಬಯಲು ಸೀಮೆಯವರು ಒತ್ತುವರಿದು ಬಂದು ನೆಲೆಸಿದ್ದರು. ಹಾಗೆ ಪಶ್ಚಿಮ ಕೊಡಗಿನ ಪುಷ್ಪಗಿರಿ-ಪಟ್ಟಿಘಾಟಿಯ ತಪ್ಪಲಿನಲ್ಲಿಯೂ ನಾಗರಿಕತೆ ಇತ್ತು ಎನ್ನುವುದಕ್ಕೆ ಭೂತಗಳ ಪಾಡ್ದನ, ಅಜ್ಜಿ ಕಥೆಗಳೇ ಆಧಾರವಾಗುತ್ತವೆ. ಜನಸಂಖ್ಯೆ ಬಹಳ ತೆಳ್ಳಗಿದ್ದರೂ ಕೂಡಾ ಇದೊಂದು ಸಾಂಸ್ಕೃತಿಕ ಘಟಕದೊಳಗೆ ಸೇರಿತ್ತು. ಐಗೂರನ್ನು ಅರಸುಮನೆತನದವರು ಆಳುತ್ತಿದ್ದರು. ಇವರು ವಿಜಯನಗರದ ಸಾಮಂತರಾಗಿದ್ದರು. ಶೃಂಗೇರಿ ಧಾರ್ಮಿಕ ಕೇಂದ್ರವಾಗಿತ್ತು. ಶೈವ, ವೈಷ್ಣವ ಮತಗಳೊಡನೆ ನಾಥಪಂಥವನ್ನೂ ಶೃಂಗೇರಿ, ತಿರುಪತಿಯನ್ನೂ ಒಪ್ಪಿ ಸ್ವೀಕರಿಸಿರುವುದು ಅಧ್ಯಯನಕ್ಕೆ ಯೋಗ್ಯವಾದ ವಿಚಾರ.

ಯಾವುದೋ ಒಂದು ಕಾಲಘಟ್ಟದಲ್ಲಿ ಐಗೂರು ಸಾಮ್ರಾಜ್ಯದ ಹೊರಗೆ ಗಡಿನಾಡು ಎಂದು ಕರೆಯಲ್ಪಡುವ ಸೂರ್ಲಬ್ಬಿ, ಗರವಾಲೆಯ ಪಕ್ಕದಲ್ಲಿ ಹೊರಮಲೆನಾಡು ಕಾಣಿಸಿಕೊಳ್ಳುತ್ತದೆ. ಯಾವ ಕಾರಣಕ್ಕೆ ಅಲ್ಲಿಗೆ ದೊಡ್ಡ ಸಂಖ್ಯೆಯಲ್ಲಿ ಸಂಸಾರಗಳು ಬಂದು ನೆಲೆಯೂರಿದವೊ ತಿಳಿದುಬರುವುದಿಲ್ಲ. ಅದರ ಪಕ್ಕದಲ್ಲೇ ಹಾಲೇರಿನಾಡು ಕಾಣಿಸಿಕೊಳ್ಳುತ್ತದೆ. ಮುಂದೆ ಮೂರು ನಾಡು, ನಾಲ್ಕುನಾಡುಗಳಲ್ಲಿ ಜನರು ಬಂದು ನೆಲೆಸುತ್ತಾರೆ. ಕಡೆಯತ್ತನಾಡು ಅನ್ನುವುದು ದಟ್ಟ ಅರಣ್ಯದಿಂದಾಗಿ ಮುಂದೆ ವಾಸಕ್ಕೆ ಯೋಗ್ಯವಲ್ಲವೆಂಬ ಕಾರಣಕ್ಕೆ ಬಂದ ಹೆಸರಾಗಿರಬಹುದು. ಪಟ್ಟಿಘಾಟಿಯ ಪಶ್ಚಿಮಭಾಗದಿಂದ ಬಂದು ನೆಲೆಸಿದ ಇನ್ನೊಂದು ನಾಡನ್ನು ತಾವು ನಾಡೆಂದು ಕರೆದು ಅದರ ಬೆನ್ನಲ್ಲೆ ಇರುವುದನ್ನು ಬೇಂಗು ನಾಡು ಎಂದು ಗುರುತಿಸಿರುವ ಸಾಧ್ಯತೆ ಇದೆ. ಈ ಏಳು ನಾಡು ವೃತ್ತಾಕಾರವಾಗಿ ಕೂಡಿಕೊಳ್ಳುತ್ತವೆ. ಇವುಗಳ ಮಧ್ಯದಲ್ಲಿರುವುದೇ ಮದೆನಾಡು. ಅಲ್ಲಿ ಸುತ್ತಲಿನ ರೈತರಿಗೆ ಅನುಕೂಲವಾಗುವಂತೆ ನೆಲೆಸಿದ ವ್ಯಾಪಾರಿಗಳ ಕೇರಿ. ಇದುವೇ ಮದೆಕೇರಿ, ಇಂದಿನ ಮಡಿಕೇರಿಯಾಗಿರುವ ಸಾಧ್ಯತೆಗಳಿವೆ.

**ದಂಗೆಯ ಕಾಲದಲ್ಲಿ:** ಈಗಿನ ವಿರಾಜಪೇಟೆ, ಮಡಿಕೇರಿ, ಸೋಮವಾರಪೇಟೆ, ಅರಕಲಗೋಡು, ಸಕಲೇಶಪುರ, ಸುಳ್ಯ, ಪುತ್ತೂರು, ಬೆಳ್ತಂಗಡಿ ತಾಲೂಕುಗಳ ಹಾಗೂ ಕೇರಳದ ಕಾಸರಗೋಡು ಜಿಲ್ಲೆಯ ಜನರು ಅಮರ ಸುಳ್ಯ ದಂಗೆಯಲ್ಲಿ ಭಾಗಿಗಳಾಗಿದ್ದರು. ಅಂದಿನ ಕಾಲದಲ್ಲಿ ಕಾಲ್ನಡಿಗೆಯಲ್ಲಿ ಮಾತ್ರ ಸಂಪರ್ಕ ಸಾಧ್ಯತೆಗಳಿದ್ದ ಕಾರಣ ಸುಳ್ಯವು ದಂಗೆಯ ಕೇಂದ್ರವಾಗುವುದಕ್ಕೆ ಅದೂ ಒಂದು ಕಾರಣವಾಗಿರಬಹುದು. ಮೈಸೂರು

ಅರಕೆರೆ ಬಸಪ್ಪಾಜಿಯ ಅರಮನೆ ಹೋರಾಟದ ಚಿಂತನೆಯ ಕೇಂದ್ರವಾಗಿತ್ತು ಎಂಬುದಾಗಿ ಬ್ರಿಟಿಷರು ಗುರುತಿಸಿದ್ದಾರೆ. ತಿರುಚಿನಾಪಳ್ಳಿಯೊಂದಿಗೆ ಇವರೆಲ್ಲ ಸಂಪರ್ಕ ಇರಿಸಿಕೊಂಡಿದ್ದರೆಂದು ತಿಳಿದುಬರುತ್ತದೆ.

ಬ್ರಿಟಿಷರು ರಾಜರ ಆಳ್ವಿಕೆಯ ಕಾಲದಲ್ಲಿ ಕೊಡಗನ್ನು ವಿಸ್ತರಿಸಿದರು, ಬೆಳೆಸಿದರು. ಆದರೆ ನೇರ ಆಡಳಿತ ಕಾಲದಲ್ಲಿ ಇಲ್ಲಿನ ಅವರನ್ನು ವಿರೋಧಿಸುತ್ತಿದ್ದರೆಂದು ಬಂಟ್ವಾಳ ತಾಲೂಕನ್ನು ಮದ್ರಾಸ್ ಆಡಳಿತಕ್ಕೆ ಸೇರಿಸಿದರು. ಕೊಡಗಿನ ಪಶ್ಚಿಮದ ಉದ್ದಕ್ಕೂ ಬ್ರಹ್ಮಗಿರಿ ಬೆಟ್ಟದ ಸಾಲು ಇದೆ. ನಿಡ್ಯಮಲೆ ಬೆಟ್ಟ, ಕಾನಗುಂಡಿ ಬೆಟ್ಟ, ಪುದುಪಾರೆ ಬೆಟ್ಟ, ಮೊತ್ತರಿಗಪಾರೆ ಬೆಟ್ಟ, ಇಗ್ಗುತಪ್ಪ ಬೆಟ್ಟ, ನಾಲಡಿ ಬೆಟ್ಟ, ತಡಿಯಂಡಮೋಳ ಬೆಟ್ಟ, ಸ್ವಾಮಿ ಬೆಟ್ಟ, ಪಾಲಿ ಬೆಟ್ಟ, ಕುಟ್ಟಂದಿ ಬೆಟ್ಟ, ಅಪ್ಪಾದಾರಾ ಬೆಟ್ಟ, ನಂದಿಕುಂದ ಬೆಟ್ಟ, ಬೊಳ್ಳೂರು ಬೆಟ್ಟ, ನಿಡಗುಣಿ ಮಲೆ, ಬಿರುನಾಣಿ ಬೆಟ್ಟ, ಕೋತಮಲೆ ಬೆಟ್ಟ, ಇಚುಮಲೈ ಪೆರುಮಲೆ ಬೆಟ್ಟ, ಕಕ್ಕೇರಿ ಬೆಟ್ಟ ಇವುಗಳಲ್ಲಿ ಕಾಫಿ ತೋಟಗಳನ್ನು ಮಾಡಿ ಜನರು ನೆಲೆಯೂರುವಂತೆ ಮಾಡಿದರು. ಕೇವಲ ೨೫ ವರ್ಷಗಳಲ್ಲಿ ಜನಸಂಖ್ಯೆ ಮೂರು ಪಾಲು ಹೆಚ್ಚು ಮಾಡಿದರು. ಡಬ್ಲ್ಯು. ಡಬ್ಲ್ಯು. ಹಂಟರನ ದಿ ಇಂಪೀರಿಯಲ್ ಗಜೆಟಿಯರ್ ಆಫ್ ಇಂಡಿಯದ ಪ್ರಕಾರ ೧೮೩೬ ಇಸ್ವಿಯಲ್ಲಿ ಕೊಡಗಿನ ಜನಸಂಖ್ಯೆ ೬೫,೪೩೭ ಇದ್ದದ್ದು, ರಿಕ್ತರನ ಪ್ರಕಾರ ೧೮೭೧ರಲ್ಲಿ ಜನಸಂಖ್ಯೆ ೧,೬೮,೩೧೨ಕ್ಕೆ ಏರಿದೆ.

*

---

□ "ಮೈಸೂರಿನ ಪ್ರಭಾವಶಾಲಿ ಪಕ್ಷಕ್ಕೂ, ಬಂಡಾಯಗಾರರಿಗೂ ಇದ್ದ ಸಂಬಂಧಗಳಿಗೆ ಕರ್ನಲ್ ಕಬ್ಬನ್ ಕೊಟ್ಟಿರುವ ವಿವರಗಳು ಆಧಾರವಾಗುತ್ತವೆ. ಅವುಗಳು ಸರಿಯಲ್ಲ ಎನ್ನುವಂತಿಲ್ಲ. ಬಂಡಾಯದ ಸಮಯದಲ್ಲಿ ಮೈಸೂರಿನವರ ಬಗ್ಗೆ ಮಾತಾಡದೆ ಇದ್ದದ್ದು, ಬೇರೆ ಕಡೆಗಳಿಂದ ಸಹಾಯ ಸಿಕ್ಕುತ್ತದೆಂದು ಬಡಾಯಿ ಕೊಚ್ಚಿಕೊಂಡದ್ದು - ಪರಿಶೀಲಿಸಿದಾಗ ಸಂಶಯ ಬರುತ್ತದೆ.

ಮೈಸೂರು ಮುಮ್ಮಡಿ ಕೃಷ್ಣರಾಜ ಒಡೆಯರ ಸಂಬಂಧಿಕ ಅರಪುರ ಬಸಪ್ಪಾಜಿ ಅರಸ್ ಒಳಸಂಚಿಗೆ ಸೇರಿದ್ದ ಬಗ್ಗೆ ಮೈಸೂರು ವಿಚಾರಣಾ ಕಡತ ಸಂಶಯಕ್ಕೆ ಸಾಕಷ್ಟು ಆಧಾರಗಳನ್ನು ಒದಗಿಸುತ್ತದೆ.

ಬಂಡಾಯಗಾರರ ಒಳ ಉದ್ದೇಶ ಬ್ರಿಟಿಷ್ ಪ್ರಭುತ್ವವನ್ನು ಧ್ವಂಸಗೊಳಿಸುವುದಾಗಿತ್ತೆಂದು ಘೋಷಿಸಲು ನಾನು ಸಂದೇಹಪಡುವುದಿಲ್ಲ."

**- ಕಾಟನ್**

# ೩. ಇತಿಹಾಸದಲ್ಲಿ ಕೊಡಗು

ಕೊಡಗಿನ ಇತಿಹಾಸದ ಬಗ್ಗೆ ದೊಡ್ಡ ಸಂಖ್ಯೆಯಲ್ಲಿ ಆಂಗ್ಲ ಬರಹಗಾರರು ಆಕರ್ಷಿತರಾಗಿ, ಆಸಕ್ತಿ ವಹಿಸಿ, ಆಸ್ಥೆಯಿಂದ ದೊಡ್ಡ ರೀತಿಯಲ್ಲಿ ತಮ್ಮದೇ ಆದ ಕಾಣಿಕೆ ಸಲ್ಲಿಸಿದ್ದಾರೆ. ಅದರಿಂದಾಗಿ, ಅವರ ಕೃತಿಗಳಿಂದಾಗಿ, ಈ ಒಂದು ಚಿಕ್ಕ ಭೂಪ್ರದೇಶಕ್ಕೆ ಕಲ್ಪನಾತೀತ ಚರಿತ್ರೆ, ಹಿರಿಮೆ, ಗರಿಮೆಗಳು ಕೊಡಲ್ಪಟ್ಟಿವೆ. ಇದಕ್ಕೆ ಇಲ್ಲಿಯ ಜನರಲ್ಲಿ ಕೆಲವು ಮಂದಿ ಆಂಗ್ಲರಿಂದ ಆಕರ್ಷಿತರಾದದ್ದು, ಬ್ರಿಟಿಷರ ಗುಲಾಮಗಿರಿ ಒಪ್ಪಿಕೊಂಡದ್ದು, ತಮ್ಮ ಸುತ್ತಮುತ್ತಣ ಜನಸಮುದಾಯವನ್ನು ಗುಲಾಮಗಿರಿಗೆ ಒಗ್ಗಿಕೊಳ್ಳುವಂತೆ ಮಾಡಿದ್ದೇ ಕಾರಣವಾಗಿರಬೇಕು. ಭಾರತ ದೇಶದ ಉದ್ದಗಲದಲ್ಲಿ ಎಲ್ಲಿಯೂ ಕೂಡಾ ಈ ಪರಿಯಲ್ಲಿ ಜನಸಮುದಾಯ ಆಂಗ್ಲರ ಆಕರ್ಷಣೆಗೆ ಒಳಗಾದದ್ದು ಕಂಡುಬರುವುದಿಲ್ಲ.

**ರಾಜೇಂದ್ರನಾಮೆಯಲ್ಲಿ:** ೧೮೦೭ರಲ್ಲಿ ದೊಡ್ಡ ವೀರರಾಜನು ರಾಜೇಂದ್ರನಾಮೆಯನ್ನು ಬರೆಸಿದ ಎನ್ನಲಾಗಿದೆ. ೧೬೩೩ರಿಂದ ಪ್ರಾರಂಭವಾಗುವ ತನ್ನ ವಂಶದವರ ೧೭೫ ವರ್ಷ ೨ ತಿಂಗಳ ೨ ದಿನಗಳ ಚರಿತ್ರೆ ಇದೆ ಎಂದು ಬರೆಸಿಕೊಂಡಿದ್ದಾನೆ. ಎಂಟು ತಲೆಮಾರಿನ ಚರಿತ್ರೆಯನ್ನು ಹೇಗೆ ಸಂಗ್ರಹಿಸಲಾಯಿತು ಎನ್ನುವುದಕ್ಕೆ ಮಾತ್ರ ಉತ್ತರ ಸಿಗುವುದಿಲ್ಲ. ಈ ದೊಡ್ಡ ವೀರರಾಜನು ೧೬ನೇ ವಯಸ್ಸಿನಿಂದ ೨೪ನೇ ವಯಸ್ಸಿನ ತನಕ ಹೈದರಾಲಿ ಮತ್ತು ಟಿಪ್ಪು ಸುಲ್ತಾನನ ಸೆರೆಯಲ್ಲಿದ್ದವನು. ೧೭೯೨ರಲ್ಲಿ ಮೈಸೂರು ಒಪ್ಪಂದದಲ್ಲಿ ಟಿಪ್ಪುಸುಲ್ತಾನನಿಂದ ಪಡೆದುಕೊಂಡ ಕೊಡಗನ್ನು ಒಂದು ವರ್ಷದ ನಂತರ ೩೧-೩-೧೭೯೩ರಂದು ರಾಬರ್ಟ್ ಅಬರ್‌ಕ್ರಾಂಬಿ ರೂ. ೨೪೦೦೦ ವಾರ್ಷಿಕ ಕಪ್ಪ ನಿಗದಿಪಡಿಸಿ ದೊಡ್ಡ ವೀರರಾಜನಿಗೆ ಒಪ್ಪಿಸುತ್ತಾನೆ. ರಾಜೇಂದ್ರನಾಮೆಯ ಮುಖ್ಯ ಉದ್ದೇಶ, ಆತನ ಹಿರಿಯರು ಕೊಡಗನ್ನು ಆಳುತ್ತಿದ್ದರು ಎನ್ನುವುದನ್ನು ಸ್ಥಾಪಿಸುವುದಾಗಿರುತ್ತದೆ. ಆದರೆ ಹೊರಮಲೆ ಮತ್ತು ಹಾಲೇರಿಗಳಲ್ಲಿ ಯಾವುದೇ ಅರಮನೆಗಳಾಗಲಿ, ಕೋಟೆಗಳಾಗಲಿ ಇದ್ದ ಕುರುಹುಗಳು ಕೂಡಾ ಕಾಣಸಿಗುವುದಿಲ್ಲ. ೧೭೯೫ರಲ್ಲಿ ಕಟ್ಟಿಸಿದ ನಾಲ್ಕುನಾಡು ಅರಮನೆ ಈಗಲೂ ಕೂಡಾ ಭದ್ರವಾಗಿಯೇ ಇದೆ.

ರಾಜೇಂದ್ರನಾಮೆಯಲ್ಲಿ ಬರೆದಿರುವುದನ್ನು ಒಪ್ಪಿಕೊಳ್ಳಲು ಯಾವುದೇ ಸಾಕ್ಷ್ಯಾಧಾರಗಳು ಎಲ್ಲಿಯೂ ಸಿಗುವುದಿಲ್ಲ. ಕಟ್ಟಡ, ಶಿಲಾಶಾಸನ, ತಾಮ್ರಶಾಸನವಾಗಲಿ ನೆರೆಯ ರಾಜ್ಯದ ಇತಿಹಾಸದಲ್ಲಾಗಲೀ ಇದಕ್ಕೆ ಆಧಾರಗಳು ಸಿಗುವುದಿಲ್ಲ. ೧೭೫ ವರ್ಷಗಳ ಇತಿಹಾಸ ಒಮ್ಮಿಂದೊಮ್ಮೆಗೆ ೧೮೦೭ರಲ್ಲಿ ಬರೆಸಲ್ಪಟ್ಟಿತು. ಅದೇ ವರ್ಷ ದೊಡ್ಡ ವೀರರಾಜನ ಪತ್ನಿ ಮಹದೇವಾಜ್ಜಿಯ ಮರಣದಿಂದಾಗಿ ಆತನಿಗೆ ಮತಿಭ್ರಮಣೆ ಉಂಟಾಗಿತ್ತು ಎಂದು ದಾಖಲಿಸಲ್ಪಟ್ಟಿದೆ. ಹಾಗಿದ್ದು ಅದೇ ವರ್ಷ ಆತ ರಾಜೇಂದ್ರನಾಮೆ ಬರೆಸಿದನೆಂದು ಹೇಳಲ್ಪಟ್ಟಿದೆ. ವಾಸ್ತವವಾಗಿ ಇದನ್ನು ಬ್ರಿಟಿಷರು ಬರೆಸಿರಬೇಕೆನ್ನುವುದರಲ್ಲಿ ಸಂಶಯವಿಲ್ಲ. ಯಾಕೆಂದರೆ ಮುಂದೆ ಬ್ರಿಟಿಷ್ ಇತಿಹಾಸಕಾರರು ಅದನ್ನೇ ಪ್ರಶ್ನಾತೀತ ಆಕರಗ್ರಂಥವಾಗಿ ಬಳಸಿಕೊಂಡಿದ್ದಾರೆ.

**ಮೈಸೂರು ಇತಿಹಾಸಕಾರರು:** ಮೈಸೂರು ಇತಿಹಾಸಕಾರರ ಬರಹಗಳಲ್ಲಿ ಕೊಡಗಿನ ನಾಗರಿಕತೆ, ಹವಾಮಾನ, ಶ್ರೀಮಂತಿಕೆ ೨೦೦ ವರ್ಷಗಳ ಹಿಂದೆ ಹೇಗಿತ್ತೆಂಬುದರ ಸ್ಪಷ್ಟ ಚಿತ್ರಣ ಸಿಗುತ್ತದೆ. ೧೭೭೨ರಲ್ಲಿ ಹೈದರಾಲಿ ಕೊಡಗಿಗೆ ಬರುತ್ತಾನೆ. ಇದಕ್ಕೆ ಕಾರಣ ಹಾಲೇರಿ ಮತ್ತು ಹೊರಮಲೆಯವರ ದಾಯಾದಿ ಮತ್ಸರ. "ಆಗ ಕೊಡಗನ್ನು ಆಳುತ್ತಿದ್ದವನು ದೇವಯ್ಯ (ದೇವಪ್ಪ?). ಹೈದರನ ನೆರವು ಕೋರಿದವ ಲಿಂಗಯ್ಯ (ಲಿಂಗರಾಜ?). ವೈರಿ ಸೇನೆಯೆದುರು ನಿಲ್ಲಲಾರದೆ ದೇವಯ್ಯನು ಓಡಿಹೋಗಿ ಕಾಡುಗಳಲ್ಲಿ ತಲೆಮರೆಸಿಕೊಂಡನು. ಪ್ರಾಂತವು ಸುಲಭವಾಗಿ ಹೈದರನ ವಶವಾಯಿತು. ಸಣ್ಣ ಸಂಸ್ಥಾನವಾದ ಕೊಡಗು ಹೈದರನ ಅಗಾಧ ಸೇನೆಯೆದುರು ಹೇಗೆ ನಿಂತೀತು! ಹೈದರನು ಮಡಿಕೇರಿ ಕೋಟೆಯನ್ನು ಕೊಡಗಿನ ಮಧ್ಯ ಭಾಗದಲ್ಲಿ, ಶ್ರೀರಂಗಪಟ್ಟಣಕ್ಕೂ, ಮಂಗಳೂರಿಗೂ ಅರ್ಧದೂರವಾಗುವ ಸ್ಥಳದಲ್ಲಿ ಕಟ್ಟಿದನು. ಕೊಡಗಿನ ಜೊತೆಗೆಯೇ ಪಶ್ಚಿಮ ಕರಾವಳಿಯ ಇನ್ನೊಂದು ಮುಖ್ಯವಾದ ಕೋಟೆ ಬಳ್ಳುಂ ಅಥವಾ ಮಂಜರಾಬಾದ್ ಕೂಡಾ ಹೈದರನ ವಶವಾಯಿತು. ಆದರೆ ಹೈದರನು ಮಂಜರಾಬಾದನ್ನು ಅದರ ಅರಸನಿಗೇ ಕೊಟ್ಟು ಮೈಸೂರಿಗೆ ಸಾಮಂತರಾಗಿ ನಿಷ್ಠೆಯಿಂದಿರಲು ಆದೇಶಿಸಿದನು." (ಕರ್ನಾಟಕ ಚರಿತ್ರೆ ಸಂಪುಟ ೫, ಪುಟ ೬೬)

ಮೈಸೂರು ಇತಿಹಾಸದಲ್ಲಿ ಮಂಜರಾಬಾದುಕೋಟೆ ಇದ್ದುದನ್ನು ಒಪ್ಪಿಕೊಳ್ಳಲಾಗಿದೆ. ಐಗೂರು (ಬಳ್ಳುಂ) ಅರಸನನ್ನು ಸಾಮಂತನಾಗಿ ಮಾಡಿಕೊಳ್ಳಲಾಗಿದೆ. ಆದರೆ ಐಗೂರು ಅರಸರ ಬಗ್ಗೆ, ಮಂಜರಾಬಾದು ಕೋಟೆ ಇದ್ದ ಬಗ್ಗೆ ಬರೆದವರು, ಕೊಡಗಿನ ಬಗ್ಗೆ ಹಾಗೇಕೆ ಬರೆದರು? ಮಡಿಕೇರಿ ಕೋಟೆ ಹೈದರಾಲಿಯೇ ಕಟ್ಟಿಸಿದನೆಂದು ಯಾಕೆ ಬರೆದರು? ಲಿಂಗಯ್ಯ ಯಾಕೆ ಸಾಮಂತನಾಗಲಿಲ್ಲ?

**ವೀರರಾಜನ ಪ್ರತಿಷ್ಠಾಪನೆ:** ಐಗೂರು ಪ್ರಾಂತ್ಯದಲ್ಲಿ, ನಂಜರಾಪಟ್ಟಣದ ಆಳ್ವಿಕೆಯ ಪ್ರದೇಶದಿಂದ ಹೊರತಾದ ಎಂಟು ನಾಡುಗಳನ್ನು ಬ್ರಿಟಿಷರು ಕೊಡಗು ಎಂಬುದಾಗಿ ಗುರುತಿಸಿ ರಾಜನನ್ನು ಸ್ಥಾಪಿಸಿದಂತೆ ಕಂಡುಬರುತ್ತದೆ. ಆಗಿನ ಕಾಲದಲ್ಲಿ ಈ

ಪ್ರದೇಶವು ಅರಣ್ಯದಿಂದ ಕೂಡಿದ್ದು ನಾಗರಿಕತೆಯಿಂದ ವಂಚಿತವಾಗಿತ್ತು. ೧೭೯೨ರಲ್ಲಿ ಈ ಪ್ರದೇಶವನ್ನು ವಶಕ್ಕೆ ತೆಗೆದುಕೊಂಡ ಬ್ರಿಟಿಷರು, ಮರುವರ್ಷ, ಕೊಡಗನ್ನು ಹಿಂದೆ ಆಳುತ್ತಿದ್ದ ಅರಸುಮನೆತನದವನೆಂದು ದೊಡ್ಡ ವೀರರಾಜನೆಂಬ ಹೆಸರಿಟ್ಟು ಒಬ್ಬಾತನ ವಶ ಕೊಡುತ್ತಾರೆ. ಎರಡು ವರ್ಷ ಆತನನ್ನು ಪರೀಕ್ಷಿಸಿ ನಂತರ ೧೭೯೬ರಲ್ಲಿ ಪಟ್ಟಾಭಿಷೇಕ ಮಾಡಿಸುತ್ತಾರೆ. ಆತನ ಕರ್ತವ್ಯ ಟಿಪ್ಪು ಸುಲ್ತಾನನ ಹೆಸರು ಹೇಳಿಕೊಂಡು ಹಳ್ಳಿಗಳನ್ನು ಲೂಟಿ ಮಾಡುವುದಾಗಿತ್ತು. ತುರ್ಕರ ದಂಡು ಬರುತ್ತಿದ್ದ ಬಗ್ಗೆ ಇಂದೂ ಹಿರಿಯರು ಆಡಿಕೊಳ್ಳುತ್ತಿದ್ದಾರೆ. ಈತ ಆಗಿನ ಕಾಲದಲ್ಲಿ ೪೦ ಲಕ್ಷ ರೂಪಾಯಿ ಸಂಗ್ರಹಿಸಿದ್ದನೆಂದು ರಿಕ್ತರನ್ನು ಬರೆದಿದ್ದಾನೆ. ಟಿಪ್ಪುಸುಲ್ತಾನನು ೪-೫-೧೭೯೯ರಲ್ಲಿ ಹತನಾದ ನಂತರ ಮೈಸೂರು ರಾಜ್ಯದಲ್ಲಿ ಬ್ರಿಟಿಷ್ ರೆಸಿಡೆಂಟ್ ಕರ್ನಲ್ ಬ್ಯಾರಿಕ್ಲೋಸನು ಬರೆದ ಪತ್ರ ಮತ್ತು ಅದಕ್ಕೆ ವೀರರಾಜ ಬರೆದ ಉತ್ತರದಿಂದ ಅಂದಿನ ಕೊಡಗಿನ ಚಿತ್ರಣ ಸಿಗುತ್ತದೆ.

ಶ್ರೀರಂಗಪಟ್ಟಣ
೧೬ನೇ ನವಂಬರ್ ೧೭೯೯

ಕರ್ನಲ್ ಬ್ಯಾರಿಕ್ಲೋಸ್ ಸಾಹೇಬರವರಿಂದ
ಕೊಡಗಿನ ರಾಜನಿಗೆ,

ಲಾರ್ಡ್ ಮಾರ್ನಿಂಗ್‌ಟನ್ ನನ್ನನ್ನು ಮೈಸೂರು ರಾಜ್ಯದ ಕಮೀಷನರಾಗಿ ನೇಮಿಸಿ ಶ್ರೀರಂಗಪಟ್ಟಣಕ್ಕೆ ವರ್ಗಾಯಿಸಿರುವರೆಂಬುದು ನಿನಗೆ ತಿಳಿದಿರಬಹುದು. ಶ್ರೀರಂಗಪಟ್ಟಣವು ನಮ್ಮ ಕೈಗೆ ಬಿದ್ದ ೫ ದಿನಗಳ ನಂತರ ನಿನ್ನ ಜನರು ಮಹಾರಾಜದುರ್ಗ ಜಿಲ್ಲೆಯನ್ನು ಹೊಕ್ಕು ಹದಿನೇಳು ಗ್ರಾಮಗಳನ್ನು ಸುಲಿಗೆ ಮಾಡಿ ಹೆಂಗಸರು, ಮಕ್ಕಳು, ದನಕರುಗಳು, ಚಿನ್ನ, ಬೆಳ್ಳಿ, ಅಕ್ಕಿ ಮತ್ತು ಬಿತ್ತನೆ ಧಾನ್ಯಗಳನ್ನು ರೈತರಿಂದ ಕಿತ್ತುಕೊಂಡು ಗಡಿಯಾಚೆ ಸಾಗಿಸಿರುವರು ಎಂದು ಮಂಜರಾಬಾದು ಗಡಿಯಿಂದ ನನಗೆ ವರದಿ ಬಂದಿದೆ. ಈ ಪತ್ರದೊಡನೆ ಸುಲಿಗೆ ಮಾಡಲ್ಪಟ್ಟ ವಸ್ತುಗಳ ಪಟ್ಟಿಯೊಂದನ್ನು ಸೇರಿಸಿದ್ದೇನೆ.

ಮಹಾರಾಜದುರ್ಗ ಜಿಲ್ಲೆಯಲ್ಲಿ ಕೊಡಗು ಜನರಿಂದ
ಸುಲಿಗೆ ಮಾಡಲ್ಪಟ್ಟ ವಸ್ತುಗಳ ಪಟ್ಟಿ:

೬೭ ಹೆಂಗಸರು, ೧೧ ಹುಡುಗರು, ೧೦ ಹುಡುಗಿಯರು, ೧೩೮೩ ದನಗಳು, ೫೭೪ ಎಮ್ಮೆಕೋಣಗಳು, ೮೩೪ ಎತ್ತುಗಳು, ೧೨೧ ಕರುಗಳು, ೭೨೯ ಕಂಠೀರಾಯಿ ಪಗೋಡಗಳು, ೮೨ ಬೆಳ್ಳಿ ನಗಗಳು, ೩೬ ಬೆಳ್ಳಿ ಕಡಗಗಳು, ೨೭ ಹವಳದ ಸರಗಳು, ೬೩ ಬೆಳ್ಳಿ ಸೊಂಟದ ಒಡ್ಯಾಣಗಳು, ೫೪ ಜತೆ ಚಿನ್ನ ಕಿವಿಯೋಲೆಗಳು, ೯೩ ತಾಮ್ರದ ಪಾತ್ರೆಗಳು, ೬೭ ಕೋವಿಗಳು, ೬ ಕುದುರೆಗಳು, ೧೫೫ ಕುರಿಗಳು, ೯೫ ಚೂರಿಗಳು, ೯೬ ಹುಲ್ಲು ಕೊಯ್ಯುವ ಕತ್ತಿಗಳು, ೯೦ ಕೊಡಲಿಗಳು, ೫ ಹಿತ್ತಾಳೆ ತಟ್ಟೆಗಳು, ೭ ಕಬ್ಬಿಣದ ಸರಪಣಿಗಳು, ೭೨ ಬಟ್ಟೆಯ ಕಟ್ಟುಗಳು.

ಇದಕ್ಕೆ ದೊಡ್ಡ ವೀರರಾಜ ಬರೆದ ಉತ್ತರವು ಅಂದಿನ ಕೊಡಗಿನ ಮತ್ತು ಆತನ ಸ್ಥಿತಿಗಳನ್ನು ಊಹಿಸುವುದಕ್ಕೆ ಉಪಯುಕ್ತವಾಗುತ್ತದೆ.

"ಟಿಪ್ಪು ಸುಲ್ತಾನನೊಡನೆ ಬ್ರಿಟಿಷರು ಯುದ್ಧ ಪ್ರಾರಂಭಿಸಿದಂದಿನಿಂದ ಎರಡು ಸಲ ಬೊಂಬೈ ಸೈನ್ಯಕ್ಕೆ - ಮೊದಲು ಜನರಲ್ ಸರ್ ಆರ್. ಅಬರ್‌ಕ್ರಾಂಬಿ, ನಂತರ ಜನರಲ್ ಸ್ಟೌಹರ್ಟ್ ಮತ್ತು ಹಾರ್ಟ್ಲಿ ಮುಂದಾಳುತ್ವಕ್ಕೆ ಸಹಾಯ ನೀಡಿದ್ದೇನೆ. ನಾನು ಬ್ರಿಟಿಷ್ ಸರಕಾರದ ಅಪ್ಪಣೆಗಳನ್ನು ಕಾರ್ಯಗತಗೊಳಿಸಲು ಸರ್ವಪ್ರಯತ್ನ ಮಾಡಿರುವುದು ಮತ್ತು ಕಂಪೆನಿಯ ಸೇವೆಯಲ್ಲಿ ನನ್ನ ದೈಹಿಕ ದುಡಿಮೆ ತಮಗೆ ತಿಳಿದ ವಿಷಯ. ನನ್ನ ಸ್ವಕಾಂಕ್ಷೆ - ಗೌರವವನ್ನೂ ಅಪೇಕ್ಷಿಸದೆ ಮಾಡಿದ್ದೇನೆ.

"ಪೂರ್ಣಯ್ಯನು ಬ್ರಾಹ್ಮಣ. ಅದೇ ಆಗಿ ಉಳಿದಿದ್ದಾನೆ. ಅವನ ಜಾತಿ, ನನ್ನ ಜಾತಿ ಒಂದನ್ನೊಂದು ಇಷ್ಟಪಡುವುದಿಲ್ಲ. ಟಿಪ್ಪು ಕಾಲದಲ್ಲೂ ಆತ ನನ್ನ ಹೆಸರು ಕೆಡಿಸಿ, ಅಪರಾಧಿ ಮಾಡಿದ್ದ. ಈಗಲೂ ಆತ ರಾಜ್ಯದ ಯಜಮಾನ. ಆದ ಕಾರಣ ಜಿಲ್ಲೆಯಲ್ಲಿ ತನ್ನ ಮಿತ್ರರನ್ನು, ಸಂಬಂಧಿಕರನ್ನು ಅಧಿಕಾರ ಸ್ಥಾನದಲ್ಲಿಟ್ಟು ನನ್ನ ವಿರುದ್ಧ ತನ್ನ ಜಾತಿಯವರ ಮೂಲಕ ದೂರು ಕೊಡಿಸಿದ್ದಾನೆ.

"ಇದರ ಆಧಾರದ ಮೇಲೆ ಕನ್ನಡ ತಿಳಿಯದ ಕರ್ನಲ್ ಕ್ಲೋಸ್ ಹೆಸರಲ್ಲಿ ಈ ಬ್ರಾಹ್ಮಣ ನನ್ನನ್ನು ಒಬ್ಬ ಗುಲಾಮ ಎಂಬಂತೆ ಸಂಬೋಧಿಸಿ ಪತ್ರ ಬರೆದಿದ್ದಾನೆ. ಇದರಿಂದ ನನಗೆ ಬಹಳ ದುಃಖವಾಗಿದೆ. ಟಿಪ್ಪು ಮಾರ್ಚ್ ೬ರಂದು ಸಿದ್ಧೇಶ್ವರಕ್ಕೆ ಬಂದಾಗ, ಜನರಲ್ ಸುವರ್ಟ್, ಹಾರ್ಟ್ಲಿ ಮತ್ತು ಮಹೋನಿ ಯುದ್ಧ ಪ್ರಾರಂಭಿಸಲು ನನಗೆ ಹೇಳಿದರು. ಮೇ ೧೪ರಂದು ಅಂದರೆ ಶ್ರೀರಂಗಪಟ್ಟಣ ವಶಕ್ಕೆ ಬಂದ ೧೦ ದಿನಗಳ ನಂತರ ಯುದ್ಧ ನಿಲ್ಲಿಸಲು ಮಹೋನಿ ಹೇಳಿದನು.

"ಇದರ ನಂತರ ನನ್ನ ಜನ ಲೂಟಿ ಮಾಡಿದ್ದರೆ ನಾನು ಹೊಣೆಯಾಗಿ ತಕ್ಕ ಪ್ರತಿಫಲ ಸಲ್ಲಿಸುತ್ತೇನೆ. ಕಂಪೆನಿ ಯುದ್ಧದ ಕ್ಯಾಂಪ್‌ಗಳಿಗೆ ನನ್ನ ಜನರ ಹೆಂಗಸರು, ಮಕ್ಕಳು ಭತ್ತ ಕುಟ್ಟಿ ತರುತ್ತಿದ್ದುದು ತಮಗೆ ತಿಳಿದ ವಿಚಾರ. ಒಟ್ಟಿನಲ್ಲಿ ನನಗೆ ಬೇಕಾದ್ದು ನನ್ನ ೬೦೦೦ ಅಥವಾ ೭೦೦೦ ಕೊಡಗರ ಹೊಟ್ಟೆ ಬಟ್ಟೆಯ ಆವಶ್ಯಕತೆಗಳು ಮತ್ತು ಸತ್ತವರ ಸಂಬಂಧಿಕರ ಹಾಗೂ ಗಾಯಾಳುಗಳ ರಕ್ಷಣೆ ಮಾತ್ರ ಆಗಿರುತ್ತದೆ."

ಇದು ಜೇಮ್ಸ್ ಸ್ಟೀವನ್ಸ್‌ಗೆ ಬರೆದ ಪತ್ರದ ಸಾರಾಂಶವಾಗಿರುತ್ತದೆ. ಆದರೆ ಸರಕಾರಕ್ಕೆ ಬರೆದ ಪತ್ರದ ಸಾರಾಂಶ ಬೇರೆಯಾಗಿದೆ.

"ಬಸವಾಪಟ್ಟಣದ ಮುತ್ತಿಗೆಯಲ್ಲಿ ಕೊಡಗು ಜನರು ೬೦ ಹೆಂಗಸರನ್ನು ಕೊಡಗಿಗೆ ಕರೆದುಕೊಂಡು ಬಂದರು. ಆ ಹೆಂಗಸರಲ್ಲಿ ಕೆಲವರು ನನಗೆ ಗೊತ್ತಿಲ್ಲದೆ ಓಡಿಹೋಗಿದ್ದಾರೆ. ಇನ್ನು ಕೆಲವರು ಸತ್ತು ಹೋದರು. ಇಲ್ಲಿನ ಗಂಡಸರು-ಹೆಂಗಸರನ್ನು

ದೊಡ್ಡ ಸಂಖ್ಯೆಯಲ್ಲಿ ಟಿಪ್ಪು ಸುಲ್ತಾನರು ಮೊದಲು ತೆಗೆದುಕೊಂಡು ಹೋಗಿರುವುದರಿಂದ ಈ ಹೆಂಗಸರನ್ನು ಮದುವೆಯಾಗಿ ಅವರೊಡನೆ ಸಂಸಾರ ಮಾಡುತ್ತಿರುವರು. ಈಗ ಅವರು ಈ ಹೆಂಗಸರನ್ನು ಬಿಡಲಾಗುವುದಿಲ್ಲವೆಂದು ನನ್ನಲ್ಲಿ ಪುಕಾರು ಮಾಡಿರುವರು. ನಾನು ಅವರನ್ನು ಈ ಹೆಂಗಸರನ್ನು ಬಿಟ್ಟುಬಿಡಿಯೆಂದು ಜುಲುಮೆ ಮಾಡಲಾರೆ. ಈ ಸಂಗತಿಯನ್ನು ಮೇಲ್ ಸರಕಾರವಾದ ಬ್ರಿಟಿಷರ ಸದ್ಭಾವನೆಗೆ ಬಿಟ್ಟುಬಿಡುತ್ತೇನೆ.

"ನನ್ನ ಜನರು ತೆಗೆದುಕೊಂಡ ಸಾಮಾನು ಮೊದಲಾದವುಗಳಿಗೆ ನಾಲ್ಕೈದು ತಿಂಗಳುಗಳ ಸಮಯ ಕೊಟ್ಟರೆ, ಪರಿಹಾರ ಹಣವಾಗಿ ಸ್ವಲ್ಪ ಹಣ ಕೊಡುತ್ತೇನೆ. ಈಗ ನನ್ನಲ್ಲೂ, ನನ್ನ ಜನರಲ್ಲೂ ಏನೂ ಹಣವಿಲ್ಲ. ನಾಲ್ಕೈದು ತಿಂಗಳಲ್ಲೂ ನನ್ನಲ್ಲಿರುವ ಹಣವು ಸಾಲದಾದರೆ ಬೊಂಬಾಯಿ ಸೈನ್ಯದ ಅಧಿಕಾರಿಗಳಲ್ಲಿ ಹೋಗಿ ನನ್ನ ಕಷ್ಟವನ್ನು ಹೇಳಿ, ಅವರ ಗಲ್ಲ ಹಿಡಿದು ಬೇಡಿಕೊಂಡರೆ ಅವರು ನನಗೆ ಬಾಕಿಯಾಗುವ ಹಣವನ್ನು ಸಾಲ ಕೊಟ್ಟಾರು. ನನ್ನ ಜನರು ಯಾರು ಕುದುರೆಗಳನ್ನು ತಂದಿಲ್ಲ. ಆದರೆ ಕಂಪೆನಿ ಸರ್ಕಾರದವರು ಕುದುರೆಗಳನ್ನು ವಾಪಾಸು ಕೊಡಲೇಬೇಕೆಂದು ಹೇಳಿದರೆ, ಬೊಂಬಾಯಿ ಸೈನ್ಯದ ಜನರಲ್ ಸಾಹೇಬರವರು ನನಗೆ ಬಹುಮಾನವಾಗಿ ಕೊಟ್ಟ ನಾಲ್ಕು ಕುದುರೆಗಳನ್ನು ಹಿಂದಕ್ಕೆ ಕೊಡುತ್ತೇನೆ. ಸಮಯ ಕೊಟ್ಟರೆ ಉಳಿದ ಎರಡು ಕುದುರೆಗಳನ್ನು ಕ್ರಯಕೊಟ್ಟು ತಂದು ಕೊಡುತ್ತೇನೆ."

ಟಿಪ್ಪುಸುಲ್ತಾನನ ಅಂತ್ಯದ ತನಕ ಮತ್ತು ಮುಂದಿನ ಒಂದು ದಶಕದಲ್ಲಿ ದೊಡ್ಡವೀರರಾಜನ ನಡವಳಿಕೆಯಲ್ಲಿ ವ್ಯತ್ಯಾಸವನ್ನು ಕಾಣಬಹುದು. ಹಾಗೆಯೇ ನಂತರ ಆಳ್ವಿಕೆಗೆ ಬಂದ ಆತನ ತಮ್ಮ ಲಿಂಗರಾಜನಲ್ಲಿ ಪರಿವರ್ತನೆಯನ್ನು ಕಾಣಬಹುದು. ಇದಕ್ಕೆ ಕಾರಣ ಪ್ರಾಯಃ ಬ್ರಿಟಿಷರು ಕೊಡಗಿನ ಬಗ್ಗೆ ನಿರಾಸಕ್ತಿ ತಳೆದದ್ದೇ ಇರಬಹುದು. ೧೮೧೧ರಿಂದ ೧೮೨೦ರ ತನಕ ಲಿಂಗರಾಜ, ಆ ಬಳಿಕ ಪಟ್ಟಕ್ಕೆ ಬಂದ ಆತನ ಮಗ ಚಿಕ್ಕವೀರರಾಜ ಕೊಡಗಿಗೆ ಬರುತ್ತಿದ್ದ ಬ್ರಿಟಿಷ್ ಅಧಿಕಾರಿಗಳನ್ನು ಚೆನ್ನಾಗಿ ಸತ್ಕರಿಸಿ, ಸಂತಸಪಡಿಸಿ ಕಳುಹಿಸುವುದರಲ್ಲಿ ನಿಪುಣತೆ ತೋರಿದ್ದು ಅವರಿಗೆ ಒಳ್ಳೆ ಫಲ ಕೊಟ್ಟಿತ್ತು. ಕಂಪೆನಿ ಸರಕಾರವನ್ನು ಆಡಳಿತದಿಂದ ದೂರವಿಟ್ಟು ಅವರಿಗೆ ನಿರಂಕುಶ ಪ್ರಭುತ್ವದಿಂದ ಮೆರೆಯುವುದು ಸಾಧ್ಯವಾಗಿತ್ತು. ೧೮೨೭ರಿಂದ ಮೈಸೂರಿನ ರೆಸಿಡೆಂಟ್ ಕಾಜ್‌ಮೇಜರ್ ಚಿಕ್ಕವೀರರಾಜನಿಗೆ ತೊಂದರೆ ಕೊಡಲು ಪ್ರಾರಂಭಿಸಿದನು. ಕೊಡಗಿನ ಜನರೊಡನೆ ನೇರ ಸಂಪರ್ಕಕ್ಕೆ ಪ್ರಯತ್ನಿಸಿದನು. ತಂಗಿ ದೇವಮ್ಮಾಜಿ ಮತ್ತು ಆಕೆಯ ಗಂಡ ಚೆನ್ನಬಸವನನ್ನು ಎತ್ತಿಕಟ್ಟಿದನು. ಚೆನ್ನಬಸವ ಕೊಡವನಾಗಿದ್ದು ಮದುವೆ ಸಂದರ್ಭ ಲಿಂಗಾಯಿತನಾದವನು.

ಕಿತ್ತೂರು ರಾಣಿ ಚೆನ್ನಮ್ಮ ಬ್ರಿಟಿಷರೊಡನೆ ಹೋರಾಡಿದ್ದು ೧೮೨೪ರಲ್ಲಿ. ಅಂದರೆ ಆ ದಶಕದಲ್ಲಿ ಬ್ರಿಟಿಷರು ಯಾವುದಾದರು ನೆಪ ಹೇಳಿ ದೇಶೀಯ ಅರಸರನ್ನು ಪದಚ್ಯುತಿಗೊಳಿಸಿ ನೇರ ಆಡಳಿತವನ್ನು ವಹಿಸಿಕೊಳ್ಳಲು ತವಕಿಸುತ್ತಿದ್ದ ಕಾಲ. ಕೊಡಗಿನಲ್ಲಿ ಸುಮಾರು ಇದೇ ಕಾಲದಲ್ಲಿ ಚೆನ್ನಬಸವನಿಗೆ ಆತನ ಸಂಬಂಧಿಕರ ನೆರವನ್ನು ಕಲ್ಪಿಸಿ,

ಚಿಕ್ಕವೀರರಾಜನ ವಿರುದ್ಧ ಎತ್ತಿಕಟ್ಟುವ ಕೆಲಸ ಪ್ರಾರಂಭವಾಯಿತು. ಕಾಜ್‌ಮೇಜರನು ೧೮೨೬ ನವಂಬರದಲ್ಲಿ ಮಡಿಕೇರಿಗೆ ಭೇಟಿ ನೀಡಿದಲ್ಲಿಂದ ಆತನು ೧೭-೯-೧೮೩೨ರ ಪತ್ರಮೂಲಕ ಸರಕಾರದ ಮುಖ್ಯ ಕಾರ್ಯದರ್ಶಿಗೆ, ಚೆನ್ನಬಸವ ಮತ್ತು ಕೊಡಗು ರಾಜನ ತಂಗಿಯಾಗಿರುವ ಆತನ ಪತ್ನಿ ದೇವಮ್ಮಾಜಿ ತನ್ನಲ್ಲಿ ಆಶ್ರಯವನ್ನು ಕೇಳಿ ಬಂದು ಸೇರಿರುವುದಾಗಿ ಬರೆಯುವಲ್ಲಿಯ ತನಕ ನಡೆದಿರಬಹುದಾದ ಷಡ್ಯಂತ್ರ ಊಹನಾತೀತ.

ದಿವಾನರ ಪೈಕಿ ಚೆಪ್ಪುಡಿರ ಪೊನ್ನು ದಿವಾನ ನಿಷ್ಠಾವಂತ. ಈತ ಚಿಕ್ಕವೀರರಾಜನೊಂದಿಗೆ ಕಾಶಿಯಲ್ಲಿರಲು ಹೊರಟಾತ. ಆದರೆ ಬೋಪು ನಯವಂಚಕ ಹಾಗೂ ತನ್ನನ್ನು ಸಂಪೂರ್ಣವಾಗಿ ಬ್ರಿಟಿಷರಿಗೆ ಅರ್ಪಿಸಿಕೊಂಡವನು. ಬೋಪು ದಿವಾನ ತನ್ನ ವಾಕ್‌ಚಾತುರ್ಯದಿಂದ ಅನೇಕರನ್ನು ಮರುಳುಮಾಡಿ ಬ್ರಿಟಿಷರನ್ನು ಅವಲಂಬಿಸಲು ಪ್ರಚೋದಿಸಿರುವುದೂ, ಅದರಲ್ಲಿ ಯಶಸ್ವಿಯಾಗಿರುವುದೂ ಅಲ್ಲಲ್ಲಿ ಗೊತ್ತಾಗುತ್ತದೆ. ಪ್ರಾಯಃ ಬ್ರಿಟಿಷರಿಗೆ ಇಡೀ ಭಾರತದಲ್ಲಿ ಎಲ್ಲಿಯೂ ಇಷ್ಟೊಂದು ಪ್ರೋತ್ಸಾಹದಾಯಕ ಬೆಂಬಲ ಸಿಕ್ಕಿರಲಾರದು.

೧೯೧೯ರಲ್ಲಿ ಜಲಿಯನ್‌ವಾಲಬಾಗ್ ನರಮೇಧ ನಡೆಸಿದ ಜನರಲ್ ಡಯರ್‌ನನ್ನು ೨೧ ವರ್ಷಗಳ ನಂತರ ಉದಾಮ್‌ಸಿಂಗ್‌ನೆಂಬ ಯುವದೇಶಭಕ್ತ ಹೊಂಚುಹಾಕಿ ಲಂಡನ್‌ನಲ್ಲಿ ಕೊಲೆ ಮಾಡಿದ. ಅದೇ ಕಾಲಘಟ್ಟದಲ್ಲಿ ಜನರಲ್ ಪದವಿಗೆ ತರಬೇತಿ ಹೊಂದಲು ಮಾನಸಿಕವಾಗಿ ತಯಾರಾದ ಬ್ರಿಟಿಷರ ಪರ ಯುವಕರು ಕೊಡಗಿನಲ್ಲಿ ಕಾಣಿಸಿಕೊಂಡರು. ಆದರೆ ಕೊಡಗಿನ ಕೆಲವು ಯುವಕರು ಸೈನ್ಯದ ಉನ್ನತ ಪದವಿಯನ್ನು ತೊರೆದು ಸುಭಾಷ್‌ಚಂದ್ರ ಬೋಸರ ಐ.ಎನ್.ಎ. ಸೇರಿದರೆಂಬ ವದಂತಿಯೂ ಇದೆ. ಸ್ವಾತಂತ್ರ್ಯ ಸಿಕ್ಕಿ ೫೦ ವರ್ಷಗಳ ನಂತರವೂ ಅಂಥವರ ಬಗ್ಗೆ ಏನೇನೂ ಕಳಕಳಿ ಇಲ್ಲದೆ ಜ. ಡಾಯರನ ಸಂಕೋಲೆಯ ಕೊಂಡಿಗಳಿಗೆ ಪ್ರಾಶಸ್ತ್ಯ ಸಿಗುತ್ತಿರುವುದಕ್ಕೆ ಸರಕಾರ ಮತ್ತು ಜನತೆಯ ವಿವೇಚನಾ ದಾರಿದ್ರ್ಯವೇ ಕಾರಣವಾಗಿದೆ. ■

---

ಕೆನರಾ ಜಿಲ್ಲೆಯಲ್ಲಿ ಇಷ್ಟೊಂದು ದೊಡ್ಡ ಪ್ರಮಾಣದಲ್ಲಿ ಪ್ರಮುಖ ಜನ ಸಮುದಾಯ ಬ್ರಿಟಿಷ್ ಸರಕಾರದ ವಿರುದ್ಧ ಭಾಗವಹಿಸಲು ತಯಾರಾದರಲ್ಲಾ! ಇದು ಹೇಗೆ ಅಥವಾ ಯಾರಿಂದ ಈ ಪಿತೂರಿ ರೂಪಿಸಲ್ಪಟ್ಟಿತು ಎನ್ನುವುದನ್ನು ಖಚಿತಮಾಡಿಕೊಳ್ಳುವುದು ಪ್ರಾಯಃ ಅಗತ್ಯ.

ಇಂಡಿಯದಲ್ಲಿ ಸಂದರ್ಭ ಸಿಕ್ಕಿದಾದ ದಂಗೆ ಎಬ್ಬಿಸಲು ತಯಾರಾಗಿರುವ, ಸರಕಾರದ ಮೇಲೆ ಕಹಿ ಮನಸ್ಸಿನ ಜನರು ಎಲ್ಲಾ ಕಡೆ ಇದ್ದಾರೆ ಎಂಬುದು ಆಗಾಗ್ಗೆ ಸಾಬೀತಾಗಿರುತ್ತದೆ. ಆದರೆ ಶಾಂತಿಯುತ ವಾತಾವರಣದಲ್ಲಿ - ಗೌರವಾನ್ವಿತ ಕಂಪನಿಯ ನೇರವಾದ ಆಡಳಿತಕ್ಕೆ ಸೇರಿದ ಇಂತಹ ಪ್ರದೇಶದ ಜನರ ಪೈಕಿ ಇಲ್ಲಿಯ ರೈತಾಪಿ ನಿವಾಸಿಗಳಲ್ಲಿ ಅನೇಕ ಸಾವಿರ ಜನರನ್ನು ಸರಕಾರದ ವಿರುದ್ಧ ಶಸ್ತ್ರ ಹಿಡಿದು ನಿಲ್ಲುವಂತೆ ಒಂದುಗೂಡಿಸುವುದು ಹೇಗೆ ಸಾಧ್ಯವಾಯಿತು? ಕೆಲವೇ ದಿನಗಳ ಮುನ್ನೆಚ್ಚರಿಕೆಯೊಳಗೆ ದೃಢಸಂಕಲ್ಪದಿಂದ, ಬದ್ಧ ವೈರವನ್ನು ಪ್ರಕಟಿಸುವಂತೆ ಮಾಡಲು ಹೇಗ ಸಾಧ್ಯವಾಯಿತೆಂಬ ಸಮಸ್ಯೆಯನ್ನು ಬಗೆಹರಿಸಬೇಕಾಗಿದೆ.

**- ಕಾಟನ್ ರಿಪೋರ್ಟ್ ಮೇಲೆ ಕಬ್ಬನ್‌ನ ಟಿಪ್ಪಣಿ**

# ೪. ಅಮರ ಸುಳ್ಯ ಕ್ರಾಂತಿಯ ಚರಿತ್ರೆ

ವ್ಯಾಪಾರದ ಉದ್ದೇಶದಿಂದ ಭಾರತಕ್ಕೆ ಬಂದ ಬ್ರಿಟಿಷರು ಸ್ಥಳೀಯ ರಾಜರುಗಳ ಅನೈಕ್ಯ, ವೈಷಮ್ಯಗಳ ಪ್ರಯೋಜನ ಪಡೆದು ನಿಧಾನವಾಗಿ ಇಡೀ ದೇಶವನ್ನು ತಮ್ಮ ತೆಕ್ಕೆಗೆ ತೆಗೆದುಕೊಂಡು ನಮ್ಮನ್ನು ಎರಡು ಶತಮಾನಗಳಿಗೂ ಅಧಿಕ ಕಾಲ ಆಳಿದ್ದು ಈಗ ಇತಿಹಾಸ. ದಕ್ಷಿಣ ಭಾರತದಲ್ಲಿ ಅವರಿಗೆ ಪ್ರಬಲ ಎದುರಾಳಿಗಳಾಗಿದ್ದ ಟಿಪ್ಪುಸುಲ್ತಾನ ಮತ್ತು ಐಗೂರಿನ ವೆಂಕಟಾದ್ರಿ ನಾಯಕರನ್ನು ಕೊಂದ ಬಳಿಕ ಬ್ರಿಟಿಷರು ಕರ್ನಾಟಕದಿಂದ ತಮಗೇನೂ ಪ್ರತಿರೋಧ ಬಾರದು ಎಂದೇ ತಿಳಿದುಕೊಂಡಿದ್ದರು. ಅವರ ತಿಳಿವಳಿಕೆ ತಪ್ಪು ಎಂದು ಅಮರ ಸುಳ್ಯದ ಸ್ವಾತಂತ್ರ್ಯ ಸಮರ ತೋರಿಸಿಕೊಟ್ಟಿತು.

ಟಿಪ್ಪು ಸುಲ್ತಾನನ ಪರವಹಿಸಿದರೆಂಬ ಕಾರಣಕ್ಕೆ ಬ್ರಿಟಿಷರು ಮಲೆನಾಡಿನ ಪಾಳೇಗಾರರನ್ನು ಸದೆಬಡಿಯತೊಡಗಿದಾಗ ನಗರೆಯಲ್ಲಿ ೧೮೩೦ರಲ್ಲಿ ಪ್ರತಿರೋಧ ಕಾಣಿಸಿಕೊಂಡಿತು. ಆಗ ಮೈಸೂರನ್ನು ಆಳುತ್ತಿದ್ದ ಮುಮ್ಮಡಿ ಕೃಷ್ಣರಾಜ ಒಡೆಯರನ್ನು ಕಳುಹಿಸಿ, ಅಲ್ಲಿನ ಆಡಳಿತವನ್ನು ಬ್ರಿಟಿಷರು ನಿಯಂತ್ರಣಕ್ಕೆ ತಂದರು. ತಮಗೆ ಹೀಗೆ ಸಹಾಯ ಮಾಡಿದರೂ ಮುಮ್ಮಡಿ ಕೃಷ್ಣರಾಜನು ಆಡಳಿತದಲ್ಲಿ ಅಸಮರ್ಥನೆಂದೂ, ಆತ ಸಾಲದಲ್ಲಿ ಮುಳುಗಿರುವನೆಂದೂ ಮೈಸೂರು ರೆಸಿಡೆಂಟನು ಮದ್ರಾಸು ಗವರ್ನರನಿಗೆ ಪತ್ರ ಬರೆದ. ಇದು ತಮಗೆ ಸಹಾಯ ಮಾಡುತ್ತಿದ್ದ ಭಾರತೀಯರನ್ನು ಕೂಡಾ ಬ್ರಿಟಿಷರು ನಂಬುತ್ತಿರಲಿಲ್ಲ ಎನ್ನುವುದಕ್ಕೆ ಸಾಕ್ಷಿ.

ಆದರೆ ಬೂದಿ ಬಸವ ಎಂಬಾತನನ್ನು ಅರಸು ವಂಶಸ್ಥನೆಂದು ಪ್ರಚುರಪಡಿಸಿ ೧೮೩೦ರಲ್ಲಿ ಐಗೂರು ಮತ್ತು ತರಿಕೆರೆಯ ಪಾಳೇಗಾರರು ಬಂಡಾಯವೆಬ್ಬಿಸಿದರು. ಇದನ್ನೇ ಕಾರಣ ಮಾಡಿ ಬ್ರಿಟಿಷರು ೨೧-೧೦-೧೮೩೧ರಂದು ಮುಮ್ಮಡಿ ಕೃಷ್ಣರಾಜನನ್ನು ಪದಚ್ಯುತಿಗೊಳಿಸಿದರು. ಆಗ ತೀವ್ರವಾದ ಪ್ರತಿರೋಧ ಕಂಡುಬಾರದ ಕಾರಣ ಬ್ರಿಟಿಷರು ಇನ್ನಷ್ಟು ಪ್ರಬಲರಾದರು. ೧೫-೩-೧೮೩೪ರಂದು ಕೊಡಗಿನ ಚಿಕ್ಕವೀರರಾಜನನ್ನು ಪದಚ್ಯುತಿಗೊಳಿಸಲಾಯಿತು. ಇವೆರಡು ಘಟನೆಗಳು ಮೈಸೂರಿನ ಮತ್ತು ಮಲೆನಾಡಿನ

ಜನರ ಆಕ್ರೋಶಕ್ಕೆ ಕಾರಣವಾಯಿತು. ೧೮೩೭ರಲ್ಲಿ ಅದು ಕ್ರಾಂತಿಯ ರೂಪದಲ್ಲಿ ಕಾಣಿಸಿಕೊಂಡಿತು.

ಆಗಿನ ಕಾಲದಲ್ಲಿ ರಾಜಭಕ್ತಿ ಜನಸಾಮಾನ್ಯರಲ್ಲಿ ಬಹಳವಾಗಿತ್ತು. ದಂಗೆಯ ಸೂತ್ರಧಾರಿಗಳು ಇದನ್ನು ತಮ್ಮ ಅನುಕೂಲಕ್ಕೆ ದುಡಿಸಿಕೊಂಡರು. ಅಪ್ಪಾಜಿ ಅರಸನ ಮಗ ವೀರಪ್ಪ ಜೀವಂತ ಇದ್ದಾನೆ ಎಂಬ ಪ್ರಚಾರ ಪ್ರಾರಂಭವಾಯಿತು. ಅಪರಂಪಾರನೆಂಬ ಸನ್ಯಾಸಿಯೊಬ್ಬ ಕಾಣಿಸಿಕೊಳ್ಳುತ್ತಾನೆ. ಹುಲಿಕಡಿದ ನಂಜಯ್ಯ ಆತನೊಡನೆ ಸೇರಿಕೊಳ್ಳುತ್ತಾನೆ. ಕೂಜುಗೋಡು ಮನೆಯಲ್ಲಿ ಇವರು ಆಶ್ರಯ ಪಡೆಯುತ್ತಾರೆ. ಆದರೂ ೧೮೩೫ರಲ್ಲಿ ಅಪರಂಪಾರನನ್ನು ಮಂಜರಾಬಾದಿನಲ್ಲಿ ಬಂಧಿಸುತ್ತಾರೆ. ಅದೇ ಕೆಲಸವನ್ನು ಮುಂದುವರಿಸಲು ಅಪ್ಪಾಜಿಯ ಇನ್ನೊಬ್ಬ ಮಗನೆಂದು ಕಲ್ಯಾಣಪ್ಪನನ್ನು ತಯಾರು ಮಾಡುತ್ತಾರೆ. ಮುಂದಿನ ವರ್ಷ ಆತನ ಹೆಸರಲ್ಲಿ ಜನ ಸಂಘಟಿತರಾಗತೊಡಗುತ್ತಾರೆ. ೧೮೩೬ರಲ್ಲಿ ಕಲ್ಯಾಣಪ್ಪನನ್ನು ಬೈತೂರಲ್ಲಿ ಸೆರೆ ಹಿಡಿಯುತ್ತಾರೆ. ಆಗ ಕಲ್ಯಾಣಪ್ಪನ ಹೆಸರಲ್ಲಿ ಇನ್ನೊಬ್ಬನನ್ನು ಪರಿಚಯಿಸುವ ನಿರ್ಧಾರಕ್ಕೆ ಬರುತ್ತಾರೆ. ಪುಟ್ಟ ಬಸಪ್ಪ ಎಂಬಾತನನ್ನು ಹುಲಿಕಡಿದ ನಂಜಯ್ಯ ಆರಿಸಿ ಪೂಮಾಲೆ ಬೆಟ್ಟದಲ್ಲಿ ಆತನನ್ನು ಇರಿಸಿಕೊಂಡು ನಾನಾ ಭಾಗದ ಜನರಿಗೆ ಆತನನ್ನು ಪರಿಚಯಿಸುತ್ತಾನೆ.

ಪ್ರಭಾವಿ ಮುಖಂಡ ಕೆದಂಬಾಡಿ ರಾಮಯ್ಯ ಗೌಡನ ಮುಂದಾಳತ್ವದಲ್ಲಿ ಮಾರ್ಚ್ ೩೦ರಂದು ಬೆಳ್ಳಾರೆಯಲ್ಲಿ ೨೦೦೦ ಸಶಸ್ತ್ರ ಜನರು ಸೇರಿ ಖಜಾನೆಯನ್ನು ವಶಕ್ಕೆ ತೆಗೆದುಕೊಳ್ಳುತ್ತಾರೆ. ಅದೇ ದಿನ ೨೦೦ ಸೈನಿಕರ ತಂಡ ಕುಂಚಡ್ಕ ತಿಮ್ಮ ಮತ್ತು ಕುಡೆಕಲ್ಲ ಪುಟ್ಟ ಇವರ ಮುಂದಾಳತ್ವದಲ್ಲಿ ಕಾಸರಗೋಡಿಗೆ ಹೋಗುತ್ತದೆ. ಇವರು ಎಪ್ರಿಲ್ ಎರಡರಂದು ಕಾಸರಗೋಡು, ಮೂರರಂದು ಕುಂಬ್ಳೆ, ನಾಲ್ಕರಂದು ಮಂಜೇಶ್ವರಗಳನ್ನು ತಮ್ಮ ವಶಕ್ಕೆ ತೆಗೆದುಕೊಳ್ಳುತ್ತಾರೆ. ಅಲ್ಲಿ ತಮ್ಮ ಸರಕಾರದ ತಹಶೀಲ್ದಾರರಿಗೆ ಅಧಿಕಾರ ವಹಿಸಿ, ಎಲ್ಲಾ ಸರಕಾರಿ ನೌಕರರಿಗೆ ಸಂಬಳ ವಿತರಿಸಿ, ತಮ್ಮ ಸರಕಾರಕ್ಕೆ ವಿಧೇಯರಾಗಿರುವುದಾಗಿ ಮುಚ್ಚಳಿಕೆ ಬರೆಸಿಕೊಳ್ಳುತ್ತಾರೆ. ಹಿಂದೆಯೇ ನಿಶ್ಚಯಿಸಿದ ಪ್ರಕಾರ ಎಪ್ರಿಲ್ ಐದರಂದು ಮಂಗಳೂರು ತಲುಪುತ್ತಾರೆ.

ಮಾರ್ಚ್ ೩೦ರಂದು ೨೦೦ ಸೈನಿಕರ ಇನ್ನೊಂದು ತಂಡ ಬಿಸ್ಲೆ ಮಾರ್ಗವಾಗಿ ಮಡಿಕೇರಿ ಕಡೆ ಹೊರಟಿರುತ್ತದೆ. ದಾರಿಯಲ್ಲಿ ಸಿಕ್ಕಿದ ಎಲ್ಲಾ ಸರಕಾರಿ ಕಚೇರಿಗಳನ್ನು, ಖಜಾನೆಗಳನ್ನು ಸ್ವಾಧೀನ ಪಡಿಸಿಕೊಳ್ಳುತ್ತಾ, ವಿರೋಧಿಸಿದವರನ್ನು ಸೆರೆಹಿಡಿಯುತ್ತಾ, ತಮ್ಮ ಕಡೆಯ ಅಧಿಕಾರಿಗಳನ್ನು ನೇಮಿಸುತ್ತಾ ಮುಂದುವರಿಯುತ್ತಾರೆ.

ಅದೇ ಮಾರ್ಚ್ ೩೦ರ ರಾತ್ರಿ ಬೆಳ್ಳಾರೆಯ ಘಟನೆಯ ವರದಿ ಕಲೆಕ್ಟರ್ ಲೆವಿನಿಗೆ ತಲುಪುತ್ತದೆ. ಮರುದಿನ ಬೆಳಗ್ಗೆ ೧೬೧ ಸೈನಿಕರೊಂದಿಗೆ ಹೊರಟು ಪುತ್ತೂರಿಗೆ

ತಲುಪುವಾಗ ರಾತ್ರಿಯಾಗಿರುತ್ತದೆ. ಮರುದಿನ ನೋಡುವಾಗ ೧೨೦೦ಕ್ಕೂ ಮೀರಿ ಸಶಸ್ತ್ರ ಜನರು ಆತನನ್ನು ಸುತ್ತುವರಿದದ್ದು ಕಂಡು ಕಂಗಾಲಾಗುತ್ತಾನೆ. ಏಪ್ರಿಲ್ ೨ರ ರಾತ್ರಿ ಮಂಗಳೂರಿಗೆ ಪಲಾಯನ ಮಾಡುತ್ತಾನೆ. ಅಲ್ಲಿ ನೋಡಿದರೆ ನಾಗರಿಕರು ಬ್ರಿಟಿಷರಿಗೆ ಅಸಹಕಾರ ಹಾಗೂ ಎದುರಾಳಿಗಳಿಗೆ ಭವ್ಯ ಸ್ವಾಗತ ನೀಡಿ ಅದರೊಂದಿಗೆ ಸೇರಿಕೊಂಡಿರುವುದು ಕಂಡುಬರುತ್ತದೆ.

ಏಪ್ರಿಲ್ ೫ರಂದು ಬಾವುಟಗುಡ್ಡದಲ್ಲಿ ಹಾರಾಡುತ್ತಿದ್ದ ಬ್ರಿಟಿಷರ ಧ್ವಜವನ್ನು ಇಳಿಸಿ ತಮ್ಮ ಧ್ವಜಾರೋಹಣ ಮಾಡುತ್ತಾರೆ. ಬ್ರಿಟಿಷ್ ಪ್ರಜೆಗಳಿಗೆ ಓಡಿಹೋಗಲು ಧೈರ್ಯಸಾಲದೆ ಕಂಟೋನ್‌ಮೆಂಟಿನ ಭದ್ರನೆಲೆಯಲ್ಲಿ ಅವಿತುಕೊಳ್ಳುತ್ತಾರೆ. ಮರುದಿನ ಹೊನ್ನಾವರದಿಂದ ೬೦ ಸೈನಿಕರು ಗುಂಡುಮದ್ದುಗಳೊಂದಿಗೆ ಬಂದ ಮೇಲೆ ಬ್ರಿಟಿಷ್ ಪ್ರಜೆಗಳನ್ನು ಅವರು ಸುತ್ತುವರಿದು ಬಹಳ ಸಾಹಸದಿಂದ ಹಡಗು ಹತ್ತಿಸಿ ಕಣ್ಣನೂರಿಗೆ ಕಳುಹಿಸುತ್ತಾರೆ.

ಬ್ರಿಟಿಷರ ಸೈನ್ಯದಲ್ಲಿ ಸುಭೇದಾರನಾಗಿದ್ದ ಗುಡ್ಡೆ ಅಪ್ಪಯ್ಯ ಅವರ ವಿರೋಧಿಗಳೊಂದಿಗೆ ಸೇರಿದ್ದು ಅವರಿಗೆ ದೊಡ್ಡ ಆತಂಕವಾಗುತ್ತದೆ. ಅಪ್ಪಯ್ಯನ ಸಹೋದರ ಗುಡ್ಡೆ ತಮ್ಮಯ್ಯ ಅರಸರ ಕಾಲದಲ್ಲಿ ಸುಳ್ಯದಲ್ಲಿ ಪಾರುಪತ್ಯಗಾರನಾಗಿದ್ದು ಅರಸನ ಪದಚ್ಯುತಿ ನಂತರ ದಂಗೆಯನ್ನು ರೂಪಿಸುವವರೊಡನೆ ಸೇರಿಕೊಂಡಿರುತ್ತಾರೆ. ಗುಡ್ಡೆ ಅಪ್ಪಯ್ಯನು ಮೇಲ್ ಕೊಡಗಿಗೆ ಹಿಂತಿರುಗಿ ನಾಕುನಾಡು ಸುಭೇದಾರ ಮಾದಯ್ಯನನ್ನು ದಂಗೆಯಲ್ಲಿ ಭಾಗವಹಿಸಲು ಪ್ರಚೋದಿಸುತ್ತಾನೆ. ಅವನ ಸ್ನೇಹಿತರಾದ ಇತರ ಸುಭೇದಾರರು ಮಡಿಕೇರಿಗೆ ದಾಳಿ ಇಡುವಾಗ ಸಹಕರಿಸಲು ಒಪ್ಪಿಕೊಳ್ಳುತ್ತಾರೆ. ಈ ವಿಚಾರವನ್ನು ಕುಂದಳ್ಳಿಯಲ್ಲಿ ಬಂದು ಇಳಿದುಕೊಂಡಿರುವ ಕೂಜು ಗೋಡು ಅಪ್ಪಯ್ಯ ಮತ್ತು ಮಲ್ಲಪ್ಪ ಸಹೋದರರಿಗೆ ತಿಳಿಸಲು ಗುಡ್ಡೆ ಅಪ್ಪಯ್ಯ ಹೋಗುತ್ತಾನೆ. ಅವರು ಕೊಡಗಿನ ಸುಭೇದಾರ ಅಪ್ಪಚ್ಚುವನ್ನು ಸೆರೆಹಿಡಿಯುತ್ತಾರೆ.

ಇತ್ತ ಕೊಡಗಿನಲ್ಲಿ ಕ್ಯಾ| ಲೀ ಹಾರ್ಡಿಗೆ ಬೋಪು ದಿವಾನನ ಸಂಬಂಧಿಕರು ತಮ್ಮನ್ನು ವಿರೋಧಿಸಲು ಹೊರಟಿರುವುದು ಗೊತ್ತಾಗಿ ಆತನನ್ನು ಕರೆದು ಗದರಿಸುತ್ತಾನೆ. ಅವರ ಮನವೊಲಿಸುವ ಭರವಸೆಯ ಮಾತುಕೊಟ್ಟು ಮಾದಯ್ಯನಲ್ಲಿಗೆ ಹೋಗುತ್ತಾನೆ. ಅವನನ್ನು ಆಮಿಷಕ್ಕೆ ಬಲಿ ಬೀಳಿಸಿ ನಿಷ್ಠೆ ಬದಲಾಯಿಸುವಂತೆ ಮಾಡುತ್ತಾನೆ. ಕೊನೆಗೂ ಬ್ರಿಟಿಷರ ಕುತಂತ್ರ ಸಫಲವಾಗುತ್ತದೆ. ಕೊಡಗಿನ ಸೈನ್ಯದ ಬರುವಿಕೆಯ ನಿರೀಕ್ಷೆಯಲ್ಲಿದ್ದ ಕುಕ್ಕನೂರು ಚೆಣ್ಣಯ್ಯ, ಪೆರಾಜೆ ಕೃಷ್ಣಯ್ಯ, ಕರಣೀಕ ಸುಬ್ಬಯ್ಯ ಮೊದಲಾದವರು ಅವರನ್ನು ಸ್ವಾಗತಿಸುತ್ತಾರೆ. ಆಗ ಅವರನ್ನು ಸುಲಭವಾಗಿ ಸೆರೆಹಿಡಿಯುತ್ತಾರೆ. ಇದೇ ನಾಟಕ ಕುಂದಳ್ಳಿಯಲ್ಲಿಯೂ ನಡೆಯುತ್ತದೆ.

ಆದರೆ ಅಪ್ಪಚ್ಚು ಮೊದಲಾದ ಕೊಡಗು ಸೈನ್ಯದ ಅಧಿಕಾರಿಗಳು ಇವರಲ್ಲಿ ಒತ್ತೆಯಾಳುಗಳಾಗಿದ್ದ ಕಾರಣ ಇವರೊಂದಿಗೆ ಒಪ್ಪಂದಕ್ಕೆ ಬರಬೇಕಾಗುತ್ತದೆ. ಆದರೂ ಸೆರೆಸಿಕ್ಕಿದ್ದ ನಾಲ್ಕು ಜನರನ್ನು ಗಲ್ಲಿಗೇರಿಸುತ್ತಾರೆ. ಮೇ ೨೭ರಂದು ಲಕ್ಷ್ಮಪ್ಪ ಬಂಗರಸ, ಮೇ ೩೧ರಂದು ಉಪ್ಪಿನಂಗಡಿ ಮಂಜ, ಜೂನ್ ೧೯ರಂದು ಪುಟ್ಟಬಸವ, ಅಕ್ಟೋಬರ್ ೩೧ರಂದು ಗುಡ್ಡೆ ಅಪ್ಪಯ್ಯ ಗಲ್ಲಿಗೇರಿಸಲ್ಪಡುತ್ತಾರೆ. ಖೈದಿಗಳ ಪೈಕಿ ವ[illegible]ಯ್ಯ, ಮುಂಗಣ್ಣ, ಬಂಗಾರಿ ಜೈಲಿನಲ್ಲಿ ಮೃತರಾಗುತ್ತಾರೆ. ಫೌಜುದಾರಿ ಅದಾಲತ್‌ನಲ್ಲಿ ಮರಣದಂಡನೆಗೆ ಗುರಿಯಾಗಿದ್ದ ೫ ಜನರಿಗೆ ಮತ್ತೆ ವಿನಾಯಿತಿ ಸಿಗುತ್ತದೆ.

ಕುಕ್ಕನ್ನೂರು ಚೆನ್ನಯ್ಯ ಮತ್ತು ಪೆರಾಜೆಯ ಕೃಷ್ಣಯ್ಯ ಇಬ್ಬರಿಗೆ ಮಾತ್ರ ಜೀವಾವಧಿ ಶಿಕ್ಷೆ ಆದಂತೆ ತಿಳಿದು ಬರುತ್ತದೆ. ಮದ್ರಾಸ್ ಪತ್ರಾಗಾರದಲ್ಲಿ ಸುರಕ್ಷಿತವಾಗಿರುವ ಖೈದಿಗಳ ವಿಚಾರಣೆ ದಾಖಲೆಗಳು ಈ ದಂಗೆಯ ಬಗ್ಗೆ ಇನ್ನಷ್ಟು ಸತ್ಯಾಂಶಗಳನ್ನು ನೀಡಬಲ್ಲವು.

ದಿವಾನ್ ಲಕ್ಷ್ಮೀನಾರಾಯಣ ಒಳಸಂಚಿನಲ್ಲಿ ಭಾಗಿಯಾಗಿದ್ದನೆಂಬ ಅನುಮಾನದಿಂದ ಸೆರೆಮನೆ ಸೇರಬೇಕಾಯಿತು. ಆತನ ಹೆಂಡತಿಯ ಸಹೋದರ ಕೃಷ್ಣಯ್ಯನೇ ಶಿಕ್ಷೆಗೊಳಗಾದವನು. ಕರಣಿಕ ಸುಬ್ಬಯ್ಯ ದಿವಾನರ ಮಗಳ ಗಂಡ, ದಿವಾನರ ತಮ್ಮ ರಾಮಪ್ಪಯ್ಯ ಇವರಿಬ್ಬರ ಪರಮ ಮಿತ್ರ. ಆತನೂ ದಂಗೆಯ ಒಳಸಂಚಿನಲ್ಲಿ ಭಾಗಿಯಾಗಿದ್ದ. ಆತ ಕೊಲ್ಲಲ್ಪಟ್ಟಾಗ ಇದು ದಂಗೆಯ ನಾಯಕ ರಾಮಯ್ಯ ಗೌಡನ ಅಪ್ಪಣೆಯಂತೆ ನಡೆದಿದೆ ಎಂದು ಬ್ರಿಟಿಷರು ಅಪಪ್ರಚಾರ ಮಾಡಿದರು. ಆದರೂ ಕ್ರಾಂತಿವೀರರು ತಮ್ಮ ನಾಯಕರಲ್ಲಿ ವಿಶ್ವಾಸ ಕಳೆದುಕೊಳ್ಳದೆ ಒಗ್ಗಟ್ಟು ಕಾಯ್ದುಕೊಂಡರು ಎನ್ನುವುದು ಕ್ರಾಂತಿ ನಾಯಕರ ಸಾಮರ್ಥ್ಯಕ್ಕೆ ಸಾಕ್ಷಿಯಾಗಿದೆ.

ಮೈಸೂರು ಅರಸರ ಸಂಬಂಧಿಕ ಅರಪುರದ ಬಸವಪ್ಪಾಜಿಯ ಮನೆಯು ಕ್ರಾಂತಿನಾಯಕರ ರಹಸ್ಯಾಲೋಚನೆಯ ಕೇಂದ್ರವಾಗಿತ್ತೆಂದು ವಿಚಾರಣೆಯ ದಾಖಲೆಗಳಿಂದ ತಿಳಿದುಬರುತ್ತದೆ. ೧೮೩೭ರಲ್ಲಿ ಸ್ವತಃ ಮುಮ್ಮಡಿ ಕೃಷ್ಣರಾಜ ಒಡೆಯರು ಕ್ರಾಂತಿನಾಯಕರ ಸಮಾಲೋಚನೆಯ ರಹಸ್ಯಗಳನ್ನು ಬ್ರಿಟಿಷರ ಒಲವನ್ನು ಗಳಿಸುವ ಉದ್ದೇಶದಿಂದ ಬಯಲು ಮಾಡಿದರೆಂದು ಕಬ್ಬನ್ ತಿಳಿಸಿದ್ದಾನೆ. ಇದಲ್ಲದೆ ಕೊಡಗಿನ ಬಹುತೇಕ ಮಂದಿ ಬಂಡಾಯ ಕಾಲದಲ್ಲಿ ತಟಸ್ಥರಾದದ್ದು, ಕೆಲವರು ಬ್ರಿಟಿಷರ ಪರ ವಾಲಿದ್ದು ಅಮರ ಸುಳ್ಯದ ದಂಗೆಯು ವಿಫಲವಾಗಲು ಕಾರಣವಾಯಿತು.

ಕೊಡಗಿನ ಅರಸರಾಗುವ ಮೊದಲೇ ದೊಡ್ಡ ವೀರರಾಜ ಮತ್ತು ಆತನ ತಮ್ಮ ಲಿಂಗರಾಜ ಕೂಜುಗೋಡು ಮಲ್ಲಪ್ಪ ಮತ್ತು ಅಪ್ಪಯ್ಯ ಗೌಡರಿಗೆ ಆಪ್ತರಾಗಿದ್ದರು. ಕೂಜುಗೋಡು ಮನೆತನದ ಇನ್ನೊಂದು ಕವಲು ಮಡಿಕೇರಿಯ ಸಮೀಪದ

ಮಕ್ಕಂದೂರಿನಲ್ಲಿದೆ. ಅದರ ಯಜಮಾನ ಕುಂಬ ಗೌಡ ಲಿಂಗರಾಜನ ಆತ್ಮೀಯ ಸ್ನೇಹಿತನಾಗಿದ್ದ. ಮಕ್ಕಂದೂರಿನ ಸಮೀಪದ ಹಾಲೇರಿಯಲ್ಲಿ ಲಿಂಗರಾಜ ಬೇಸಾಯ ಮಾಡಿಕೊಂಡಿದ್ದವ, ಅಣ್ಣನ ಮರಣಾನಂತರ ಕೊಡಗಿನ ಅರಸನಾಗಿ ಪಟ್ಟವೇರುವಾಗ ಲಿಂಗರಾಜ ಹಾಲೇರಿ ಮನೆಯ ರಕ್ಷಣೆಯ ಭಾರವನ್ನು ಕುಂಬ ಗೌಡನಿಗೆ ಹೊರಿಸಿದ್ದ. ಕೂಜುಗೋಡು ಮನೆತನವು ಗೌಡ ಜನಾಂಗದ ಉನ್ನತ ನ್ಯಾಯಾಲಯದ ಕಾರ್ಯ ನಿರ್ವಹಿಸುತ್ತಿತ್ತು. ಅಮರ ಸುಳ್ಯ ಸೀಮೆಯ ಊರ ಗೌಡ, ಮಾಗಣೆ ಗೌಡ ಕೊಡುತ್ತಿದ್ದ ತೀರ್ಪಿನ ವಿರುದ್ಧ ಕೂಜುಗೋಡು ಗೌಡರಲ್ಲಿಗೆ ಅಪೀಲು ಹೋಗುವ ಅವಕಾಶವಿತ್ತು. ಸುಪ್ರಸಿದ್ಧ ಕುಕ್ಕೆ ಸುಬ್ರಹ್ಮಣ್ಯ ದೇವಾಲಯ ಈ ಮನೆತನದ ಸುಪರ್ದಿಗೆ ಒಳಪಟ್ಟಿತ್ತು. ಕೊಡಗಿನ ಅರಸರ ಮಿತ್ರರಾಗಿದ್ದ ಕೂಜುಗೋಡು ಮನೆತನದವರು ಬ್ರಿಟಿಷರ ವಿರುದ್ಧದ ದಂಗೆಯಲ್ಲಿ ಪ್ರಮುಖ ಪಾತ್ರವಹಿಸಿದ್ದು ಸಹಜವೇ ಆಗಿತ್ತು. ಅಮರ ಸುಳ್ಯ ಸೀಮೆಯ ಗೌಡ ಸಮುದಾಯ ಸಾರಾ ಸಗಟಾಗಿ ಬ್ರಿಟಿಷರ ವಿರುದ್ಧ ಬಂಡೇಳಲು ಕೂಜುಗೋಡು ಮನೆತನದ ಪ್ರಭಾವ ಕೂಡಾ ಬಹುಮುಖ್ಯ ಪಾತ್ರವಹಿಸಿದಂತೆ ಕಂಡುಬರುತ್ತದೆ.

ಬಂಡಾಯವು ಎಷ್ಟೊಂದು ವಿಸ್ತಾರವಾಗಿ ಹರಡಿತ್ತೆಂದರೆ ಇಡೀ ಕೆನರಾ ಜಿಲ್ಲೆ ಮತ್ತು ಸುತ್ತಲಿನ ಪ್ರದೇಶದಲ್ಲಿ ಪ್ರಭಾವಶಾಲಿಯಾಗಿ ಭಯ ಹುಟ್ಟಿಸಿತ್ತು. ಇದನ್ನು ಕೊನೆಗಾಣಿಸಲು ಆರು ವಾರಗಳು ಬೇಕಾದುವು. ಕೊಡಗಿನ ಬೋಪು ದಿವಾನ ಮತ್ತು ಆತನ ಸಂಗಡಿಗರ ಸೇವೆ ಬ್ರಿಟಿಷರಿಗೆ ಬಹಳ ಮಹತ್ವದ್ದೂ, ಬೆಲೆಯುಳ್ಳದ್ದೂ ಆಗಿತ್ತು. ಇದಕ್ಕೆ ಪ್ರತಿಫಲವಾಗಿ ಬಂಡಾಯಗಾರರಿಂದ ವಶಪಡಿಸಿಕೊಂಡ ಸಂಪೂರ್ಣ ಖಜಾನೆಯನ್ನು ಅವರಿಗೆ ಬಹುಮಾನವಾಗಿ ಕೊಡಲಾಯಿತು.

ಬಂಡಾಯದ ಕಾಲಾವಧಿಯಲ್ಲಿ ಕೊಡಗಿನ ಜನರು ಬ್ರಿಟಿಷರಿಗೆ ನಿಷ್ಠೆಯಿಂದ ಇದ್ದದ್ದು ನಿರಾಶೆಯುಂಟುಮಾಡುವ ವಿಚಾರವಾಗಿದೆ. ಇದರಿಂದಾಗಿ ಬೋಪು ದಿವಾನನಿಗೆ ಬಂಡಾಯದ ನಾಯಕರನ್ನು ಪತ್ತೆ ಹಚ್ಚಿ ಬಂಡಾಯವನ್ನು ಪುಡಿಗೈಯುವುದು ಸಾಧ್ಯವಾಯಿತು. - **ಎಂಬುದಾಗಿ ಸ್ವಾತಂತ್ರ್ಯ ಚಳವಳಿಯ ಚರಿತ್ರೆ, ಮುಂಬೈ ಸಮಿತಿ ದಾಖಲಿಸಿದೆ.**



# ೫. ಸ್ವಾತಂತ್ರ್ಯ ಸಮರ ಕಾಟಕಾಯಿ ಆಯಿತೇಕೆ ?

ಅಮರ ಸುಳ್ಯದ ಸ್ವಾತಂತ್ರ್ಯ ಸಮರವನ್ನು ಜನಸಾಮಾನ್ಯರು ಕಲ್ಯಾಣಪ್ಪನ ಕಾಟಕಾಯಿ ಎಂದೇ ಕರೆಯುತ್ತಾರೆ. ಆಲೆಟ್ಟಿಯ ರಾಮಣ್ಣ ಶಗ್ರಿತ್ತಾಯರ ಯಕ್ಷಗಾನ ಪ್ರಸಂಗವೂ ಕೂಡಾ ಬಹುತೇಕವಾಗಿ ಸುಳ್ಯದ ದಂಗೆಯನ್ನು ಕಾಟಕಾಯಿಯೆಂದೇ ಚಿತ್ರಿಸಿದೆ. ಖ್ಯಾತ ಕಾದಂಬರಿಕಾರ ನಿರಂಜನರು ತಮ್ಮ ಅಪರಂಪಾರ ಮತ್ತು ಕಲ್ಯಾಣಸ್ವಾಮಿ ಕಾದಂಬರಿಗಳ ಮೂಲಕ ಸ್ವಲ್ಪ ಮಟ್ಟಿಗೆ ಜನಾಭಿಪ್ರಾಯವನ್ನು ಬದಲಾಯಿಸುವಲ್ಲಿ ಯಶಸ್ವಿಯಾದರು. ಶಗ್ರಿತ್ತಾಯರಿಗೆ ಮತ್ತು ನಿರಂಜನರಿಗೆ ನಮ್ಮಲ್ಲಿ ಈಗ ಲಭ್ಯವಿರುವ ದಾಖಲೆಗಳು ದೊರೆಯುತ್ತಿದ್ದರೆ, ಯಕ್ಷಗಾನ ಮತ್ತು ಕಾದಂಬರಿಗಳ ಸ್ವರೂಪವೇ ಬದಲಾಗಿಬಿಡುತ್ತಿತ್ತು.

೧೯೯೧ರಲ್ಲಿ ಸುಳ್ಯದ ಸುದ್ದಿ ಬಿಡುಗಡೆ ಎಂಬ ಸಾಪ್ತಾಹಿಕದಲ್ಲಿ ಓದುಗರೊಬ್ಬರು ಕಲ್ಯಾಣಪ್ಪನದು ಕಾಟಕಾಯಿಯೇ ಎಂಬ ಪ್ರಶ್ನೆಯೊಂದನ್ನು ಎತ್ತಿದರು. ಪುಣಚದ ಕಡೆಯ ಇತಿಹಾಸ ಪದವೀಧರರೊಬ್ಬರು ಯಕ್ಷಗಾನ ಮತ್ತು ಕಾದಂಬರಿಗಳು ಇತಿಹಾಸಕ್ಕೆ ಆಧಾರವಾಗುವುದಿಲ್ಲ. ಬ್ರಿಟಿಷರು ನ್ಯಾಯಪಕ್ಷಪಾತಿಗಳು. ಕಲ್ಯಾಣಪ್ಪ ದರೋಡೆಕೋರ ಎಂದು ಸ್ವತಃ ಇತಿಹಾಸದ ವಿದ್ಯಾರ್ಥಿಯಾಗಿದ್ದೂ ಆಧಾರವಿಲ್ಲದೆ ವಾದಿಸಿದರು. ಇದಕ್ಕೂ ಮೊದಲು ೧೯೭೦ರ ದಶಕದಲ್ಲಿ ಸುಳ್ಯದ ಅಭಿನಯ ನಾಟಕ ತಂಡದವರು ಪ್ರೊ| ಜವರೇಗೌಡರು ರಚಿಸಿದ 'ಕಲ್ಯಾಣ ಸ್ವಾಮಿ' ನಾಟಕದ ಮೂಲಕ ಹೊಸ ರೋಮಾಂಚನವನ್ನು ಮೂಡಿಸಿದ್ದರು. ಇದೇ ಕೆಲಸವನ್ನು ೧೯೯೦ರ ದಶಕದಲ್ಲಿ ಹವ್ಯಾಸಿ ಬಡ್ಡಡ್ಕ ತಂಡದವರು ವಿದ್ಯಾಧರ ಬಡ್ಡಡ್ಕರ 'ಕೆದಂಬಾಡಿ ರಾಮ ಗೌಡ' ನಾಟಕದ ಮೂಲಕ ಮಾಡಿದ್ದರು.

ಕಲ್ಯಾಣಪ್ಪ ಸುಳ್ಯ ಮತ್ತು ಪುತ್ತೂರಿನವರೆಗೆ ಕಥಾನಾಯಕನಾದರೆ ಅದರಿಂದಾಚೆಗೆ ಖಳನಾಯಕ ಹೇಗಾದ ಅನ್ನುವುದು, ನಂದಾವರದವನೇ ಆದ ಲಕ್ಷ್ಮಪ್ಪ ಬಂಗರಸನ ಬಗ್ಗೆ ಸುತ್ತಮುತ್ತಲಿನ ಜನರಿಗೆ ಯಾಕೆ ವಾತ್ಸಲ್ಯ ಮೂಡಿಲ್ಲ ಅನ್ನುವುದು ಚರ್ಚೆಗೆ ಗ್ರಾಸವನ್ನೊದಗಿಸುತ್ತದೆ.

ಈ ರೀತಿಯ ಅಭಿಪ್ರಾಯಗಳಿಗೆ ಅವರ ಊರಿನಲ್ಲಿದ್ದ ಐತಿಹ್ಯಗಳು ಕಾರಣವಾಗಿರಲೂ ಬಹುದು. ಹಿಂದಿನ ಕಾಲದಲ್ಲಿ ಹಿರಿಯರು, ಮುಖಂಡರು ಏನನ್ನು ಹೇಳಿದರೂ ಪ್ರಶ್ನಿಸುವ ಅವಕಾಶವಿರಲಿಲ್ಲ. ಅಮರ ಸುಳ್ಯದಿಂದ ದಂಡು ಮಂಗಳೂರಿಗೆ ಹೋಗುವ ಕಾಲದಲ್ಲಿ ಬಂಟ್ವಾಳ, ಪಾಣೆಮಂಗಳೂರುಗಳಲ್ಲಿ ಲೂಟಿ ನಡೆದಿದ್ದರೆ ಅದನ್ನು ಯಾವುದೋ ಸಮಾಜಘಾತುಕ ಶಕ್ತಿಗಳು ಮಾಡಿರಬಹುದು. ಕಲ್ಯಾಣಪ್ಪನ ವಿರುದ್ಧ ಜನಾಭಿಪ್ರಾಯ ಮೂಡಿಸಲು ಬ್ರಿಟಿಷರೇ ಮಾಡಿಸಿರಲೂ ಬಹುದು. ಏಕೆಂದರೆ ಕೊಡಗಿನ ದೊಡ್ಡ ವೀರರಾಜನು, ಪ್ರಜಾನುರಾಗಿ ಟಿಪ್ಪುಸುಲ್ತಾನನ ಹೆಸರು ಕೆಡಿಸಲು ಈಗಿನ ಕೊಡಗು ಪ್ರದೇಶದಲ್ಲಿ ಅನೇಕ ಬಾರಿ ಬ್ರಿಟಿಷರ ಕುಮ್ಮಕ್ಕಿನಿಂದ ದರೋಡೆ ಮಾಡಿಸಿದುದಕ್ಕೆ ಸಾಕ್ಷ್ಯಾಧಾರಗಳಿವೆ. ತನ್ನ ದರೋಡೆ ತಂಡಕ್ಕೆ ಆತ ತುರ್ಕರ ದಂಡು ಎಂಬ ಹೆಸರಿರಿಸಿ, ಟಿಪ್ಪುವಿನ ಹೆಸರಿಗೆ ಮಸಿ ಬಳಿದು ಬ್ರಿಟಿಷರಿಂದ ಪ್ರಯೋಜನ ಗಿಟ್ಟಿಸಿಕೊಂಡಿದ್ದ.

ದಂಗೆಯ ಕಾಲದಲ್ಲಿ ಕೊಡಗಿನವರಿಂದ ಆದ ದ್ರೋಹದ ಬಗ್ಗೆ ನಿರಂಜನರು 'ಕಲ್ಯಾಣಸ್ವಾಮಿ' ಚಾರಿತ್ರಿಕ ಕಾದಂಬರಿಯ ಹಿನ್ನುಡಿಯಲ್ಲಿ ಹೀಗೆ ಬರೆದಿದ್ದಾರೆ :

"೧೮೫೭ರಲ್ಲಿ ರಾಷ್ಟ್ರದಾದ್ಯಂತ ನಡೆದ ಪ್ರಪ್ರಥಮ ಸ್ವಾತಂತ್ರ್ಯ ಸಂಗ್ರಾಮವನ್ನು 'ಸಿಪಾಯಿ ದಂಗೆ' ಎಂದು ಕರೆದು ಇತಿಹಾಸ ಬರೆದವರೂ ಇಂಗ್ಲಿಷರು. ನಮ್ಮ ಹಿಂದಿನವರು ಓದಿರುವುದು ಆ ಚರಿತ್ರೆಯನ್ನೇ. ನಾವು ಓದಿರುವುದೂ ಅದನ್ನೆ. ಆದರೆ ಈಗ, ೧೮೫೭ರ ಹೋರಾಟಕ್ಕಿದ್ದ ಚಾರಿತ್ರಿಕ ಮಹತ್ವವನ್ನು ಅರ್ಥ ಮಾಡಿಕೊಳ್ಳಲು ನಾವು ಸಮರ್ಥರಾಗಿದ್ದೇವೆ.

ಅಂತೆಯೇ, ಆ ಸಂಭವಕ್ಕೆ ೨೦ ವರ್ಷಗಳ ಹಿಂದೆ ಕಲ್ಯಾಣಸ್ವಾಮಿಯ ಕಥೆಯನ್ನು ಸರಿಯಾಗಿ ಅರ್ಥಮಾಡಿಕೊಳ್ಳುವುದು ನಮಗೆ ಕಷ್ಟವಾಗಬಾರದು.

ಕಲ್ಯಾಣಪ್ಪ ಪುಂಡನೆಂಬುದಕ್ಕೆ ಯಾವ ಆಧಾರವೂ ಇಲ್ಲ. ಆತ ಜನರನ್ನು ದೋಚಿದನೆಂದು ಯಾರೂ ಹೇಳುವುದಿಲ್ಲ. ಆತ ಯುದ್ಧ ಸಾರಿದುದು ಇಂಗ್ಲಿಷರ ವಿರುದ್ಧ. ಆತನ ಕಣ್ಣಿದ್ದುದು ಅವರ ಸೈನ್ಯದ ಮೇಲೆ, ಖಜಾನೆಯ ಮೇಲೆ. ತಮಗೆ ಕಂಟಕರಾಗಿದ್ದವರನ್ನು ನರ ಪಿಪಾಸಿಗಳೆಂದು ಸಾಮ್ರಾಜ್ಯವಾದಿಗಳು ಚಿತ್ರಿಸುವುದು ಹೊಸ ವಿಷಯವಲ್ಲವಷ್ಟೆ? ಅಂತಹ 'ನರಪಿಶಾಚಿ' ಕೊಡಗಿನ ಕಲ್ಯಾಣಪ್ಪ!

ರಾಜರಿಗೆ ಸಂಬಂಧಿಸಿದುದು ಮಾತ್ರ ಇತಿಹಾಸವೆಂದು ಭಾವಿಸಿದವರು ಬರೆದುದರಲ್ಲಿ ಕಲ್ಯಾಣಪ್ಪನ ವಿಷಯ ದೊರೆಯುವುದು ಎರಡು ಮೂರು ಸಾಲು ಮಾತ್ರ. ಯಾಕೆಂದರೆ, ಕಲ್ಯಾಣಸ್ವಾಮಿ ರಾಜವಂಶಸ್ಥನಲ್ಲ.

ಇಂಗ್ಲಿಷರು ಕೊಡಗಿನ ಮೇಲೆ ನಡೆಸಿದುದು ಅನ್ಯಾಯದ ಯುದ್ಧ. ಅರಸ ವೀರ ರಾಜೇಂದ್ರನಿಗೆ ಅವರು ಬಗೆದುದು ವಿಶ್ವಾಸ ದ್ರೋಹ. ಆತನನ್ನು ದೇಶಬಿಟ್ಟು

ಓಡಿಸಿದ ವೈಖರಿ, ನಾಗರಿಕರಾದವರೆಲ್ಲ ನಾಚಿಕೆಯಿಂದ ತಲೆತಗ್ಗಿಸುವಂಥಾದ್ದು. ಅಂತಹ ಘಟನೆಯಿಂದ ಜನ ಕೋಪೋದ್ರಿಕ್ತರಾದರೆಂದು ಭಾವಿಸುವುದರಲ್ಲಿ ಏನೂ ತಪ್ಪಿಲ್ಲ.

ಕೊಡಗಿನ ಶರಣಾಗತಿಗೆ ಕಾರಣನಾಗಿದ್ದ ಬೋಪು ದಿವಾನನ ಸಂಬಂಧಿಕರೇ ಕಲ್ಯಾಣಸ್ವಾಮಿಯನ್ನು ಕೂಡಿಕೊಂಡರು. ಪ್ರಖ್ಯಾತ ಸರದಾರ ಹುಲಿಕಡಿದ ನಂಜಯ್ಯ, ವಿವಿಧ ನಾಡುಗಳ ಸುಭೇದಾರರು, ಮಾಜಿ ಉದ್ಯೋಗಸ್ಥರೆಷ್ಟೋ ಜನ ಆತನನ್ನು ಹಿಂಬಾಲಿಸಿದರು. ಕಲ್ಯಾಣಸ್ವಾಮಿಯದ್ದು ಕಳ್ಳಕಾಕರ ತಂಡವಾಗಿರಲಿಲ್ಲ ಎನ್ನುವುದಕ್ಕೆ ಇಷ್ಟು ಸಾಕು.

ಕಲ್ಯಾಣಸ್ವಾಮಿಯ ಕಥೆ ಮುಗಿದ ಬಳಿಕ, ಇಂಗ್ಲಿಷರು ತೋರಿಸಿದ ಧೋರಣೆ ಯಾವುದು?

......ಬೋಪು ದಿವಾನನಿಗೂ ಆತನ ಜನರಿಗೂ ಕಂಪೆನಿ ಸರಕಾರದವರು... ಜಹಗೀರು ಭೂಮಿಗಳನ್ನೂ ಯುದ್ಧದಲ್ಲಿ ಸತ್ತುಹೋದವರ ಕುಟುಂಬದವರಿಗೆ ಮೂರು ತಲೆಮಾರುಗಳ ವರೆಗೆ ಪೆನ್ಶನ್ನನ್ನೂ ಕಾಟಕಾಯಿಯಲ್ಲಿ ('ದಂಗೆ' ಅಡಗಿಸಲು) ಭಾಗವಹಿಸಿದವರ ಯೋಗ್ಯತೆಗನುಸಾರವಾಗಿ ಚಿನ್ನ, ಬೆಳ್ಳಿ ಪದಕಗಳನ್ನೂ ಕೊಟ್ಟರು....

'ಕಳ್ಳ'ನನ್ನು ಹಿಡಿದರೆಂಬ ಕಾರಣದಿಂದ 'ವೀರರಿಗೆ' ಇಷ್ಟೊಂದು ಸತ್ಕಾರ ಮಾಡಿದರೆಂದು ನಂಬುವುದು ಕಷ್ಟ!"

ಮುಂಬೈ ಸಮಿತಿ 'ಸ್ವಾತಂತ್ರ್ಯ ಚಳವಳಿಯ ಚರಿತ್ರೆ'ಯಲ್ಲಿ ಈ ಕೆಳಗಿನಂತೆ ಬರೆದಿದ್ದಾರೆ:

"ಬಂಡಾಯವು ಎಷ್ಟು ವಿಸ್ತಾರವಾಗಿತ್ತು ಮತ್ತು ಶಕ್ತಿಶಾಲಿಯಾಗಿತ್ತೆಂದರೆ - ಇಡೀ ಕೆನರಾ ಜಿಲ್ಲೆಯನ್ನು ವ್ಯಾಪಿಸಿ, ಹೊರ ಪ್ರಾಂತ್ಯಗಳಲ್ಲಿ ಹರಡಿಕೊಳ್ಳುವ ಭಯ ಹುಟ್ಟಿಸಿತ್ತು. ಇದನ್ನು ಹುಡಿಗೊಳಿಸಲು ಸುಮಾರು ಆರು ವಾರಗಳು ಬೇಕಾದುವು. ಕೊಡಗಿನ ಬೋಪು ದಿವಾನ ಮತ್ತು ಸಂಗಡಿಗರು ಸಲ್ಲಿಸಿದ ಸೇವೆ ಎಷ್ಟು ಅವಶ್ಯದ್ದು ಮತ್ತು ಬೆಲೆಯುಳ್ಳದ್ದಾಗಿತ್ತೆಂದರೆ, ಅದಕ್ಕೆ ಪ್ರತಿಫಲವಾಗಿ ಬಂಡಾಯಗಾರರಿಂದ ವಶಪಡಿಸಿಕೊಂಡ ಖಜಾನೆಯನ್ನು ಅವರಿಗೆ ಬಹುಮಾನವಾಗಿ ಕೊಡಲಾಯಿತು."

"…. ಇದು ನಿಜವಾಗಿಯೂ ಸರಕಾರದ ವಿರುದ್ಧ ಜನರ ಬಂಡಾಯ. ಯಾಕೆಂದರೆ ಇದರಲ್ಲಿ ಸರಕಾರಿ ಅಧಿಕಾರಿಗಳು ಮತ್ತು ಮುಖ್ಯಸ್ಥರು ಭಾಗಿಗಳಾಗಿದ್ದರೆಂದು ನಂಬಲಾಗಿದೆ. ನಿರಾಶೆಯುಂಟುಮಾಡುವಂತಹ ವಿಚಾರವೆಂದರೆ - ಕೊಡಗಿನ ಜನರು ಬಂಡಾಯ ಪ್ರಾರಂಭವಾದಾಗಿನಿಂದಲೂ ಸರಕಾರದ ಭಕ್ತರಾಗಿ ಇದ್ದದ್ದು. ಇದರಿಂದಾಗಿ ದಿವಾನ ಬೋಪಿಗೆ ಬಂಡಾಯದ ನಾಯಕರನ್ನು ಹುಡುಕಿ ಹಿಡಿದು ಬಂಡಾಯದ ಹುಟ್ಟಡಗಿಸುವುದು ಸಾಧ್ಯವಾಯ್ತು. ಬಂಧಿತ ನಾಯಕರನ್ನು ವಿಚಾರಣೆಗೆ ಗುರಿಪಡಿಸಿ, ಯೋಗ್ಯ ಶಿಕ್ಷೆ ವಿಧಿಸಲಾಯಿತು."

ನಿರಂಜನರ ಕಾದಂಬರಿ 'ಕಲ್ಯಾಣ ಸ್ವಾಮಿ' ಈ ಘಟನೆ ನಡೆದು ಕೇವಲ ೧೨೦ ವರ್ಷಗಳ ನಂತರ ಕಾಣಿಸಿಕೊಂಡಿದೆ. ಐತಿಹ್ಯಗಳನ್ನು ಆಧಾರಿಸುವುದು ತಪ್ಪಲ್ಲ. ರಾಮಾಯಣ ಲಂಕೆಯವರಿಗೆ ದುಃಖಾಂತ್ಯವಾದಂತೆ - ಕೆಲವೊಂದು ಘಟನೆಗಳು ಪ್ರಾದೇಶಿಕವಾಗಿ ಬೇರೆ, ಬೇರೆ ದೃಷ್ಟಿಕೋನಗಳಿಂದ ನೋಡಲ್ಪಡುತ್ತವೆ. ನಂದಾವರದ ಲಕ್ಷ್ಮಪ್ಪನನ್ನು ಗಲ್ಲಿಗೇರಿಸಿ, ಶವವನ್ನು ಬಿಕರನಕಟ್ಟೆಯಲ್ಲಿ ಸರಪಳಿಗಳಿಂದ ತೂಗಿಟ್ಟರು. ಆತನ ಆಸ್ತಿ ಬ್ರಿಟಿಷರ ಪರ ವಹಿಸಿದವರಿಗೆ ಕೊಡಲ್ಪಟ್ಟಿರಬಹುದು. ಹಾಗೆ ಮಂಗಳೂರು ಸುತ್ತುಮುತ್ತ ಲಕ್ಷ್ಮಪ್ಪ ಬಂಗರಸ-ಕಲ್ಯಾಣಪ್ಪನೆಂಬ ದರೋಡೆಕೋರನಿಗೆ ಸಹಾಯಮಾಡಿದ ಧೂರ್ತನೆಂದು ಪ್ರಚಾರ ನಡೆಸಲು ಒಂದು ಇಲಾಖೆಯನ್ನೆ ಸರಕಾರ ತೆರೆದಿರಬಹುದು. ಒಟ್ಟಿನಲ್ಲಿ ಬ್ರಿಟಿಷರು ಸಾಕಷ್ಟು ದಾಖಲೆಗಳನ್ನು ಬಿಟ್ಟುಹೋಗಿದ್ದಾರೆ. ಅವರು ಬರೆದ ಸಾಲುಗಳ ನಡುವೆ ಸತ್ಯಾನ್ವೇಷಣೆ ಸಾಧ್ಯ. ಅಲ್ಲದೆ ಫ್ರೆಂಚರು, ಜರ್ಮನರು, ಪೋರ್ಚುಗೀಸರು ಏನು ದಾಖಲಿಸಿಟ್ಟಿದ್ದಾರೆ? ಅಲ್ಲಿಯೂ ಸಂಶೋಧನೆ ನಡೆಯಬೇಕು.

ನಿರಂಜನರು ಕಾದಂಬರಿ ರಚನೆ ಮಾಡಿದ ಕಾಲದಲ್ಲಿ ಅವರಿಗೆ ಲಭ್ಯವಿಲ್ಲದ ಕೆಲವು ದಾಖಲೆಗಳನ್ನು ಇಲ್ಲಿ ಪ್ರಕಟಿಸಲಾಗಿದೆ.

೧. ನಿಡಿಗೆರೆ ಲಕ್ಷ್ಮೀನರಸಿಂಹ ಶಾಸ್ತ್ರಿ ವಿರಚಿತ ಐಗೂರು ಇತಿಹಾಸದಲ್ಲಿರುವ ಲಾವಣಿ.
೨. ತಿ. ತಾ. ಶರ್ಮರ ಲೇಖನ ``ಕೊಡಗು ಮತ್ತು ಕೆನರಾ ಬಂಡಾಯ'' (೧೮೩೬-೩೭).
೩. ಕೆನರಾದ ಕಲೆಕ್ಟರಾಗಿದ್ದ ಲೆವಿನ್ ಬಂಡಾಯದ ಕುರಿತು ಸಲ್ಲಿಸಿದ ವರದಿ. (ಕನ್ನಡ ಅನುವಾದ).
೪. ರೆ. ಜಿ. ರಿಕ್ತರ್ (Rev. G. Richter)ನ ಗಜೇಟಿಯರ್ ಆಫ್ ಕೂರ್ಗ್‌ನಲ್ಲಿರುವ ಬಂಡಾಯದ ವಿವರದ ಕನ್ನಡ ಭಾಷಾಂತರ.
೫. ನಡಿಕೇರಿಯಂಡ ಚಿಣ್ಣಪ್ಪನವರ `ಪಟ್ಟೋಳೆ ಪಳಮೆ'ಯಲ್ಲಿರುವ ವರದಿ ಮತ್ತು ಬಹುಮಾನಿತರ ಹೆಸರುಗಳು.
೬. ೧೮೩೭ ನ್ಯಾಯಾಂಗ ಸೂಚಿ.

ಮೇಲಿನ ಆರು ಹೊಸ ದಾಖಲೆಗಳು ಸಂಶೋಧಕರಿಗೆ ಹೊಸ ಮಾರ್ಗದರ್ಶನಕ್ಕೆ ಸಹಕಾರಿಯಾಗಬಹುದು. ಚೆನ್ನೈಯ ಪತ್ರಾಗಾರದಲ್ಲಿ ಕಾಟನನ ವರದಿ, ಅದಕ್ಕೆ ಕಬ್ಬನ್ ಬರೆದ ಟಿಪ್ಪಣಿ, ಖೈದಿಗಳ ವಿಚಾರಣಾ ವರದಿ, ನ್ಯಾಯಾಲಯ ತೀರ್ಪುಗಳು ಅಮರಕ್ರಾಂತಿಯ ಬಗ್ಗೆ ಇನ್ನಷ್ಟು ಬೆಳಕು ಬೀರಬಲ್ಲುವು. ಇವುಗಳೆಲ್ಲ ಬ್ರಿಟಿಷರ ಪರವಾದ ಧೋರಣೆಯಿಂದ ತಯಾರಿಸಿದವುಗಳಾಗಿರಬಹುದಾದರೂ, ಸಂಶೋಧಕರಿಗೆ, ಚಿಂತಕರಿಗೆ, ಇತಿಹಾಸಕಾರರಿಗೆ ಬಹಳಷ್ಟು ಉಪಯುಕ್ತ ಸಾಮಗ್ರಿಗಳಾಗಬಹುದು. ವಿಜಯನಗರದ ಕಾಲದಿಂದ ಈಗಿನ ಕೊಡಗಿನ ಉತ್ತರ ಹಾಗೂ ಪೂರ್ವಭಾಗ ನಾಗರಿಕತೆಯನ್ನೂ ಸಮೃದ್ಧಿಯನ್ನೂ ಕಂಡಿತ್ತು. ಬ್ರಿಟಿಷರ ಪ್ರವೇಶದ ನಂತರ ಅನಾಗರಿಕತೆಯಲ್ಲಿದ್ದ ಮಧ್ಯ

ಕೊಡಗು ಅಭಿವೃದ್ಧಿ ಹೊಂದಿತು. ಐಗೂರಿನ ಇತಿಹಾಸವನ್ನು ಅಳಿಸಿಹಾಕಿ ಬ್ರಿಟಿಷರು ಕೊಡಗನ್ನು ಅದರ ಇತಿಹಾಸದೊಂದಿಗೆ ಪುನರ್ ಸೃಷ್ಟಿಗೊಳಿಸಿದರು.

ಐಗೂರು ಇತಿಹಾಸ ಕೂಡಾ ರಾಜೇಂದ್ರನಾಮೆಯಂತೆ ಯಾವುದೇ ಆಧಾರಗಳಿಂದ ನಂಬಲು ಅರ್ಹವಾದದ್ದಲ್ಲ. ಆದರೂ ಕೂಡಾ ಈ ಕೃತಿಯಲ್ಲಿ ಸಂಗ್ರಹಿಸಿಕೊಟ್ಟಿರುವ ಲಾವಣಿ ತುಂಬಾ ಉಪಯುಕ್ತವಾಗಿದೆ. ಅತ್ತಿಹಳ್ಳಿಯ ವಯೋವೃದ್ಧರೊಬ್ಬರು ಸಂತೆಯಲ್ಲಿ ಒಬ್ಬ ಹಾಡುಗಾರ ಹಾಡುತ್ತಿದ್ದುದನ್ನು ಕೇಳಿರುವುದಾಗಿ ತಿಳಿಸಿದರು. ಬ್ರಿಟಿಷರು ಈ ಲಾವಣಿಯನ್ನು ನಿಷೇಧಿಸಿದ್ದರಂತೆ. ಪೋಲಿಸರು ಅಥವಾ ಸರಕಾರಿ ಉದ್ಯೋಗಿಗಳು ಆತನು ಹಾಡುವಲ್ಲಿಗೆ ಬಂದಾಗ ಹಾಡು ಬದಲಾಯಿಸುತ್ತಿದ್ದನಂತೆ. ಆತ ಹಾಡುತ್ತಿದ್ದರೆ ನೆರೆದ ಜನರು, ಕೇಳುತ್ತಿದ್ದಂತೆ ಕಣ್ಣೀರು ಸುರಿಸುತ್ತಿದ್ದುದನ್ನು ಅವರು ಜ್ಞಾಪಿಸಿಕೊಂಡರು.

ಐಗೂರಿನ ನಾಯಕರ ಪಟ್ಟಿಯನ್ನು ಲೂಯಿಸ್ ರೈಸ್ ತಯಾರಿಸಿದ್ದಾನೆ. ಅದು ಹೀಗಿದೆ : ಯರ ಕೃಷ್ಣಪ್ಪ ನಾಯಕ (೧೫೨೪ - ೬೬), ವೆಂಕಟಾದ್ರಿ ನಾಯಕ (೧೫೬೬-೮೪) ಕೃಷ್ಣಪ್ಪ ನಾಯಕ (೧೫೮೮-೧೬೨೫) ವೆಂಕಟಾದ್ರಿ ನಾಯಕ (೧೬೨೪-೪೩) ಕೃಷ್ಣಪ್ಪ ನಾಯಕ (೧೬೪೩-೫೪) ವೆಂಕಟಾದ್ರಿ ನಾಯಕ (೧೬೫೫-೭೦) ಕೃಷ್ಣಪ್ಪ ನಾಯಕ (೧೬೮೫-೯೨) ವೆಂಕಟಾದ್ರಿ ನಾಯಕ (೧೭೦೮-೧೭೫೧) ಕೃಷ್ಣಪ್ಪ ನಾಯಕ (೧೭೫೫-೯೪) ವೆಂಕಟಾದ್ರಿ ನಾಯಕ (೧೭೯೯-೧೮೦೨) (ಎಪಿಗ್ರಾಫಿಯಾ ಕರ್ನಾಟಿಕಾ V ೧೯೦೨, ಪು. ೩೩) ನಿಡಿಗೆರೆ ಲಕ್ಷ್ಮೀನರಸಿಂಹ ಶಾಸ್ತ್ರಿಗಳ ಕೃತಿಯಲ್ಲಿ ಈ ಸಂಗ್ರಹವೂ ಕೂಡಾ ಸಿಗುವುದಿಲ್ಲ. ಆದರೆ ರಾಜ್ಯದ ವಿಸ್ತಾರ ಪೂರ್ವದ ಬಂಗಾಡಿಯಿಂದ ಪಶ್ಚಿಮದ ಶ್ರೀರಂಗಪಟ್ಟಣದವರೆಗೆ, ದಕ್ಷಿಣದ ನಂಜರಾಜಪಟ್ಟಣದಿಂದ ಉತ್ತರದ ನಗರದವರೆಗೆ ಇದ್ದಿತೆಂದು ಹೇಳಲಾಗಿದೆ. ರಂಗಪ್ಪ ನಾಯಕ, ನರಸಿಂಹ ನಾಯಕ, ವೆಂಕಟಪ್ಪ ನಾಯಕ ಮೊದಲಾದ ಹೆಸರುಗಳು ಕಾಣಿಸಿಕೊಂಡಿವೆ. ವಿಜಯನಗರದ ಕೃಷ್ಣದೇವರಾಯನ ಕಾಲದಲ್ಲಿ ಯರ ಕೃಷ್ಣಪ್ಪ ನಾಯಕನಿಗೆ ಈ ಪ್ರದೇಶವನ್ನು ಪಾಳೆಯ ಕೊಟ್ಟದಕ್ಕೆ ಖಚಿತ ಶಾಸನಾಧಾರಗಳಿವೆ. ಆತನ ಮಗಳನ್ನು ವಿವಾಹ ಮಾಡಿಕೊಟ್ಟಿರುವುದಾಗಿ ಹೇಳಲಾಗಿದೆ. ಐಗೂರು ಬ್ರಿಟಿಷರನ್ನು ವಿರೋಧಿಸಿದ್ದಕ್ಕೆ ಆಡಳಿತದ ಅನುಕೂಲತೆಗಾಗಿ ಇದನ್ನು ಮದ್ರಾಸ್, ಮುಂಬೈ, ಮೈಸೂರು ಹಾಗೂ ಕೊಡಗು ಈ ನಾಲ್ಕು ರಾಜ್ಯಗಳಿಗೆ ಹರಿದು ಹಂಚಿಹಾಕಿ ಅದನ್ನು ನಿರ್ನಾಮಗೊಳಿಸಿದರೆಂಬುದು, ಐಗೂರು ಇತಿಹಾಸದ ಕೊನೆಯ ಪುಟಗಳಲ್ಲಿ ಹೇಳುವ ಅಂದಿನ ಪರಿಸ್ಥಿತಿ ಅಥವಾ ದುರ್ಗತಿಯ ವರ್ಣನೆಯಿಂದ ತಿಳಿದುಬರುತ್ತದೆ.

ತಿ. ತಾ. ಶರ್ಮರ "ಕರ್ನಾಟಕ ಸ್ವಾತಂತ್ರ್ಯ ಸಂಗ್ರಾಮ"ವನ್ನು ೧೯೫೭ರಲ್ಲಿ ಸಿಪಾಯಿ ದಂಗೆಯನ್ನು ಮೊದಲ ಸ್ವಾತಂತ್ರ್ಯ ಸಂಗ್ರಾಮವೆಂದು ಗುರುತಿಸಿ, ಸ್ವರ್ಣಮಹೋತ್ಸವ ದೇಶದಾದ್ಯಂತ ಆಚರಿಸಿದಾಗ ಮೈಸೂರು ಸರಕಾರ ಪ್ರಕಟಿಸಿ ಬಿಡುಗಡೆಗೊಳಿಸಿತು. ಇದರಲ್ಲಿ ಅನೇಕ ಮಾಹಿತಿಗಳಿವೆ. ಆದರೆ ಇಂಗ್ಲಿಷಿನಿಂದ ಭಾಷಾಂತರಿಸುವಾಗ ಸ್ಥಳೀಯರ

ನೆರವು ಪಡೆಯದ ಕಾರಣ ಈ ಕೆಳಗಿನ ತಪ್ಪುಗಳು ಕಾಣಿಸಿಕೊಂಡಿವೆ :

| | | |
|---|---|---|
| ಬಳ್ಳಾರಿ | - | ಬೆಳ್ಳಾರೆ |
| ಸೂಳ್ಯ | - | ಸುಳ್ಯ |
| ಕೋಜಗೋಡು, ಕಾಜುಗೋಡು | - | ಕೂಜುಗೋಡು |
| ಕಡಂಪಾಡಿ | - | ಕೆದಂಬಾಡಿ |
| ಸರಕಾಜೆ | - | ಸಿರಕಜೆ |
| ಲಕ್ಷ್ಮಣ ಬಂಗ | - | ಲಕ್ಷ್ಮಪ್ಪ ಬಂಗರಸ |
| ಗೂಡೆ ಅಪ್ಪಯ್ಯ | - | ಗುಡ್ಡೆ ಅಪ್ಪಯ್ಯ |
| ಹಾವೇರಿ | - | ಹಾಲೇರಿ |
| ಸಿಸಿಲೆ | - | ಬಿಸ್ಲೆ |
| ಯಡ್ಡುನಾಡು, ಗುಡ್ಡಿನಾಡು | - | ಎಡೆನಾಡು, ಗಡಿನಾಡು |
| ಕೂಂದಳ | - | ಕುಂದಳ್ಳಿ |
| ನರಿಕ | - | ನೆರಿಯ |
| ಕಂಕನೂರು | - | ಕುಕ್ಕನೂರು |
| ತನ್ನನಾಡು | - | ತುಳುನಾಡು |
| ಪರಜಿ | - | ಪೆರಾಜೆ |

ಕೊಡಗು ಮತ್ತು ಕೆನರಾ ಬಂಡಾಯದಲ್ಲಿ ಭಾಗವಹಿಸಿದವರ ಬಗ್ಗೆ ಖಚಿತ ಮಾಹಿತಿ ಮೊದಲ ಬಾರಿಗೆ ಲಭ್ಯವಾಗುವುದು ಇದು ಪ್ರಕಟವಾದ ನಂತರ ಮಾತ್ರ. ನಿರಂಜನರ ಕಾದಂಬರಿ ಒಂದು ವರ್ಷ ಮುಂಚಿತವಾಗಿ ಪ್ರಕಟವಾದದ್ದರಿಂದ ಅವರಿಗೆ ಇದರಲ್ಲಿರುವ ವಿಚಾರಗಳು ತಿಳಿದಿರಲಿಲ್ಲವೆಂದು ಸ್ಪಷ್ಟವಾಗುತ್ತದೆ. ೧೮೩೭ರ ಸ್ಪಷ್ಟ ಕಲ್ಪನೆಯನ್ನು ಹೊಂದಿರುತ್ತಿದ್ದರೆ ನಿರಂಜನರ ಕಾದಂಬರಿಯಲ್ಲಿ ಕೆಲವು ಬದಲಾವಣೆಗಳೊಂದಿಗೆ ನಿಜವಾಗಿ ಹೋರಾಟದಲ್ಲಿ ಭಾಗಿಯಾದವರಿಗೆ ಗೌರವ ಲಭಿಸುತ್ತಿತ್ತು. ರಾಮಪ್ಪಯ್ಯನ ಚಿತ್ರಣ ಬದಲಾಗುತ್ತಿತ್ತು. ಬ್ರಿಟಿಷರ ಒಡೆದು ಆಳುವ ನೀತಿ, ಮುಮ್ಮಡಿ ಕೃಷ್ಣರಾಜ ಒಡೆಯರ್ ಸ್ವಾರ್ಥಕ್ಕಾಗಿ ದೇಶಪ್ರೇಮಿಗಳನ್ನು ಬಲಿಕೊಟ್ಟ ವಿಚಾರ ಹೆಚ್ಚು ಪ್ರಚಾರಕ್ಕೆ ಬರಲು ಸಾಧ್ಯವಿತ್ತು.

ದಂಗೆಯ ಕಾಲದಲ್ಲಿ ಕೆನರಾದ ಕಲೆಕ್ಟರಾಗಿದ್ದ ಲೆವಿನ್ ಅದೇ ವರ್ಷ ಒಂದು ವರದಿಯನ್ನು ತಯಾರಿಸಿ ವಿಚಾರಣಾ ಸಮಿತಿಗೆ ಒಪ್ಪಿಸಿದ್ದಾನೆ. ಇದನ್ನು ಭಾಷಾಂತರಿಸಿ ಇಲ್ಲಿ ಕೊಡಲಾಗಿದೆ. ಈ ವರದಿಯನ್ನು ಓದುಗರ ಅನುಕೂಲಕ್ಕಾಗಿ, ಸುಸಾಂಗತ್ಯದ ಅವಶ್ಯಕತೆಯಿಂದ ಅದರಲ್ಲಿ ಹೇಳಿರುವುದನ್ನು ಸ್ವಲ್ಪ ಹಿಂದೆ ಮುಂದೆ ಮಾಡಲಾಗಿದೆ ಆದರೂ ಏನನ್ನು ಸೇರಿಸಿಲ್ಲ ಅಥವಾ ಬಿಟ್ಟಿಲ್ಲ. ಇದರಲ್ಲಿ ಕಂಡುಬರುವ ವಿಚಾರಗಳಲ್ಲಿ

ಬಹುಪಾಲು ಸತ್ಯವಾಗಿರಲೇಬೇಕು. ಈಗಲೂ ಪ್ರಚಲಿತ ಊಹೆಯಂತೆ ಕೊತ್ತಳಿಗೆಯ ಭಟರೆಂದು ಪರಿಹಾಸ್ಯಕ್ಕೆ ಒಳಗಾಗುವ ಜನಸಮುದಾಯ ಪುತ್ತೂರಲ್ಲಿ ಸೇರಿದ್ದಲ್ಲ. ಆಗ ಕೋವಿಯ ತಯಾರಿಕೆ ಅರಣ್ಯ ಪ್ರದೇಶದಲ್ಲಿ ವಾಸವಿದ್ದವರ ಅವಶ್ಯಕತೆಯಾಗಿತ್ತು. ಗ್ರಾಮೀಣ ಕಬ್ಬಿಣ ಕೆಲಸದ ಆಚಾರಿಗಳು ಕೋವಿ ತಯಾರಿಸುವುದರಲ್ಲಿ ನಿಪುಣರಾಗಿದ್ದರು. ಎರಡು ಸಾವಿರಕ್ಕೂ ಹೆಚ್ಚು ಜನ ನಿಜವಾದ ಕೋವಿ ಹಿಡಿದಿದ್ದರು. ಲೆವಿನನು ಪುತ್ತೂರಿಗೆ ಬಂದದ್ದು, ಇವರನ್ನು ನೋಡಿ ಮರು ರಾತ್ರಿಯೇ ಮಂಗಳೂರಿಗೆ ಓಡಿದ್ದು ಆಶ್ಚರ್ಯವಲ್ಲ. ಮಂಗಳೂರಲ್ಲೂ ಭದ್ರತೆ ಇಲ್ಲದಾದುದರಿಂದ ಅಲ್ಲಿಂದಲೂ ಓಡಬೇಕಾಯಿತು.

ಲೆವಿನನ ವರದಿಯ ಕೊನೆಯಲ್ಲಿ ಕಂದಾಯ ವಸೂಲಿಯ ವಿಚಾರವನ್ನು ವಿಸ್ತಾರವಾಗಿ ಹೇಳಲಾಗಿದೆ. ಇದು ಕೂಡಾ ಅಂದಿನ ಆಡಳಿತ ಮತ್ತು ಸುಳ್ಯ ತಾಲೂಕಿನ ಜನಜೀವನವನ್ನು ಊಹಿಸಲು ಅನುಕೂಲ ಮಾಡಿಕೊಡುತ್ತದೆ. ಕಾಡುಪ್ರದೇಶದಲ್ಲಿ ಯಾವ ರಾಜನ ಆಳ್ವಿಕೆಯಲ್ಲಿದ್ದೇವೆಂಬ ಗೊಡವೆಯೇ ಇಲ್ಲದೆ ತಮ್ಮಷ್ಟಕ್ಕೆ ಜೀವಿಸುತ್ತಿದ್ದವರನ್ನು ಕೆರಳುವಂತೆ ಮಾಡಿ ತೊಡಕಿನಲ್ಲಿ ಸಿಕ್ಕಿಕೊಂಡದ್ದು ಬ್ರಿಟಿಷರ ಆಳ್ವಿಕೆಯಲ್ಲಿ ಒಂದು ಅವಮಾನದ ಅನುಭವವಷ್ಟಾದರು ಆಯಿತು.

೧೮೭೦ರಲ್ಲಿ ಮಡಿಕೇರಿಯ ಸೆಂಟ್ರಲ್ ಸ್ಕೂಲ್‌ನಲ್ಲಿ ರೆವರೆಂಡ್ ಜಿ. ರಿಕ್ತರ್ ಪ್ರಿನ್ಸಿಪಾಲ್ ಆಗಿದ್ದನು. ಆತನು ಪ್ರಕಟಿಸಿದ ಗಜೇಟಿಯರ್ ಆಫ್ ಕೂರ್ಗ್‌ನಲ್ಲಿ ವರದಿಯಾಗಿರುವ ಕೊಡಗು ಬಂಡಾಯ ಸಾಕಷ್ಟು ಬದಲಾವಣೆ ಕಂಡಿದೆ. ತಮಗೆ ಸಹಾಯ ಮಾಡಿದ ಕೊಡಗರನ್ನು ಸಾಕಷ್ಟು ಹೊಗಳಲಾಗಿದೆ. ಪ್ರಮುಖ ವಿರೋಧಿಗಳಾಗಿ ಗೌಡರನ್ನು ಗುರುತಿಸಲಾಗಿದೆ. ಇದರಿಂದ ಬ್ರಿಟಿಷರ ಆಳ್ವಿಕೆಯಲ್ಲಿ ಪ್ರತ್ಯುಪಕಾರ ಮತ್ತು ಪ್ರತೀಕಾರ ಇವೆರಡನ್ನು ಎರಡೂ ಜನಾಂಗಗಳೂ ಅನುಭವಿಸಿವೆ. ನಡಿಕೇರಿಯಂಡ ಚಿಣ್ಣಪ್ಪನವರ ಪಟ್ಟೋಳೆ ಪಳಮೆಯಲ್ಲಿ ಕೊಟ್ಟಿರುವ ಉಲ್ಲೇಖಗಳು ರಿಕ್ತರನ ಅಭಿಪ್ರಾಯದೊಂದಿಗೆ ತುಲನಾತ್ಮಕವಾಗಿ, ಅಮರ ಸುಳ್ಯ ದಂಗೆಯನ್ನು ಬ್ರಿಟಿಷ್ ಪರ ದೃಷ್ಟಿಕೋನದಿಂದ ನೋಡುವಂತೆಯೂ, ದಂಗೆಯಲ್ಲಿ ಭಾಗವಹಿಸಿದವರನ್ನು ಕೀಳಾಗಿ ಚಿತ್ರಿಸಿದಂತೆಯೂ ಕಂಡುಬರುತ್ತದೆ.

ಸಂಶೋಧಕರಿಗೆ ಅನುಕೂಲವಾಗುವಂತೆ ಮದ್ರಾಸ್ ಪತ್ರಾಗಾರದಲ್ಲಿರುವ ಕೆಲವೊಂದು ಮಾಹಿತಿಗಳನ್ನು ಅನುಬಂಧದಲ್ಲಿ ಸೇರಿಸಲಾಗಿದೆ. ಸಂಗ್ರಹ ಎಷ್ಟು ದೊಡ್ಡದಿದ್ದರೂ, ಸ್ವಾತಂತ್ರ್ಯ ಸಿಕ್ಕಿ ಅರ್ಧ ಶತಮಾನ ಕಳೆದುಹೋದರೂ, ಪಾದಯಾತ್ರೆ ಮಾಡಿ ಜನಜಾಗೃತಿಗೆ ಪ್ರಯತ್ನಿಸಿದರೂ ಸರಕಾರದ ಹಾಗೂ ಜನಸಾಮಾನ್ಯರ ಗಮನಸೆಳೆಯುವುದರಲ್ಲಿ ವಿಫಲರಾಗಿದ್ದೇವೆ. ಸುಳ್ಯದ ಸರಕಾರಿ ಪದವಿಪೂರ್ವ ಕಾಲೇಜಿನಲ್ಲಿ ಸ್ವರ್ಣ ಸ್ವಾತಂತ್ರ್ಯ ವರ್ಷದ ಕೊನೆ ದಿನ ೧೪-೮-೧೯೯೮ರಲ್ಲಿ ನಡೆದ

ಸರಕಾರಿ ಕಾರ್ಯಕ್ರಮದಲ್ಲಿ ಅಮರಕ್ರಾಂತಿ ಉತ್ಸವ ಸಮಿತಿಯವರಿಗೆ ಅವಕಾಶ ನೀಡದೆ ನಿರ್ಲಕ್ಷಿಸಲಾಗಿದೆ.

ಅಮರಕ್ರಾಂತಿ ಉತ್ಸವ ಸಮಿತಿಯು ರಾಜ್ಯದ ಮುಖ್ಯಮಂತ್ರಿ ಶ್ರೀ ಜೆ. ಎಚ್. ಪಟೇಲ್‌ರನ್ನು ಭೇಟಿ ಮಾಡಿ ೧೮೩೭ರಲ್ಲಿ ಬ್ರಿಟಿಷರ ವಿರುದ್ಧ ಹೋರಾಡಿದ ಹಿರಿಯರ ನೆನಪಿಗಾಗಿ ಕೆಲವು ಕ್ರಮಗಳನ್ನು ಕೈಗೊಳ್ಳಬೇಕೆಂದು ನಿವೇದಿಸಿತು :

i) ಕೊಡಗು ಮತ್ತು ಸುಳ್ಯ ಬಂಡಾಯದ ನೆನಪಿಗೆ ಮಡಿಕೇರಿಯಲ್ಲಿ ಮತ್ತು ಸುಳ್ಯದಲ್ಲಿ ವಸ್ತುಸಂಗ್ರಹಾಲಯ ಮತ್ತು ಅಧ್ಯಯನ ಕೇಂದ್ರಗಳನ್ನು ನಿರ್ಮಿಸುವುದು.

ii) ಇದಕ್ಕೆ ಸಂಬಂಧಿಸಿದಂತೆ ಮಂಗಳೂರು ವಿಶ್ವವಿದ್ಯಾಲಯದಲ್ಲಿ ಅಧ್ಯಯನ ಪೀಠವೊಂದನ್ನು ಸ್ಥಾಪಿಸುವುದು.

iii) ದಾಖಲೆಗಳ ಆಧಾರದಲ್ಲಿ ಕೊಡಗಿನ ಇತಿಹಾಸವನ್ನು ಪುನಾರಚಿಸುವುದು.

iv) ಪ್ರತಿವರ್ಷ ಎಪ್ರಿಲ್ ಐದರಂದು ಕೊಡಗು, ಸುಳ್ಯ ಮತ್ತು ಮಂಗಳೂರುಗಳಲ್ಲಿ ಬಂಡಾಯದ ನೆನಪಿಗೆ ಕಾರ್ಯಕ್ರಮಗಳನ್ನು ನಡೆಸುವುದು.

v) ಅಮರ ಕ್ರಾಂತಿಯಲ್ಲಿ ಪಾಲ್ಗೊಂಡವರ ಕುಟುಂಬಗಳನ್ನು ಗುರುತಿಸಿ ಗೌರವಿಸುವುದು.

ಇವು ಜನರ ಒತ್ತಾಸೆಯಿಂದ ಆಗಬೇಕಾಗಿರುವ ಕೆಲಸಗಳು. ಇನ್ನಾದರೂ ಈ ಬಗ್ಗೆ ಪ್ರಾಮಾಣಿಕ ಪ್ರಯತ್ನಗಳು ನಡೆದಲ್ಲಿ ನಮ್ಮ ಶ್ರಮ ಸಾರ್ಥಕವೆಂದು ಭಾವಿಸುತ್ತೇವೆ.

*

# ೬. ಕ್ರಾಂತಿಯ ಕುರಿತು ಲೆವಿನನ ವರದಿ

ಇವರಿಗೆ -

ಮೇಜರ್ ಜನರಲ್ ವಿಗೋರ್ (Vigourox)
ಮತ್ತು ಚಾರ್ಲ್ಸ್ ರಾಬರ್ಟ್ ಕಾಟನ್
ಕಮಿಶನರು ಮತ್ತು ಸಿ. ಮತ್ತು ಸಿ. ಮತ್ತು ಸಿ.

ಮಹನೀಯರೇ,

ನಿಮ್ಮ ದಿನಾಂಕ ೧೦ರ ಪತ್ರವು ತಲಪಿರುವುದಾಗಿ ತಿಳಿಸುವ ಮತ್ತು ಅದರಲ್ಲಿರುವ ವಿಷಯಗಳಿಗೆ ಸಂಬಂಧಿಸಿದಂತೆ ವಿಸ್ತಾರವಾಗಿ, ಅವಶ್ಯವಿರುವ ಮಾಹಿತಿಗಳನ್ನು ಅವಲೋಕನಮಾಡಿ ಉತ್ತರಿಸುವ ಗೌರವ ನನ್ನ ಪಾಲಿನದ್ದಾಗಿದೆ. ಸರಕಾರದ ವಿರುದ್ಧ ಜನತೆ ಶಸ್ತ್ರ ಹಿಡಿದು ನಿಂತ ವಿಚಾರ ನನಗೆ ಪ್ರಥಮವಾಗಿ ತಲುಪಿದಲ್ಲಿಂದ ಪ್ರಾರಂಭಿಸುವುದು ತನಿಖೆಗೆ ಸಹಾಯಕವಾಗಬಹುದೆಂದು ನನಗೆ ಅನ್ನಿಸುತ್ತದೆ.

೧೮೩೭ ಮಾರ್ಚ್ ೩೦ - ಬೆಳ್ಳಾರೆಯಲ್ಲಿ ೨೦೦೦ ಸಶಸ್ತ್ರ ಜನರು : ಕಳೆದ ಮಾರ್ಚ್ ೨೭ ರಂದು ಕೆಳ ಕೊಡಗಿನಲ್ಲಿ ಜಮಾಬಂದಿ ಮುಗಿಸಿ, ನನ್ನ ಕಚೇರಿಯೊಂದಿಗೆ ಬೆಳ್ಳಾರೆ ಪೇಟೆಗೆ ನಾನು ಹೊರಡಲಿದ್ದೆ. ಅಷ್ಟರಲ್ಲಿಯೇ ಪ್ರಿನ್ಸ್‌ರೀಜಂಟ್ ಮಂಗಳೂರು ಖಜಾನೆಗೆ ಬಂದಿರುವುದು ತಿಳಿದು ಬಂತು. ಹುಜೂರು ಜಮಾಬಂದಿಯ ಪೂರ್ವಭಾವಿ ಕಾರ್ಯಕ್ಕೆ ಮುಖ್ಯ ಶಿರಸ್ತೇದಾರರಿಗೆ ಅಪ್ಪಣೆ ಕೊಟ್ಟು, ಮಂಗಳೂರು ಕಡೆ ತೆರಳಿದ್ದೆ. ಪುತ್ತೂರಲ್ಲಿ ನಾನು ಉಳಿದುಕೊಂಡ ಸಂದರ್ಭದಲ್ಲಿ ರೈತರೊಂದಿಗೆ ಆತ್ಮೀಯವಾಗಿ ವಿಚಾರ ವಿನಿಮಯ ನಡೆಸಿದ್ದೆ. ರೈತರು ಬೆಳೆಹಾನಿಯಾದ ಬಗ್ಗೆ ನನ್ನ ಮುಂದಿಟ್ಟ ಪ್ರತಿಯೊಂದು ಹೇಳಿಕೆಗಳಿಗೂ ನನ್ನ ನಿರ್ಣಯಗಳಲ್ಲಿ ಅವರಿಗೆ ಅತೃಪ್ತಿ ಇತ್ತು ಅಂತ ನನಗೆ ಅನ್ನಿಸುತ್ತಿತ್ತು, ಆದರೂ ನನ್ನ ಮುಂದೆ ಯಾವುದೇ ಆರೋಪ ಅಥವಾ ಗುಣುಗುಟ್ಟುವಿಕೆ ಕೂಡಾ ಕಂಡು ಬರಲಿಲ್ಲ. ಮಂಗಳೂರಲ್ಲಿ ನನಗೆ ತಲುಪಿದ ಜಮಾಬಂದಿ ವರದಿ ಬಗ್ಗೆ

ಮುಖ್ಯ ಶಿರಸ್ತೇದಾರನ ಪತ್ರದ ಭಾಷಾಂತರ ಇದರೊಂದಿಗೆ (ನಂಬ್ರ ೧) ಲಗತ್ತಿಸಿದ್ದೇನೆ. ಮಾರ್ಚ್ ೩ಂನೇ ರಾತ್ರಿ ೧೧ ಗಂಟೆಗೆ ನನ್ನ ವಿಳಾಸಕ್ಕೆ ಬಂಟ್ವಾಳದ ಶಿರಸ್ತೇದಾರನ ಒಂದು ವರದಿ ಬಂದು ತಲಪಿತು. ಅದರ ಪ್ರಕಾರ ಸುಮಾರು ೨೦೦೦ ಸಶಸ್ತ್ರ ಜನರು ಬೆಳ್ಳಾರೆ ಪೇಟೆಯಲ್ಲಿ ಸೇರಿದ್ದಾರೆ. ಪೈಶ್ಕಾರನ ಕಚೇರಿಯನ್ನು ವಶಪಡಿಸಿಕೊಂಡಿದ್ದಾರೆ. ಮುಖ್ಯ ಶಿರಸ್ತೇದಾರ, ತಹಶೀಲ್ದಾರ ಮತ್ತಿತರ ಮುಖ್ಯ ಉದ್ಯೋಗಿಗಳನ್ನು ಬಂಧಿಸಿಟ್ಟಿದ್ದಾರೆ. ಇಂತಹ ಭಯಂಕರವಾದ ಅದ್ಭುತ ವರದಿ ಆಧಾರಗಳಿಂದ ಕೂಡಿರಲಿಲ್ಲ. ಇದರ ಬಗ್ಗೆ ಕಾರ್ಯಾಚರಣೆ ತೆಗೆದುಕೊಳ್ಳುವುದು ಸರಿಯೇ? ಸ್ವಲ್ಪ ಸಮಯ ಸಂಶಯಪಡುವಂತಾಯಿತು. ಇದು ನಿಜವಾದರೆ, ಉಪೇಕ್ಷೆಯಿಂದ ಉಂಟಾಗಬಹುದಾದ ಪರಿಣಾಮದ ಕುರಿತು ಚಿಂತಿಸಿ, ತಕ್ಷಣ ಕಾರ್ಯೋನ್ಮುಖನಾದೆ. ೨ನೇ ಎನ್. ಐ. ಯ ಮೇಜರ್ ಡೌಕರ್‌ಗೆ ಪತ್ರ (ನಂಬ್ರ ೨) ಬರೆದೆ. ನಕಲು (ನಂಬ್ರ ೨) ಲಗತ್ತಿಸಿದ್ದೇನೆ. ೩೧೦ ಸೈನಿಕರೊಂದಿಗೆ ಸಹಕರಿಸಲು ಕರೆ ಕಳಿಸಿದೆ. ಮೇಜರ್ ಡೌಕರ್ ಅಷ್ಟು ಮಂದಿಯೊಂದಿಗೆ ಬಂದಿದ್ದರೆ, ಪುತ್ತೂರಲ್ಲಿಯೇ ದಂಗೆಕೋರರನ್ನು ಹಿಮ್ಮೆಟ್ಟಿಸಲು ಸಾಧ್ಯವಿತ್ತು ಎಂದು ನನ್ನ ನಂಬಿಕೆ.

**೧೮೩೭ ಮಾರ್ಚ್ ೩೧ - ಪುತ್ತೂರಿಗೆ ೧೨೦೦ ಜನ ದೊಂದಿ ಹಿಡಿದು ಬರುತ್ತಿದ್ದಾರೆ:** ನನ್ನ ಪತ್ರಕ್ಕೆ ಉತ್ತರವಾಗಿ ಮೇಜರ್ ಡೌಕರ್ ೧೬೫ ಮಂದಿಯೊಂದಿಗೆ ಬಂದರು. ಅವರ ಪೈಕಿ ಪುತ್ತೂರು ತನಕ ನಡೆಯಲು ಅಸಮರ್ಥರಾಗಿದ್ದ ೧೪ ಜನರನ್ನು ಬಂಟ್ವಾಳದಲ್ಲಿಯೇ ಬಿಡಬೇಕಾಯಿತು. ನನ್ನ ಮುಖ್ಯ ಸಹಾಯಕ ಲಶ್ಶಿಂಗ್‌ಟನ್‌ನ ತುಕಡಿಯೊಂದಿಗೆ ನಾನು ಸೂರ್ಯೋದಯದ ಹೊತ್ತಿಗೆ ಬಂಟ್ವಾಳ ತಲುಪಿದೆ. ಅಲ್ಲಿ ಉಪಾಹಾರ ಮುಗಿಸಿ ಹೊರಟವರು ರಾತ್ರಿ ೯ ಗಂಟೆಗೆ ಪುತ್ತೂರು ತಲುಪಿದೆವು. ಬಂಟ್ವಾಳದ ಹಾದಿಯಲ್ಲಿ ನನಗೆ ತಲುಪಿದ ವರದಿಯು ಹಿಂದಿನದನ್ನು ದೃಢೀಕರಿಸಿತು. ಅದನ್ನು ಭಾಷಾಂತರಿಸಿ ಹೇಳಿಕೆಯೊಂದಿಗೆ (ನಂಬ್ರ ೩) ಲಗತ್ತಿಸಿದ್ದೇನೆ.

ದೊಂದಿ ಹಿಡಿದ ಬಂಡಾಯಗಾರರ ತಂಡವೊಂದು ಅಂದಾಜು ೩-೪ ಮೈಲು ದೂರದಲ್ಲಿ ಪುತ್ತೂರಿನ ಕಡೆ ಮಾರ್ಚ್ ಮಾಡುತ್ತಿತ್ತು. ನಮ್ಮ ಆಗಮನ ಅವರಿಗೆ ಅನಿರೀಕ್ಷಿತವಾಗಿರಬೇಕು. ಸಾಕಷ್ಟು ಬೇಹುಗಾರಿಕೆಯ ಸಹಾಯ ಇಲ್ಲದೆ ಕೂಡಾ ಕತ್ತಲಿನ ರಾತ್ರಿಯಲ್ಲಿ ಎರಡು ಮೈಲಿನ ಅಂತರದಲ್ಲಿ ಇದ್ದ ಅವರ ಮೇಲೆ ಎರಗುವುದು ಆಗಿನ ನಮ್ಮ ದಣಿದ ಸ್ಥಿತಿಯಲ್ಲಿ ಬುದ್ಧಿವಂತಿಕೆಯದ್ದಲ್ಲವೆಂದು ಅರಿತೆವು. ಅದೇ ಸಮಯದಲ್ಲಿ, ಬೆಳ್ಳಾರೆ ಪೇಟೆಯ ಕಡೆ ೫ ಮೈಲು ದೂರದಲ್ಲಿ ಪುಟ್ಟಬಸಪ್ಪ ತನ್ನ ಜನರೊಂದಿಗೆ ವಿಶ್ರಮಿಸಿದ್ದನು. ಮುಂದಿನ ಎರಡು ದಿನ ತನ್ನ ಸುತ್ತು ಪಹರೆ ಇಟ್ಟು ಬೇಹುಗಾರರ ಮೂಲಕ ನಮ್ಮ ಬಲ ಎಷ್ಟಿದೆ ಎಂದು ತಿಳಿಯುವತ್ತ ಗಮನಹರಿಸಿದ್ದನು.

ನಾವು ಪುತ್ತೂರು ತಲುಪಿದಾಗ, ನನ್ನ ಅಂದಾಜಿನ ಪ್ರಕಾರ ಸುಮಾರು ೧೨೦೦ ಜನ ಸೇರಿದ್ದರು. ದೇಶದಲ್ಲಿ ಗೊಂದಲ ಹುಟ್ಟಿಸಲು ಈ ಸಾಹಸಿಯು ಸಮರ್ಥನಿದ್ದಾನೆ ಅನ್ನುವುದು ನಿಶ್ಚಿತವಾಗಿತ್ತು. ನನಗೇನೂ ತೋಚಲಿಲ್ಲ - ನನ್ನಲ್ಲಿದ್ದ ಸೈನ್ಯ ಒಂದು ವೇಳೆ ಶತ್ರುಗಳಿಗೆ ಸರಿ ಹೊಂದುವಷ್ಟು ಇಲ್ಲದೆ ಹೋದರೆ? ಬಂಡಾಯಗಾರರು ಮಂಗಳೂರು ಕಡೆ ಆಕ್ರಮಿಸಲು ಹೋಗಲಿದ್ದಾರೆಯೇ? ಅವರನ್ನು ಹೇಗೆ ಎದುರಿಸುವುದು? ಅದಕ್ಕಾಗಿ ಕರ್ನಲ್ ಎಲನ್‌ಗೆ ಪತ್ರ ಬರೆದು ಮಂಗಳೂರಿನ ಸಹಾಯಕ್ಕೆ ೩೦೦ ಜನ ಕಳುಹಿಸಲು ವಿನಂತಿಸಿಕೊಂಡೆನು. (ಪತ್ರದ ನಕಲು ನಂಬ್ರ ೪ ಲಗತ್ತಿಸಿದೆ).

ಬಂಡಾಯದ ಪ್ರಮುಖನನ್ನು ಹಿಡಿದು ಕೊಟ್ಟವರಿಗೆ ೫೦೦ ಮತ್ತು ೧೦೦೦ ರೂಪಾಯಿ ಕೊಡುವುದಾಗಿ ಕ್ರಮವತ್ತಾಗಿ ಘೋಷಿಸಿದ್ದೆನು. ಆದರೆ ಅವುಗಳಲ್ಲಿ ಮೊದಲನೆಯದರ ಗತಿ ಏನಾಯಿತೋ ಗೊತ್ತಿಲ್ಲ. ಎರಡನೆಯದು ಭರ್ತ್ಸನೆಯೊಡನೆ, ನಾವಿದ್ದಲ್ಲಿಂದ ಸ್ವಲ್ಪ ದೂರದಲ್ಲಿ ಇವುಗಳನ್ನು ಯಾರೂ ಗಣಿಸದೆ ನಿರ್ಲಕ್ಷ್ಯತೆಗೊಳಗಾಯ್ತು.

ನಾವು ಪುತ್ತೂರಿಗೆ ತಲುಪಿದ ಸ್ವಲ್ಪ ಹೊತ್ತಿನಲ್ಲಿಯೇ ಒಂದು ವಿಚಾರ ಸ್ಪಷ್ಟವಾಯಿತು. ನಾವು ಎದುರಿಸಬೇಕಾದ್ದು ನಕಲಿ ಉತ್ತರಾಧಿಕಾರಿಯನ್ನು ಮಾತ್ರ ಅಲ್ಲ. ಇಡೀ ದೇಶ ಮತ್ತು ನೆರೆಕರೆಯವರು ಆತನ ಕಡೆ ಇದ್ದಾರೆ. ಸರಕಾರಿ ನೌಕರರೂ ಸೇರಿದ್ದಾರೆ. ಪಟೇಲರು ಮತ್ತು ಶ್ಯಾನುಭೋಗರ ಪೈಕಿ ಒಬ್ಬನೇ ಒಬ್ಬ ನಮ್ಮ ಕಡೆ ಬರುವಂತಿರಲಿಲ್ಲ. ನಮ್ಮ ಬಗ್ಗೆ ಅತೃಪ್ತಿ ಮಾತ್ರ ಅಲ್ಲ - ನಿಜವಾದ ಶತ್ರುತ್ವವು ಇತ್ತು ಎಂಬ ಬಗ್ಗೆ ಸಂದೇಹವೇ ಇಲ್ಲ ಎನ್ನುವುದಕ್ಕೆ ಆಧಾರಗಳು ಸಿಕ್ಕಿದ್ದವು.

ಮೊದಲಾಗಿ ಕಾಣಿಸಿಕೊಂಡ ಪ್ರತಿರೋಧ - ಪುತ್ತೂರಿಗೆ ಕಳುಹಿಸಲ್ಪಟ್ಟ ಕ್ಯಾಂಪ್ ಸಾಮಗ್ರಿಗಳನ್ನು ಸಾಗಿಸುತ್ತಿದ್ದ ಆಳುಗಳ ಮತ್ತು ಸಿಪಾಯಿಗಳ ಮೇಲೆರಗಿದ್ದು ಮತ್ತು ``ನಾವು ನಿಮ್ಮ ಸ್ನೇಹಿತರು, ನಿಮ್ಮೊಡನೆ ಯುದ್ಧ ಮಾಡುವುದಿಲ್ಲ. ನಾವು ಇಂಗ್ಲೀಷರನ್ನು ವಿರೋಧಿಸುತ್ತೇವೆ, ಹೊಡೆದಟ್ಟುತ್ತೇವೆ" ಎಂದು ತಿಳಿಸಿದ್ದಾಗಿದೆ. ಇದರಲ್ಲಿ ಹೆಚ್ಚೇನೂ ಆಗಲಿಲ್ಲ. ಒಂದೆರಡು ದಂಗೆಗಾರರು ಕೊಲ್ಲಲ್ಪಟ್ಟಿರಬಹುದು. ಅಷ್ಟರಲ್ಲಿಯೇ ಅವರು ಸಂಖ್ಯೆಯಲ್ಲಿ ಹೆಚ್ಚಾಗಿದ್ದ ಕಾರಣ ಹವಾಲ್ದಾರ್ ಹೋರಾಟವನ್ನು ಕೊನೆಗೊಳಿಸಬೇಕಾಯಿತು.

**೧೮೩೭ ಏಪ್ರಿಲ್ ೨ - ಕತ್ತಲಲ್ಲಿ ಬಂಟ್ವಾಳಕ್ಕೆ ಪಲಾಯನ:** ದೇಶದ ಮತ್ತು ಜನರ ಸ್ವಭಾವವನ್ನು ಅವಲಂಬಿಸಿ, ಬಹಳ ಕಷ್ಟದಿಂದ ನಮ್ಮ ವಿರುದ್ಧ ಸಂಘಟಿತರಾದ ಜನರ ಸಂಖ್ಯೆಯನ್ನು - ಬಹುಪಾಲು ಸಮರ್ಪಕವೆಂಬಂತೆ ಅಂದಾಜು ಮಾಡಲಾಯಿತು. ಅದು ಹೀಗಿದೆ - ಜಿಲ್ಲೆಯ ಜನಸಂಖ್ಯೆ ೪೫೦೦೦. ಇವರಲ್ಲಿ ಕಾಲಂಶ ಜನ ವಂಶಪಾರಂಪರ್ಯದಿಂದ ಕೋವಿ ಹಿಡಿಯುವ ಸಂಪ್ರದಾಯದವರಾಗಿದ್ದಾರೆ. ಅದಕ್ಕಿಂತಲೂ

ಹೆಚ್ಚು ಪಾಲು ಜನರಲ್ಲಿ ಕೋವಿಗಳು ಇವೆ. ಈ ರೀತಿ ಅಂದಾಜು ಮಾಡಿದ್ದು ಸರಿಯಾಗಿತ್ತು ಎಂಬುದು ಮುಂದಿನ ಘಟನೆಗಳಿಂದಾಗಿ ಸಾಬೀತಾಯಿತು.

ಪುತ್ತೂರಿನಂತಹ ಊರಿನ - ತೆರೆದ ಬಯಲಿನಲ್ಲಿ ಎದುರಿಸಲು ತಯಾರಿಲ್ಲದ - ಇಂತಹ ಅಸಂಖ್ಯಾತ ಶತ್ರುಗಳೊಡನೆ ಹೋರಾಡುವುದು ಸಾಧ್ಯವೇ ಇಲ್ಲದ ವಿಚಾರ ಅನಿಸಿತ್ತು. ನಾವು ಕಾಣಿಸಿಕೊಂಡರೆ ನಷ್ಟವೇ ಎನ್ನುವುದೂ ಖಚಿತವಾಗಿರಲಿಲ್ಲ. ನಿಧಾನವಾಗಿ ಮರಣಾಂತಿಕವಾಗಲೂ ಬಹುದಿತ್ತು. ನಾವು ನೋಡಿಕೊಳ್ಳಬೇಕಾಗಿದ್ದ ಪ್ರದೇಶಗಳ ಜನರ ಕುರಿತಾದ ವಿಚಾರಗಳ ಗೊಂದಲಗಳಲ್ಲಿ ಆರಿಸಿಕೊಳ್ಳಬೇಕಾಗಿರುವುದು - ಒಂದು ನಮ್ಮ ತಂಡದ ರಕ್ಷಣೆ, ಮತ್ತೊಂದು ಮಂಗಳೂರಿಗೆ ನೀಡಬೇಕಾದ ರಕ್ಷಣೆ. ಇದರ ಹೊರತು ಬೇರೆ ಏನನ್ನಾದರೂ ಎತ್ತಿಕೊಂಡಲ್ಲಿ ಇವುಗಳೆರಡರ ನಾಶಕ್ಕೂ ಕಾರಣವಾಗುತ್ತಿತ್ತು.

ಮೂರನೇ ದಿನ ಪುತ್ತೂರಿನ ಸುತ್ತಮುತ್ತ ದೊಡ್ಡ ಸಂಖ್ಯೆಯಲ್ಲಿ ಸಶಸ್ತ್ರ, ನಿಶ್ಶಸ್ತ್ರ ಜನ ಬಂದು ಸೇರತೊಡಗಿದ್ದರು. ಇವರ ಸಂಖ್ಯೆ ಎಷ್ಟೆಂದು ನಮ್ಮ ಎಣಿಕೆಗೆ ನಿಲುಕಲಿಲ್ಲ. ದೊಡ್ಡ ಸಂಖ್ಯೆಯಲ್ಲಿ ಸರಕಾರದ ವಿರುದ್ಧ ದೃಢವಾಗಿ ಸೇರಿದ್ದ, ಅವರಲ್ಲಿ ನಾವು ಮೇಲ್ಮೈ ಸಾಧಿಸಿದ್ದೇವೆಂಬ ನಂಬಿಕೆ ಇದ್ದುದ್ದೂ - ಅದು ವ್ಯಕ್ತವಾಗುತ್ತಿದ್ದುದೂ ನಮಗೆ ಮನದಟ್ಟಾಯಿತು. ಅದೇ ಸಮಯ, ಒಂದು ಗುಂಪು ಬಿಸ್ಲೆಗೆ ತೆರಳಿದೆ ಎಂದೂ ತಿಳಿದುಬಂತು. ಇನ್ನೊಂದು ಗುಂಪು ಸಹಕರಿಸುವವರನ್ನು ಒಂದುಗೂಡಿಸುವ ಉದ್ದೇಶದಿಂದ ಬಂಟ್ವಾಳ ಮೂಲಕ ಕಾಸರಗೋಡಿನ ದಾರಿಯಲ್ಲಿ ಸಾಗುತ್ತಿದೆ. ಮಂಗಳೂರಿಗೆ ಬಂದಾಗ ಇವುಗಳ ಮುಂದಾಳುತ್ವ ವಹಿಸಲಿದ್ದೇವೆ ಎಂಬುದಾಗಿ ಬಂಡಾಯಗಾರರು ನಮಗೆ ಹೇಳಿದ್ದರು. ಇವರ ಶಕ್ತಿ ಎಷ್ಟೆಂದು ತೀರ್ಮಾನಿಸುವುದಕ್ಕೆ ನಮಗೆ ಯಾವುದೇ ಆಧಾರ ಇರಲಿಲ್ಲ. ಆದರೆ ಇವರನ್ನು ತಡೆಯುವ ಬಲ ಮಂಗಳೂರಲ್ಲಿ ಇರಲಿಲ್ಲವೆಂಬುದು ನಮಗೆ ತಿಳಿದಿತ್ತು. ಹೀಗಿರುವ ಕಾರಣ, ಎಷ್ಟೇ ಕಷ್ಟವಾದರೂ ಮಂಗಳೂರಿನ ರಕ್ಷಣೆಗಾಗಿ ನಾವು ಹಿಂತಿರುಗುವುದು ಅಗತ್ಯವೆಂದು ಏಪ್ರಿಲ್ ೨ರ ರಾತ್ರಿಯೇ ಹೊರಟೆವು. ಕಮೀಶನರಿಗೆ ಇದರ ಪರಿಣಾಮ ಈಗಾಗಲೇ ಮನವರಿಕೆ ಆಗಿದೆ. ಇದಕ್ಕೆ ಮೇಲೆ ಹೇಳಿದ ಕಾರಣ ಮಾತ್ರವಲ್ಲದೆ, ನಮ್ಮಲ್ಲಿಗೆ ಆಹಾರ ಸಂಗ್ರಹ ಮತ್ತು ನೀರು ಬಂದು ತಲುಪದಂತೆ ತಡೆಯೊಡ್ಡಲ್ಪಟ್ಟದ್ದು ಇನ್ನೊಂದು ಕಾರಣವಾಗಿತ್ತು.

**೧೮೩೭ ಏಪ್ರಿಲ್ ೪ - ಮಂಗಳೂರು ನಿವಾಸಿಗಳ ಅಸಹಕಾರ:** ನಾನು ಮಿಸ್ಟರ್ ವೈಟ್ ಅವರಲ್ಲಿ ಕೇಳಿಕೊಂಡ ಪ್ರಕಾರ ಪೇದೆಗಳನ್ನು ಸಂಗ್ರಹಿಸುವುದು ಅವರಿಗೆ ಸಾಧ್ಯವಾಗಲಿಲ್ಲ. ಮೂರನೇ ತಾರೀಕಿನಂದು ಮಧ್ಯಾಹ್ನದ ನಂತರ ಮದ್ದುಗುಂಡು ಹೊರಟಿತ್ತು. ಪುತ್ತೂರಿನಿಂದ ೫-೬ ಮೈಲು ಮುನ್ನಡೆದ ಮೇಲೆ ಅದನ್ನು ಹಿಂದೆ ಕರೆಯಿಸಿಕೊಳ್ಳಲಾಯಿತು. ಪೇದೆಗಳನ್ನು ನೋಂದಾಯಿಸಿಕೊಳ್ಳುವುದರಲ್ಲಿ ಮಿ. ವೈಟ್‌ಗಿಂತ ನಾನು ಹೆಚ್ಚು ಯಶಸ್ವಿಯಾಗಿದ್ದೆ. ಮಂಗಳೂರಿಗೆ ಹಿಂತಿರುಗುತ್ತಾ ದಾರಿಯಲ್ಲಿ ೧೫

ಜನರನ್ನು ಸೇರಿಸಿಕೊಂಡು ಪ್ರತಿಯೊಬ್ಬರ ಕೈಯಲ್ಲಿ ಬಂದೂಕು ಮತ್ತು ೧೦ ರೌಂಡ್ ಮದ್ದುಗುಂಡುಗಳನ್ನು ಕೊಡಲಾಯಿತು. ಆದರೆ ಹನ್ನೆರಡು ಗಂಟೆಗಳೊಳಗೆ ಆ ಜನರಾಗಲಿ, ಬಂದೂಕುಗಳಾಗಲಿ, ಮದ್ದುಗುಂಡಾಗಲಿ ಎಲ್ಲೂ ಕಂಡುಬರಲಿಲ್ಲ. ಮಿ. ವೈಟ್‌ಗೆ ಕೇವಲ ಆರು ಜನರನ್ನು ಕಳುಹಿಸಲು ಸಾಧ್ಯವಾಯಿತು. ಅವರಲ್ಲಿ ಗುಂಡುಮದ್ದು ಬಂದೂಕುಗಳನ್ನು ಕೊಟ್ಟಿದ್ದನು. ಆದರೆ ಅವರು ನಾಪತ್ತೆಯಾಗಿದ್ದರು.

ನಮ್ಮ ತಂಡವು ಬಂಟ್ವಾಳಕ್ಕೆ ಹಿಂತಿರುಗಲು ಕತ್ತಲು ತುಂಬಾ ಉಪಯುಕ್ತವಾಗಿತ್ತು. ಈ ಕಾರಣದಿಂದಾಗಿ ಕೆಲವರು ಸೂರ್ಯೋದಯಕ್ಕೆ ಮೊದಲು ಹಾಗೂ ಕೆಲವರು ನಂತರ ಮಂಗಳೂರು ತಲುಪುವುದು ಸಾಧ್ಯವಾಯಿತು. ಬಂಟ್ವಾಳಕ್ಕೆ ತಲುಪಿದಾಗ, ಪೇಟೆ ಎಲ್ಲಾ ಕಡೆ ನಿರ್ಜನವಾಗಿತ್ತು. ಸರಕಾರಿ ನೌಕರರಾಗಲಿ, ಸಾರ್ವಜನಿಕರಾಗಲಿ ಕಾಣಸಿಗುತ್ತಿರಲಿಲ್ಲ. ದಾರಿಯ ಉದ್ದಕ್ಕೂ ಅನಗತ್ಯವಾಗಿ ತುಂಬಾ ಮದ್ದುಗುಂಡುಗಳನ್ನು ವ್ಯಯಿಸಬೇಕಾಗಿತ್ತು. ಅತ್ಯಂತ ದಣಿಯುವಿಕೆಯ ಸ್ಥಿತಿಯಲ್ಲಿದ್ದ ಸಿಪಾಯಿಗಳಿಗೆ ಉಪಾಹಾರ ಕೊಡಿಸಬೇಕಾಯಿತು. ಸುಮಾರು ೧೦ ಗಂಟೆಗೆ ಹೊರಟು ನಾವು ಗುರುಪುರದ ಮಾರ್ಗವಾಗಿ ಸಂಜೆ ಮಂಗಳೂರು ತಲುಪಿದೆವು. ದಾರಿಯಲ್ಲಿ ಯಾವುದೇ ಅಡಚಣೆ ಎದುರಿಸಬೇಕಾಗಲಿಲ್ಲ.

ಮಂಗಳೂರು ನಗರ ಎಲ್ಲಾ ವರ್ಗದ ನಿವಾಸಿಗಳಿಂದಲೂ ಖಾಲಿ ಮಾಡಲ್ಪಟ್ಟಂತೆ ಕಾಣಿಸುತ್ತಿತ್ತು. ನಿಧಾನವಾಗಿ ಇನ್ನಷ್ಟು ತೆಳ್ಳಗಾಗತೊಡಗಿತ್ತು. ಉಳಿದ ಕೆಲವರು ನಮ್ಮ ವಿರುದ್ಧ ಭಾಗವಹಿಸದಿದ್ದರೂ, ಸರಕಾರದ ಪರವಾಗಿ ನಿಲ್ಲುವುದು ಹಾಗಿರಲಿ - ಯಾವುದೇ ಸಹಕಾರ ಕೂಡಾ ನೀಡಲು ತಯಾರಿರಲಿಲ್ಲವೆಂದು ಕಂಡುಬಂದಿತ್ತು. ನಗರ ನಿವಾಸಿಗಳು ಬಂಡಾಯಗಾರರೊಂದಿಗೆ ವ್ಯವಹಾರ ಇಟ್ಟುಕೊಂಡದ್ದು ಮಾತ್ರವಲ್ಲದೆ, ನಮ್ಮ ಚಲನವಲನ ಮತ್ತು ನಮ್ಮ ಅಭಿಪ್ರಾಯಗಳು ಏನೆಂದು ಬರೆದು ಕಳುಹಿಸುತ್ತಿರುವುದು ನಮ್ಮ ತಿಳುವಳಿಕೆಗೆ ಬಂದಿತ್ತು. ಪರಿಸ್ಥಿತಿ ಹೀಗಿರುವಾಗ ಪ್ರತಿಯೊಬ್ಬನ ಗಮನಸೆಳೆಯಲ್ಪಟ್ಟ ವಿಚಾರವೆಂದರೆ, ಮಂಗಳೂರಿನಲ್ಲಿ ಹೊರಗಿನ ಶತ್ರುಗಳನ್ನು ಮಾತ್ರವಲ್ಲದೆ ಒಳಗಿನ ಅಪ್ರಯೋಜಕ ಜನರನ್ನು ಎದುರಿಸಬೇಕಾಗಿ ಬಂದದ್ದು. ಸಾರ್ವಜನಿಕ ಸೇವೆಯಲ್ಲಿ ಅಪನಂಬಿಕೆ ಯಾವ ಸ್ಥಿತಿಗೆ ತಲುಪಿತ್ತೆಂದರೆ, ಪ್ರತಿಯೊಬ್ಬನನ್ನು ಸಿಪಾಯಿಗಳು ಬಹಿರಂಗವಾಗಿ ಕಾಣಿಸುವ ಹತ್ಯಾಚಾರಿಗಿಂತಲೂ ಹೆಚ್ಚಾಗಿ ಪರಿಶೀಲಿಸಿದ ಹೊರತು, ನಾವು ಇರುವಲ್ಲಿಗೆ ಅವರನ್ನು ಪ್ರವೇಶಿಸಲು ಬಿಡುತ್ತಿರಲಿಲ್ಲ.

ನಮಗೆ ಸಹಕಾರ ನೀಡಬಲ್ಲ ಜನರು ಮಂಗಳೂರಲ್ಲಿ ಇದ್ದರೂ ಕೂಡಾ ಒಮ್ಮಿಂದೊಮ್ಮೆಗೆ ಮನಸ್ಸು ಬದಲಾಯಿಸಿದ್ದರು. ನಮಗೆ ಸಹಾಯ ಮಾಡಲು ಮನಸ್ಸಿಲ್ಲದಿದ್ದರೆ ಇರಲಿ, ನಗರದ ಕಾವಲು ಪಡೆಯೇ ಕೊಳ್ಳೆಹೊಡೆಯಲು

ತೊಡಗಿರುವಾಗ, ಅದನ್ನು ತಡೆಯಲು ಸಾಧ್ಯವಿದ್ದಂಥವರು ಕೂಡ ನಿರ್ಲಕ್ಷ್ಯದಿಂದ ನೋಡುತ್ತಿದ್ದರು. ಇದು ಯಾವ ಮಟ್ಟದಲ್ಲಿ ಕಾಣಿಸುತ್ತಿತ್ತು ಎಂದರೆ, ನಮ್ಮ ಠಾಣ್ಯದಲ್ಲಿ ಹಣವನ್ನು ಹಂಚಲು ಕೊಟ್ಟಾಗ ಗಲಭೆ ಗೊಂದಲಗಳುಂಟಾದವು. ಖಜಾನೆ ಅಧಿಕಾರಿಯು ಕರ್ತವ್ಯ ನಿಷ್ಠೆಯಿಂದ ಬಾಗಿಲನ್ನು ಭದ್ರಪಡಿಸಿದ್ದರಿಂದ ಖಜಾನೆ ಉಳಿಯಿತು. ಸರಕಾರದ ನೌಕರರು ಹುರಿದುಂಬಿಸದೆ ಇದ್ದರೂ ಇಷ್ಟನ್ನಾದರೂ ಮಾಡುವುದರಲ್ಲಿ ತತ್ಪರರಾದರು ಎನ್ನುವುದರಲ್ಲಿ ಯಾವ ಸಂಶಯವೂ ಇಲ್ಲ.

ಮಂಗಳೂರು ಹಲವು ಮೈಲು ವಿಸ್ತೀರ್ಣದ ಏರುತಗ್ಗಿನ ಕಾಡುಗಳಿಂದ ಆವೃತ್ತವಾದ ಪ್ರದೇಶ. ಇದರಲ್ಲಿರುವ ಸಾರ್ವಜನಿಕ ಮತ್ತು ಖಾಸಗಿ ಕಟ್ಟಡಗಳು ದೂರ, ದೂರಗಳಲ್ಲಿ ಚದರಿಕೊಂಡಿವೆ ಮತ್ತು ಇದಕ್ಕೆ ಇರುವ ದಾರಿಗಳು ಹಲವಾರು. ಕಂಟೋನ್‌ಮೆಂಟ್ ಲೈನ್ ಹೆಚ್ಚು ಕಡಿಮೆ ಎರಡು ಮೈಲು ಉದ್ದವಿದೆ. ಇದು ಎಷ್ಟೊಂದು ಮರಗಳಿಂದ ಕೂಡಿದೆ ಎಂದರೆ ಅಲ್ಲಿಂದ ಹೊರಗೆ ಕಾಣುವುದೇ ಇಲ್ಲ. ಇದನ್ನು ಕಾಯಲು ಸೆಂಟ್ರಿಗಳ ಆವಶ್ಯಕತೆ ಎಷ್ಟಿದೆ ಎಂದರೆ ಜಿಲ್ಲೆಯಲ್ಲಿರುವ ಎಲ್ಲಾ ಸೈನ್ಯ ಸಾಕಾಗದೆ ಹೆಚ್ಚಿಗೆ ಬೇಕಾಗಬಹುದು. ಆದರೆ ಈಗ ನಮ್ಮ ಅಧೀನದಲ್ಲಿರುವುದಕ್ಕಿಂತ ದೊಡ್ಡ ಸಂಖ್ಯೆಯ ಮಿಲಿಟರಿ ನೆಲೆ ಅಗತ್ಯವಿಲ್ಲ. ಒಟ್ಟಿನ ಮೇಲೆ ಅಸಮರ್ಥನೀಯವೆಂದು ಬಿಟ್ಟುಬಿಡುವುದನ್ನು ಸುಮಾರಾಗಿ ಒಪ್ಪಬೇಕಾದ್ದೇ ಎಂದು ನಾನೂ ನಂಬುತ್ತೇನೆ.

**ಖಜಾನೆ ಸಾಗಿಸಲು ಪರದಾಟ:** ಮಂಗಳೂರಿಗೆ ಹಿಂತಿರುಗಿದ ಮರುದಿವಸ ಬೆಳಗ್ಗೆ, ಸರಕಾರದ ಖಜಾನೆಯನ್ನು ಕಡಿಮೆ ಭದ್ರತೆ ಇರುವ ಜಾಗದಿಂದ ಮಿಲಿಟರಿ ಠಾಣ್ಯ ಪ್ರದೇಶಕ್ಕೆ ಸಾಗಿಸುವುದು ಉತ್ತಮವೆಂಬ ಅಭಿಪ್ರಾಯ ಉಂಟಾಯಿತು. ಇದು ಕೂಡಾ ಕಷ್ಟದಿಂದ ಮಾತ್ರ ಜಾರಿಗೊಳಿಸಲು ಸಾಧ್ಯವಾಯ್ತು. ಸರಕಾರಿ ನೌಕರರಲ್ಲಿ ಕೆಲವರು ಮಾತ್ರ ಹಾಜರಿದ್ದರು. ಯಾರೊಬ್ಬ ಪೌರನೂ ಸಹಕರಿಸುವಂತೆ ಕಂಡುಬರಲಿಲ್ಲ. ಒಂದು ಭಾಗವನ್ನು ಸಿಪಾಯಿಗಳು ಗಾಡಿಯಲ್ಲಿ ಎಳೆದುಕೊಂಡು ಕಂಟೋನ್‌ಮೆಂಟಿಗೆ ತಂದರು. ಉಳಿದದ್ದನ್ನು ಸ್ಥಳೀಯ ಸದ್‌ಗೃಹಸ್ಥರೊಬ್ಬರ ಎತ್ತಿನಗಾಡಿಯಲ್ಲಿ ಸಾಗಿಸಲಾಯಿತು. ಆಗ ಖಜಾನೆಯಲ್ಲಿದ್ದ ಸರಕಾರಿ ನೌಕರರು ಅಂದರೆ, ಖಜಾಂಜಿ, ಮುಖ್ಯಕರಣಿಕ ಮತ್ತುಓಬನಾಯ್ಕನೆಂಬ ಹೆಸರಿನ ಒಬ್ಬ ಮುದುಕ ದಫೇದಾರ ಮಾತ್ರ.

ಮೂರನೇ ರಾತ್ರಿ ನಾನು ಸರಕಾರಕ್ಕೆ ಬೇರೆ ಬೇರೆ ಸ್ಥಳಗಳಿಗೆ ಸಹಾಯಕ್ಕಾಗಿ ಪತ್ರ ಕಳುಹಿಸಿದ್ದೆ. (ನನ್ನ ಪತ್ರದ ನಕಲುಗಳನ್ನು ಲಗತ್ತಿಸಿದೆ. ನಂ. ೫) ಅಜಾಗರೂಕತೆಯಿಂದ, ನನ್ನ ಹಿಂದಿನ ಪತ್ರಗಳೇನಾದರೂ ಬಂಡಾಯಗಾರರ ಕಾವಲುಗಾರರ ಕೈಗೆ ಸಿಕ್ಕಿಕೊಂಡಿರಬಹುದೇ? ಯಾವ ದಿಕ್ಕಿಗೆ ನನ್ನ ಸಂದೇಶ ತಲುಪಬಹುದು ಎನ್ನುವ ಊಹನೆಯಿಂದ, ಉತ್ತರ ದಿಕ್ಕಿನ ಧಾರವಾಡದ ಮುಖ್ಯ ಕಲೆಕ್ಟರಿಗೆ ೫೦೦ ಜನರನ್ನು ಕಳುಹಿಸುವಂತೆ ಮನವಿ ಮಾಡಿದ್ದೆ. (ನನ್ನ ಪತ್ರದ ನಕಲು ನಂಬ್ರ ೬ ಲಗತ್ತಿಸಿದ್ದೇನೆ.) ಈ

ಸಮಯದಲ್ಲಿ ಕಾಸರಗೋಡು ಮತ್ತು ಬಂಟ್ವಾಳ ಸಂಪೂರ್ಣ ಬಂಡಾಯಗಾರರ ಕೈವಶವಾಗಿತ್ತು. ಅವರು ಎರಡು ದಿಕ್ಕುಗಳಿಂದ ಮಂಗಳೂರಿನ ಕಡೆ ಧಾವಿಸುತ್ತಿದ್ದಾರೆ ಎಂಬ ವಿಚಾರವು ಮುಂಬೈ ಕಡೆ ಸಹಾಯಕ್ಕಾಗಿ ಕೇಳಿಕೊಳ್ಳಲು ಕಳುಹಿಸಿದವರಿಂದ ತಿಳಿದುಬಂತು.

**ಸ್ಥಾಪಿತ ಸರಕಾರದಂತೆ ನಡೆದುಕೊಂಡರು:** ಎರಡು ಕಡೆಯಿಂದ ಬರುತ್ತಿರುವವರ ಸಂಖ್ಯೆಯನ್ನು ನಿರ್ಧರಿಸಲು ಮೊದಲು ಪುತ್ತೂರಲ್ಲಿ ಕಾಣಿಸಿದ್ದುದರ ಹೊರತಾಗಿ ನಮಗೆ ಬೇರೆ ಮಾಹಿತಿ ಇರಲಿಲ್ಲ. ದೇಶದ ಪರಿಸ್ಥಿತಿಯಲ್ಲಿ ಮೂಡಿದ ಅಭಿಪ್ರಾಯಗಳನ್ನು ನಾವು ಸಂಗ್ರಹಿಸಿದ ಪ್ರಕಾರ- ಕೆಳಕೊಡಗು ಮತ್ತು ಕೆನರಾ ಜಿಲ್ಲೆಯ ದಕ್ಷಿಣದಲ್ಲಿ ಕೆಲವು ಅಪವಾದಗಳನ್ನು ಹೊರತುಪಡಿಸಿದರೆ, ಮಂಗಳೂರಿನಿಂದ ಬಿಸ್ಲೆಯವರೆಗೆ ನೇರವಾದ ರೇಖೆಯೊಳಗಿನಲ್ಲಿರುವ ಜನರೆಲ್ಲ ಶಸ್ತ್ರಧಾರಿಗಳಾಗಿ ಸರಕಾರಕ್ಕೆ ಎದುರಾಗಿದ್ದಾರೆ. ಎಲ್ಲಾ ರಸ್ತೆಗಳೂ ಮುಚ್ಚಲ್ಪಟ್ಟ ಕಾರಣ ಖಚಿತವಾಗಿ ಮಾಹಿತಿ ಸಂಗ್ರಹಿಸಲು ಸಾಧ್ಯವಾಗದಿದ್ದರೂ ಕೂಡ, ಇಂತಹ ಪರಿಸ್ಥಿತಿಯಲ್ಲಿ ಏನೇ ಕ್ರಮ ತೆಗೆದುಕೊಳ್ಳುವುದು ಅಪಾಯಕಾರಿ ಎನ್ನುವ ಅಭಿಪ್ರಾಯವೇ ಸಿಗುವಂತಾಗಿತ್ತು. ಸುಮಾರು ಇದೇ ಸಮಯ ಕ್ಯಾಪ್ಟನ್ ಲಿ ಹಾರ್ಡಿ ಕೊಡಗರ ದೊಡ್ಡ ಸೇನೆಯೊಂದಿಗೆ ಮೇಲ್ ಕೊಡಗಿನಿಂದ ಕೆನರಾವನ್ನು ರಕ್ಷಿಸಲು ಬರಲಿದ್ದನು. ಆದರೆ ಕರ್ನಲ್ ಕಬ್ಬನ್ ಆಜ್ಞೆ ಮೇರೆಗೆ ಇದು ಕಾರ್ಯಗತವಾಗದೇ ಉಳಿಯಿತು. ಚೀಫ್ ಸೆಕ್ರೆಟರಿಯವರಿಗೆ ಕರ್ನಲ್ ಕಬ್ಬನ್ ಬರೆದ ತಾರೀಕು ೧೧ನೇ ಎಪ್ರಿಲ್‌ನ (ಈ ಸಂದರ್ಭದಲ್ಲಿ ಬೇರೆ ವಿಷಯಗಳೊಂದಿಗೆ ಜೋಡಿಸಲ್ಪಟ್ಟಿದೆ) ಈ ಪತ್ರವನ್ನು ಕಮೀಷನರ ಮುಂದೆ ಇರಿಸಲಾಗಿದೆ.

ಪುತ್ತೂರಿನಿಂದ ತಾರೀಕು ೨ರಂದು ರಾತ್ರಿ ನಮ್ಮ ತುಕುಡಿಯು ಹೊರಟು ಬಂದಲ್ಲಿಂದ ೬ನೇ ತಾರೀಕು ಅಂದರೆ ಇಂದಿನತನಕ ಒಂದರ ನಂತರ ಇನ್ನೊಂದರಂತೆ ತ್ವರಿತಗತಿಯಲ್ಲಿ ಘಟನೆಗಳು ನಡೆಯುತ್ತಿದ್ದುವು. ಇದರಿಂದಾಗಿ ತರ್ಕಿಸುವುದಕ್ಕೆ ಸಮಯವೇ ಇಲ್ಲದಾಗಿತ್ತು. ಮೂರೇ ದಿನಗಳಲ್ಲಿ ಊರೆಲ್ಲ ಶಸ್ತ್ರಧಾರಿಗಳಾಗಿ, ಬಲಶಾಲಿಗಳಾದ ಶತ್ರುಗಳು ಬಾಗಿಲಿಗೆ ತಲುಪಿಯಾಗಿತ್ತು. ಅವರ ಅಸ್ತಿತ್ವವಾಗಲೀ, ಹುಟ್ಟಾಗಲಿ ನಮಗೆ ತಿಳಿದೇ ಇರಲಿಲ್ಲ. ಹಿಂದೆ ಯಾವುದೇ ಪುಕಾರುಗಳು ಇದ್ದಿರಲಿಲ್ಲ. ನಮಗೆ ತಿಳಿದಿದ್ದಂತೆ ಯಾವುದೊಂದು ಕಾರಣ ಕೂಡಾ ಇದ್ದಿರಲಿಲ್ಲ. ಇತ್ತೀಚಿನ ಮಾಹಿತಿಗಳಿಂದಲೂ ಇದು ಖಚಿತವಾಗಿದೆ. ನಮ್ಮ ಮುಂದೆ ಆಗ ಇದ್ದದ್ದು ಕೇವಲ ತಾತ್ಕಾಲಿಕ ಮತ್ತು ಸ್ಥಳೀಯ ಬಂಡಾಯಗಾರರು ಮಾತ್ರ. ನಮ್ಮ ಸುತ್ತಲಿನ ಜನರ ಮನೋಭಾವವೂ ಎಲ್ಲರಿಗೂ ತಿಳಿದದ್ದೇ ಆಗಿದೆ. ಅವರಿಂದ ಏನನ್ನು ನಿರೀಕ್ಷಿಸಬಹುದಿತ್ತು ಎಂಬುದನ್ನು ಕಮೀಷನರ ಮುಂದೆ ಹಾಜರುಪಡಿಸಿದ ಪತ್ರಗಳಿಂದ ಸಾಬೀತಾಗುತ್ತದೆ. ಬಂಡಾಯಗಾರರು ಎತ್ತಿಕೊಂಡ ಕಾರ್ಯಕ್ರಮ ಸಾಧಾರಣ ಗೊಂದಲದಿಂದಾಗಿ

ಉಂಟಾಗುವುದನ್ನು ಹೋಲುತ್ತಿರಲಿಲ್ಲ. ಅವರಿಗಿಂತಲೂ ಬಲಶಾಲಿಯಾದ ಶತ್ರುವನ್ನೆತ್ತೆಸೆಯಲು ಹೊರಟಿದ್ದೇವೆ ಎಂಬ ತಿಳುವಳಿಕೆ ಇದ್ದರೂ ಕೂಡಾ ತಮ್ಮದೊಂದು ಸ್ಥಾಪಿತ ಸರಕಾರ ಎಂಬಂತೆ ಕ್ರಮವತ್ತಾಗಿ ನಡೆದು ಕೊಂಡಿದ್ದರು.

೧೮೩೭ ಎಪ್ರಿಲ್ ೫ - **ಹಡಗು ಹತ್ತುವ ನಿರ್ಧಾರ ಸಾಧ್ಯವಾಗಲಿಲ್ಲ :** ಈ ತುರ್ತು ಪರಿಸ್ಥಿತಿಯಲ್ಲಿ ಅವಶ್ಯವೆನ್ನಿಸಿದ ಪ್ರಥಮ ಕಾರ್ಯ ಯುರೋಪ್ ಕುಟುಂಬಸ್ಥರನ್ನು ದೋಣಿಯಲ್ಲಿರಿಸಿ ಅಪಾಯವಿಲ್ಲದ ಜಾಗಕ್ಕೆ ಕಳುಹಿಸುವುದು. ಇದಕ್ಕಾಗಿ ತೆಗೆದುಕೊಂಡ ತೊಂದರೆ, ಪಟ್ಟ ಪಾಡು, ಅನುಭವಿಸಿದ ನೋವು ಇಲ್ಲಿ ಹೇಳುವ ಅಗತ್ಯವಿಲ್ಲ. ಆದರೂ ಅವತ್ತು ಅವರಿಗೆ ಉಂಟಾದ ಪರಿಸ್ಥಿತಿಯಲ್ಲಿ, ಅಂದಿನಿಂದ ನಾನು ವಾಸವಿಲ್ಲದಿರುವ ಈ ಪಟ್ಟಣ ಆಗ ಹೇಗೆ ಇತ್ತು ಎನ್ನುವುದಕ್ಕೆ ಸಾಕ್ಷಿಯಾಗಿದೆ.

ಸಾರ್ವಜನಿಕ ಸೇವೆಯ ಪೂರ್ಣ ಹಿಂತೆಗೆತ ಮತ್ತು ರೂಢಿಸಿಕೊಂಡಿರುವ ಸೌಕರ್ಯಗಳ ಕೊರತೆಗಳಿಂದಾಗಿ ಮತ್ತು ಪರಿಹಾರವನ್ನು ಆರಿಸಿಕೊಳ್ಳಲು ಇದ್ದಂತಹ ಸಮಯದ ಅಭಾವ, ಪರಿಸ್ಥಿತಿಯ ಒತ್ತಡದಿಂದಾಗಿ ತಡಮಾಡದೆ ಆ ಸ್ಥಿತಿಯಲ್ಲಿ ಅತ್ಯಂತ ಸೂಕ್ತ ಕ್ರಮ ನಿರ್ಧರಿಸಲು ಪ್ರೇರೇಪಿಸಿತು. ನಮ್ಮ ಆಗಿನ ಪರಿಸ್ಥಿತಿಯಲ್ಲಿ ಬಹುಪಾಲು ಸಿಪಾಯಿಗಳು ದೈಹಿಕವಾಗಿ ದಣಿಯುವಿಕೆಯಿಂದ ಇದ್ದದ್ದು ಮಾತ್ರವಲ್ಲದೆ ಇನ್ನು ಹೆಚ್ಚಿನ ಶ್ರಮಪಡಲು ಅವರಿಗೆ ಸಾಧ್ಯವಿರಲಿಲ್ಲ. ಆದ್ದರಿಂದ ಹೋರಾಟಕ್ಕೆ ಹೊರಟರೆ ಮರಣಾಂತಿಕವಾಗುತ್ತಿತ್ತು ಎನ್ನುವುದು ನಿಶ್ಚಿತವಾಗಿತ್ತು. ಹೋರಾಟಕ್ಕೆ ಇಳಿಯುವುದರಿಂದ ಏನಾಗುವುದೆಂಬುದನ್ನು ಯೋಚಿಸುವ ಆವಶ್ಯಕತೆ ಇತ್ತು. ಸೈನಿಕರ ಕುಟುಂಬವು ವಾಸವಿದ್ದ ಕಡೆ ಆಕ್ರಮಣವಾಗಬಹುದಾದರೆ ಅದರ ಪರಿಣಾಮವನ್ನು ತಡೆಗಟ್ಟಲು ಅವಶ್ಯವಾಗಿ ಬೇಕಾದಷ್ಟು ಸೈನ್ಯ ಕೂಡಾ ಇರಲಿಲ್ಲ.

ಇಂತಹ ಪರಿಸ್ಥಿತಿಯಲ್ಲಿ ೪ನೇ ತಾರೀಕು ಮಧ್ಯಾಹ್ನದ ನಂತರ ಯುರೋಪಿಯನ್ ನಾಗರಿಕರ ಸಭೆ ಸೇರಿತ್ತು ಮತ್ತು ಮಂಗಳೂರನ್ನು ಬಿಟ್ಟು ಹೋಗುವುದಾಗಿಯೂ ಸರಕಾರದ ಖಜಾನೆಯನ್ನು, ಸಿಪಾಯಿಗಳ ಸಂಸಾರವನ್ನು ತಮ್ಮೊಂದಿಗೆ ಒಯ್ಯುವುದಾಗಿಯೂ ತೀರ್ಮಾನಿಸಿತ್ತು. ತೀರ್ಮಾನ ಒಳ್ಳೆಯದೋ, ಕೆಟ್ಟದ್ದೋ, ಬಹಳ ಕಷ್ಟಕ್ಕೆ ತಂದಿಟ್ಟಿತು ಮತ್ತು ನಂತರ ಆ ತೀರ್ಮಾನವನ್ನು ಕೈ ಬಿಡಲಾಯಿತು. ಆವತ್ತು ರಾತ್ರಿ ಸಮಯ ಸಿಪಾಯಿಗಳು ಶಸ್ತ್ರ ಹಿಡಿದು ಕಾಯುತ್ತಾ ಹೋರಾಟವನ್ನು ಎದುರಿಸಬೇಕಾಯಿತು. ನಂತರದ ದಿನವೂ ಇದೇ ಸ್ಥಿತಿ ಮುಂದುವರಿಯಿತು.

೧೮೩೭ ಎಪ್ರಿಲ್ ೬ - **ಕಣ್ಣಾನ್ನೂರಿಗೆ ಪಲಾಯನ:** ಈ ಹೋರಾಟಗಳ ನಡುವೆ, ಬೆಳಗ್ಗೆ ೮ ಗಂಟೆಗೆ ರಾಮೌಂಟ್ ತಲುಪಿತ್ತು ಮತ್ತು ೨ ಸಿಕ್ಸ್ ಪೌಂಡರ್‌ಗಳನ್ನು ಇಳಿಸಿ

ಪಥಚಲನದಲ್ಲಿ ಇರಿಸಲಾಯ್ತು. ಕೆಲವು ಕುಟುಂಬಗಳನ್ನು ಕಣ್ಣನ್ನೂರಿಗೆ ಕಳುಹಿಸುತ್ತಿರುವಾಗ ಪಟ್ಟಣದ ಜನರಿಂದ ನದಿ ಕಿನಾರೆಯಲ್ಲಿ ಅಡಚಣೆಯುಂಟಾಯಿತು. ಕೋವಿಗಳಿಂದ ಸಿಕ್ಕಿದ ಪ್ರಯೋಜನವು ಬೆಲೆಯುಳ್ಳದ್ದಾಗಿ ಕಾಣಿಸಿತ್ತು. ಆದರೆ ಸೈನ್ಯ ವಿಭಾಗಕ್ಕೆ ಸಂಬಂಧಿಸಿದ ವಿಚಾರದಲ್ಲಿ ಏನಾಯಿತು ಎಂಬುದನ್ನು ನಾನು ಹೇಳುವ ಅಗತ್ಯವಿದೆ. ಆ ದಿವಸ ಮತ್ತು ೭ನೇ ತಾರೀಕಿನಂದು ಮಂಗಳೂರಿನಲ್ಲಿ ಹೋರಾಟ ನಡೆಯಿತು. ಆದ ಕಾರಣ ಜನರು ನಗರವನ್ನು ತೊರೆದರು. ಅದೇ ತಿಂಗಳ ೧೧ನೇ ತಾರೀಖಿಗೆ ನಿಗದಿತವಾಗಿದ್ದ ಮೂರನೇ ಹೋರಾಟವೂ ಅದಕ್ಕೆ ಕಾರಣವಾಗಿರಲೂಬಹುದು.

ಲೆ. ಬ್ಲೇಕ್‌ನ ಎರಡನೇ ರೆಜಿಮೆಂಟ್ ಹೊನ್ನಾವರದಿಂದ ೬೦ ಸೈನಿಕರೊಂದಿಗೆ ೬ನೇ ತಾರೀಕು ಮಧ್ಯಾಹ್ನದ ನಂತರ ಬಂದು ಸೇರಿತ್ತು. ಅದೇ ಸಮಯ ಗುಂಡುಮದ್ದು ತುಂಬಿದ ಒಂದು ದೋಣಿಯು ನದಿಯನ್ನು ಹೊಕ್ಕಿತು, ಆದರೆ ನಂತರ ಅದು ನಮ್ಮನ್ನು ತಲುಪಲಿಲ್ಲ. ಸಂಬಂಧ ಪಟ್ಟ ಸ್ಥಳೀಯ ಅಧಿಕಾರಿ ತಪ್ಪು ಮಾಹಿತಿ ನೀಡಿದ ಕಾರಣ ಹಿಂತಿರುಗಿತ್ತೆಂದು ನಂತರ ತಿಳಿದು ಬಂದಿತು. ಮಂಗಳೂರಿನ ಸ್ಥಿತಿ ಹೇಗಿತ್ತೆಂದರೆ ಆನಂತರವೂ ಇದೇ ರೀತಿ ಇನ್ನೊಂದು ದೋಣಿಯನ್ನು ಹಿಂತಿರುಗಿಸಲು ಪಟ್ಟಣದ ಒಬ್ಬಾತ ಪ್ರಯತ್ನಿಸಿ ವಿಫಲನಾದನು. ಇಲ್ಲಿಯ ನಿವಾಸಿಗಳು ಬಂಡಾಯಗಾರರೊಡನೆ ಕಾರ್ಯಾಚರಣೆಯಲ್ಲಿ ಭಾಗಿಗಳಾಗಿದ್ದರು. ಅವರನ್ನು ಬರ ಮಾಡಿಕೊಳ್ಳಲು ಪತ್ರ ಕಳುಹಿಸಿದ್ದಲ್ಲದೆ, ಎದುರುಗೊಳ್ಳಲು ಮುಂದಾದರು. ಅಷ್ಟೂ ಅಲ್ಲದೆ ಅವರಿಗೆ ಬೇಕಾದ ಸರಬರಾಜುಗಳನ್ನು ಒದಗಿಸಿದರು. ತುಪಾಕಿಗಳಿಂದ ಹೇಗೆ ತಪ್ಪಿಸಿಕೊಳ್ಳಬೇಕೆಂದು ತಿಳಿಸಿಕೊಟ್ಟರು. ಮಂಗಳೂರಿನ ಒಳಗೂ ಹೊರಗೂ ದಾರಿಯನ್ನು ತೋರಿಸಿಕೊಡಲು ಅವರಿಗೆ ಮಾರ್ಗದರ್ಶಿಗಳನ್ನು ಕಳುಹಿಸಿಕೊಟ್ಟರು. ಇದೇ ಸಂದರ್ಭದಲ್ಲಿ ನಮ್ಮವರಿಗೆ ಮಾತ್ರ ಬೇಕಾಗುವ ಆಹಾರ ಸಂಗ್ರಹ ಕಷ್ಟ ಸಾಧ್ಯವಾಗಿ ಬಲಪ್ರಯೋಗದಿಂದ ತೆಗೆದುಕೊಳ್ಳುವಂತಾಯಿತು.

**ಕಾಸರಗೋಡು, ಕುಂಬ್ಳೆ, ಮಂಜೇಶ್ವರ ಕಾರ್ಯಾಚರಣೆ:** ಬಂಡಾಯಗಾರರು ೩೧ನೇ ಮಾರ್ಚ್‌ನಂದು ಬೆಳ್ಳಾರೆಯಿಂದ ಹೊರಟು ೨ನೇ ಎಪ್ರಿಲ್‌ನಂದು ಕಾಸರಗೋಡು ಸೇರಿದರು ಮತ್ತು ತಹಶೀಲ್ದಾರರ ಕಚೇರಿಯನ್ನು ವಶಪಡಿಸಿಕೊಂಡರು. ಖಜಾನೆ ಮತ್ತು ಸಾರ್ವಜನಿಕ ಕಟ್ಟಡಗಳನ್ನು ಸ್ವಾಧೀನಪಡಿಸಿಕೊಂಡು, ಅವರ ಕಡೆಯವರನ್ನು ತಹಶೀಲ್ದಾರ ಮತ್ತು ಇತರ ಅಧಿಕಾರಿಗಳನ್ನಾಗಿ ನೇಮಿಸಿದರು ಮತ್ತು ಕಂಪೆನಿಯ ನೌಕರರಿಗೆ ಸಂಬಳವನ್ನು ವಿತರಿಸಿದ್ದಲ್ಲದೆ, ಅವರಿಂದ ತಮಗೆ ವಿಧೇಯರಾಗಿ ತಮ್ಮ ಸರಕಾರದ ಕೈಕೆಳಗೆ ಸೇವೆ ಸಲ್ಲಿಸುವುದಾಗಿ ಮುಚ್ಚಳಿಕೆ ಪತ್ರ ಬರೆಸಿಕೊಂಡರು. ಈ ಕಾರ್ಯಾಚರಣೆಯ ಸಂದರ್ಭ ಮಂಗಳೂರಿನಿಂದ ಪುತ್ತೂರಿಗೆ ಸರಕಾರದ ಸೈನ್ಯ ಹೊರಟಿದೆ ಎನ್ನುವುದು ಪ್ರಾಯಶಃ ಅವರಿಗೆ ಗೊತ್ತಾಗುವ ಮೊದಲೇ ಇದು ನಡೆದಿದೆ. ಅದೇ ದಿನ

೨ನೇ ಎಪ್ರಿಲ್‌ನಂದು, ಬಂಡಾಯಗಾರರು ಕಾವಲು ಪಡೆಯುವರನ್ನು ದಕ್ಷಿಣದ ರಸ್ತೆಗಳಲ್ಲಿರಿಸಿದರು. ಟಪ್ಪಾಲು ಅವರ ಕೈವಶವಾದವು. ಮಂಗಳೂರು ಮೇಲಿನ ಆಕ್ರಮಣ ದುರ್ಬಲವಾಗಿದೆ ಎಂಬ ಭಾವನೆ ಮೂಡಿಸಿದುದರಲ್ಲಿ ಏನೂ ಅನುಮಾನ ಇಲ್ಲ ಮತ್ತು ಬಿಸ್ಲೆ ಹಾಗೂ ಕಣ್ಣನ್ನೂರು ಕಡೆಯಿಂದ ಟಪ್ಪಾಲು ಸಂಪರ್ಕ ನಿಂತು ಹೋಗಿರುವುದು ಮತ್ತು ನಮ್ಮ ಶಕ್ತಿ ಹೆಚ್ಚಿಸಿಕೊಳ್ಳಲು ನಿರ್ಬಂಧ ಒಡ್ಡಿರುವುದು ಇಷ್ಟೇ ಅಲ್ಲದೆ, ಇವರಿಗೆ ನಮ್ಮ ದುರ್ಬಲತೆ ಲೆಕ್ಕಾಚಾರ ಸರಿಯಾಗಿ ಸಿಕ್ಕಿ ಗೊತ್ತಾಗಿತ್ತು ಎನ್ನುವುದರಲ್ಲಿ ಯಾವುದೇ ಸಂಶಯ ಇರುವುದಿಲ್ಲ. ಆದರೆ ಬೆಳ್ಳಾರೆ ಪೇಟೆಯಿಂದ ಈ ಬಂಡಾಯಗಾರರು ಮಂಗಳೂರಿನ ದುರ್ಬಲತೆ ತಿಳಿದು ಆ ಕಾರಣಕ್ಕಾಗಿ ಇಲ್ಲಿಗೆ ಹೊರಟದ್ದಲ್ಲ. ಅವರ ಪ್ರಾಬಲ್ಯ ಮತ್ತು ಪ್ರಾರಬ್ಧ ಇವುಗಳು ಇಲ್ಲಿಗೆ ಅವರು ಮುಂದುವರಿಯುವಂತೆ ಹೊತ್ತು ತಂದಿತ್ತು.

ಕಾಸರಗೋಡಿನಲ್ಲಿ ಎಲ್ಲಾ ವ್ಯವಸ್ಥೆ ಮುಗಿಸಿದ ಮೇಲೆ ೩ರಂದು ಕುಂಬಳೆಗೆ ಮುನ್ನಡೆದರು ಮತ್ತು ಸರಕಾರಿ ಕಟ್ಟಡ ಮತ್ತು ಸ್ವತ್ತುಗಳನ್ನು ವಶಕ್ಕೆ ತೆಗೆದುಕೊಂಡರು. ಅವರಿಗೆ ಪುತ್ತೂರಿನಲ್ಲಿ ಅಥವಾ ಮಂಗಳೂರಿನಲ್ಲಿ ಏನು ನಡೆಯಿತ್ತೆಂದು ತಿಳಿದಿತ್ತೇ ಎಂಬುದೇ ಈ ಸಂದರ್ಭದಲ್ಲಿ ಗೊತ್ತಾಗಿಲ್ಲ. ೪ನೇ ತಾರೀಕಿನಂದು ಮಂಜೇಶ್ವರಕ್ಕೆ ಮುಂದುವರಿದರು. ಅಲ್ಲಿ ಸರಕಾರಿ ಉಗ್ರಾಣವನ್ನು ವಶಪಡಿಸಿಕೊಂಡರು. ಮತ್ತೆ ಮಂಗಳೂರು ಕಡೆ ಮುನ್ನುಗ್ಗಿ ನಿಗದಿತ ಸಮಯಕ್ಕೆ ಸರಿಯಾಗಿ ಅಲ್ಲಿಗೆ ತಲುಪಿದ್ದರು. ಇನ್ನೊಂದು ತಂಡ ಬಿಸ್ಲೆಯತ್ತ ಸಾಗಿತ್ತು.

**ಬಿಸ್ಲೆಯತ್ತ ಇನ್ನೊಂದು ತಂಡ:** ಕುಕ್ಕನ್ನೂರು ಚೆನ್ನಯ್ಯ ಬೆಳ್ಳಾರೆ ಪೇಟೆಯಲ್ಲಿ ಮಾರ್ಚ್ ೩೦ರಂದು ಏನು ನಡೆಯಿತು ಎನ್ನುವುದರ ಬಗ್ಗೆ ಹೀಗೆ ಹೇಳುತ್ತಾನೆ. ``ಖಜಾನೆಯನ್ನು ಎಲ್ಲಾದರೂ ಬಚ್ಚಿಡುವಂತೆಯೂ, ಅಗತ್ಯ ಬಂದಾಗ ಕೊಡುವಂತೆಯೂ ಗುಡ್ಡೆ ತಿಮ್ಮಣ್ಣನ ವಶಕ್ಕೆ ಒಪ್ಪಿಸಲಾಯಿತು. ಬೆಳ್ಳಾರೆಯ ಪೈಶ್ಕಾರ್‌ಗೆ ಸ್ವಲ್ಪ ಹಣ ಕೊಟ್ಟು ಅದನ್ನು ಆತನ ಸೇವಕರಿಗೆ ವಿತರಿಸುವಂತೆ ಹೇಳಲಾಯಿತು. ೫೦ ರೂಪಾಯಿ ಪೆರಾಜೆ ಊಕಣ್ಣ ರೈಗೆ ಮತ್ತು ೭೦ ರೂಪಾಯಿ ಮಣೆಯನ ಸುಬ್ರಾಯನಿಗೆ ಕೊಡಲಾಯ್ತು. ಮುಂಜಾನೆ ಮಾತುಕತೆ ನಡೆದು, ೩ ವಿಭಾಗಗಳಾಗಿ ಹೋಗಿ ಮಂಗಳೂರಿನಲ್ಲಿ ಧ್ವಜ ಏರಿಸುವುದಾಗಿ ನಿಶ್ಚಯಿಸಲಾಯಿತು. ೨೦೦ ಜನ ಸೈನ್ಯದೊಂದಿಗೆ ಕುಂಚಡ್ಕ ರಾಮು ಮತ್ತು ಕುಡೆಕಲ್ಲು ಪುಟ್ಟ ಮಂಜೇಶ್ವರ ಕಡೆಗೂ, ಮಣಿಯನ ಸುಬ್ರಾಯನ ನಾಯಕತ್ವದಲ್ಲಿ ನೆಟ್ಟಣಿಗೆ, ಮತ್ತು ಇನ್ನೊಂದು ಸೈನ್ಯ ಪುತ್ತೂರು ಬೆದ್ರಾಳದಿಂದ ಬಿಸ್ಲೆ ಘಾಟಿಗೆ ಅಪ್ಪಯ್ಯನ ನಾಯಕತ್ವದಲ್ಲಿ ಹೊರಟಿತು. ಪಾಣೆಮಂಗಳೂರು ನಿವಾಸಿ ಕೂಜುಗೋಡು ಮುಕ್ತೇಸರ ಅಪ್ಪಯ್ಯನಿಗೆ ಜನ ಸಂಗ್ರಹಿಸಿ ಗಡಿಯಲ್ಲಿ ಕಾವಲು ಇರಿಸುವಂತೆ ಅಪ್ಪಣೆ ಮಾಡಲಾಯಿತು. ಅನಂತರ ಸ್ವಾಮಿ ಮತ್ತು ಕೆದಂಬಾಡಿ ರಾಮಯ್ಯ ಸೈನ್ಯದೊಂದಿಗೆ ಪುತ್ತೂರಿಗೆ

ಮುಂದುವರಿದರು. ಅದೇ ಸಮಯದಲ್ಲಿ ಅಲ್ಲಿ ಟೆಂಟ್ ಕಾಣಿಸಿಕೊಂಡಿತು. ಕೂಲಿಗಳ ಸದ್ದು ಕೇಳಿಸಿತು. ಕಂಪೆನಿಯ ಸಿಪಾಯಿಗಳು ಬರುತ್ತಿರುವ ವಿಚಾರ ಗುಪ್ತಚಾರರಿಂದ ತಿಳಿಯಿತು. ಸ್ವಾಮಿಯ ಜನರು ಮುನ್ನೆಚ್ಚರಿಕೆ ತೆಗೆದುಕೊಂಡರು, ಹಾಗೂ ಸರ್ವೆ ಹೊಳೆಯ ತನಕ ಹಿನ್ನಡೆದರು. ಆದರೆ ಮತ್ತೆ ಪುತ್ತೂರಿಗೆ ಬಂದು ಟೆಂಟನ್ನು ಸುತ್ತುಗಟ್ಟಿದರು. ಆ ರಾತ್ರಿ ಸ್ವಾಮಿಯ ಜನಗಳತ್ತ ಸಿಪಾಯಿಗಳು ಮತ್ತು ಬ್ರಿಟಿಷರು ಗುಂಡು ಹಾರಿಸಿದರು. ಮತ್ತೆ ಮಂಗಳೂರು ಕಡೆ ಹಿಂದಿರುಗಿದರು."

ಮಂಗಳೂರು ಮತ್ತು ಕಾಸರಗೋಡಿನಲ್ಲಿ ಬಂಡಾಯಗಾರರು ಕಾರ್ಯಾಚರಣೆ ನಡೆಸುತ್ತಿದ್ದ ಸಮಯದಲ್ಲಿ ರಾಜ್ಯದ ಇನ್ನೊಂದು ತುದಿಯಲ್ಲಿ ಇಬ್ಬರು ಪ್ರಮುಖ ಬಂಡಾಯಗಾರರು ಅಪ್ಪಯ್ಯ ಗೌಡ ಮತ್ತು ಮಲ್ಲಪ್ಪ ಗೌಡ ಬಿಸ್ಲೆಯ ಮೂಲಕ ಮಡಿಕೇರಿಗೆ ಹೊರಟರು. ಈ ಸಂದರ್ಭದಲ್ಲಿ ಸರಕಾರಿ ಕಟ್ಟಡ ಮತ್ತು ಉಗ್ರಾಣ ವಶಪಡಿಸಿಕೊಂಡರು. ಟಪ್ಪಾಲು ಸಂಪರ್ಕ ಸ್ಥಗಿತಗೊಂಡಿತು. ಸರಕಾರಿ ಪತ್ರಗಳು ಬಂಡಾಯಗಾರರ ಕೈಸೇರಿತು. ದಾರಿಯುದ್ದಕ್ಕೂ ಬಂಡಾಯಗಾರರು ತಮ್ಮ ಅಧಿಕಾರಿಗಳನ್ನು ಸ್ಥಾಪಿಸಿದರು ಮತ್ತು ಸರಕಾರದ ವ್ಯವಸ್ಥೆಯಂತೆ ಅಪ್ಪಣೆ ಹೊರಡಿಸುತ್ತಾ ಕಂಪೆನಿಯ ಸೇವಕರ ಆಡಳಿತದಲ್ಲಿ ಇದ್ದ ರೀತಿಯಲ್ಲಿಯೇ ನಡೆಸುತ್ತಾ ತಮ್ಮ ಪೂರ್ಣಾಧಿಕಾರ ಸ್ಥಾಪಿಸಿದರು. ಈಗ ಇರುವಂತಹ ಸರಕಾರದ ಬದಲಿಗೆ ಹೊಸದಾಗಿ ಒಂದು ವಂಶವನ್ನು ಸ್ಥಾಪಿಸುವುದು ಪುಟ್ಟಬಸಪ್ಪನ ವಚನಬದ್ಧ ಉದ್ದೇಶವಾಗಿದ್ದು, ಮಂಗಳೂರು ಈ ಮಹತ್ಕಾರ್ಯಕ್ಕೆ ಪ್ರಥಮ ಗುರಿಯಾಯಿತು. ನನ್ನ ತರ್ಕಬದ್ಧ ನಿರ್ಣಯಕ್ಕೆ ಆಧಾರವಾಗಿ ತೋರಿಸಲು ಇದು ಅಗತ್ಯವಾಗಿದೆ.

**ದಿಕ್ಕು ತಪ್ಪಿಸಿದ ಜ್ಯೋತಿಷಿ:** ಇವುಗಳನ್ನು ಸಾಬೀತುಪಡಿಸುವುದಕ್ಕೆ ಖಚಿತ ನಿಲುವುಗಳು ಮತ್ತು ಪರಿಸ್ಥಿತಿಗಳು ನಿಸ್ಸಂದೇಹವಾಗಿ ಕಾಣಿಸಿಕೊಳ್ಳುತ್ತವೆ. ಇದಕ್ಕೆ ಒಂದು ಉದಾಹರಣೆ ಕುಕ್ಕನ್ನೂರು ಚೆನ್ನಯ್ಯನನ್ನು ದಿವಾನ್ ಬೋಪಣ್ಣ ಸೆರೆಹಿಡಿದು ಮಡಿಕೇರಿಗೆ ತಂದಾಗ ಕ್ಯಾ. ಲಿ ಹಾರ್ಡಿ ಕಳೆದ ಮೇ. ೧೫ರಂದು ಕೇಳಿದ ಪ್ರಶ್ನೆಗೆ ಸಿಕ್ಕಿದ ಉತ್ತರ.

"ನೀನು ಹೇಳಿದುದರಿಂದ ತಿಳಿದುಬರುವುದೇನೆಂದರೆ ಪುಟ್ಟಬಸಪ್ಪನು ಅಪರಂಪಾರನ ಸಹೋದರನೆಂದು, ಕೊಡಗಿನ ಅರಸರ ಮಗನೆಂದು ತೋರಿಸಿಕೊಳ್ಳುತ್ತಾ ಬಂಡಾಯ ಎಬ್ಬಿಸಿದನು ಮತ್ತು ಆತನಿಗೆ ತನ್ನ ರಾಜ್ಯವನ್ನು ಮತ್ತೆ ಮರಳಿಪಡೆಯಬೇಕೆಂಬ ಇಚ್ಛೆಯನ್ನು ಹೊಂದಿದ್ದನು. ಹಾಗಿದ್ದ ಪಕ್ಷದಲ್ಲಿ, ಆತನಿಗೆ ಪ್ರಾಬಲ್ಯ ಇದ್ದ ಕೊಡಗು ರಾಜ್ಯದ ಕಡೆ ಅವನು ಯಾಕೆ ಮುಂದುವರಿಯಲಿಲ್ಲ? ಅಲ್ಲದೆ ಕೊಡಿಯಾಲದ ಕಡೆ ಯಾಕೆ ಹೋದ?"

"ಕೆದಂಬಾಡಿ ರಾಮಯ್ಯ ಗೌಡನು ಒಬ್ಬ ಮುದುಕ ಕೊಂಕಣಿ ಪಂಜದ ಮುಜತ್ತಾಯ ಎಂಬಾತನಲ್ಲಿ ಭವಿಷ್ಯದ ಗಣಿತ ಪ್ರಕಾರ ಸೈನ್ಯವನ್ನು ಎಲ್ಲಿಗೆ

ಜಯಪ್ರದವಾಗುವಂತೆ ಕೊಂಡೊಯ್ಯಬಹುದೆಂದು ಕೇಳಿದನು. ಅವರಿಗೆ ಸಿಕ್ಕಿದ ಗಣಿತ ಸ್ಥಿತಿಯಲ್ಲಿ ಅವರು ಮೊದಲು ಕೊಡಗಿನ ಕಡೆ ಹೋದರೆ ಜಯಗಳಿಸಲು ಸಾಧ್ಯವಾಗುವುದಿಲ್ಲ. ಆದರೆ ಅವರು ಮೊದಲು ಮಂಗಳೂರು ಕಡೆಗೆ ಹೋದರೆ ಹೆಚ್ಚಿನ ಬೆಂಬಲವನ್ನು ಗಳಿಸುವ ಅದೃಷ್ಟವನ್ನು ಹೊಂದುತ್ತಾರೆ. ಮತ್ತೆ ಕೊಡಗಿನ ಕಡೆ ಹೋಗಬಹುದು. ರಾಮಯ್ಯ ಗೌಡ ಅದೇ ಪ್ರಕಾರ ದೇರಾಜೆ ಬಚ್ಚ, ಗುಡ್ಡದ ಸುಬ್ಬಪ್ಪ, ಮಡ್ಡಿಯಾಲ ತಿಮ್ಮ, ಹೋಮಯ ತಿಮ್ಮ ಮೊದಲಾದವರೊಂದಿಗೆ ಸೈನ್ಯವನ್ನು ಮಂಗಳೂರು ಕಡೆಗೆ ಕೊಂಡೊಯ್ಯಲು ನನಗೆ ಹೇಳಿದ್ದರು."

ಕುಕ್ಕನ್ನೂರು ಚೆನ್ನಯ್ಯ ಹೇಳಿದಂತಹ ಪಂಜದ ಮುಜತ್ತಾಯ ಕೊಡಗಿನ ರಾಜವಂಶದ ಜ್ಯೋತಿಷಿಯಾಗಿದ್ದನು. ಬಂಡಾಯದ ಪ್ರಾರಂಭದಿಂದ ಕೊನೆಯ ತನಕ ಗ್ರಹಗತಿಗಳನ್ನು ವ್ಯಾಖ್ಯಾನಿಸಲು ಆತನನ್ನು ಪುಟ್ಟಬಸಪ್ಪನು ಸೇವೆಯಲ್ಲಿರಿಸಿಕೊಂಡಿದ್ದನು. ಬರ್ಮಯ್ಯ ಗೌಡ ಮತ್ತು ಇತರರು ಮಂಗಳೂರಿಗೆ ಬರುವಂತೆ ಪೂಮಾಲೆ ಕಾಡಿನಲ್ಲಿದ್ದ ಪುಟ್ಟಬಸಪ್ಪನಿಗೆ ಆಗ ಆಹ್ವಾನ ಪತ್ರ ಕಳುಹಿಸಿದ್ದರು. ಜ್ಯೋತಿಷ್ಯ ಸಲಹೆಯೂ, ಪತ್ರದಲ್ಲಿದ್ದ ಆಹ್ವಾನವೂ ಒಟ್ಟಾಗಿ ಅವರ ಮೇಲೆ ಪ್ರಭಾವ ಬೀರಿರಬಹುದು.

**ಅಪರಂಪಾರ - ಕಲ್ಯಾಣಪ್ಪ - ಪುಟ್ಟಬಸವ :** ಕಮೀಶನರ ಅಪೇಕ್ಷೆ ಏನೆಂಬುದನ್ನು ಅರ್ಥಮಾಡಿಕೊಂಡು ನಾನು ಹೇಳಬಹುದಾದ್ದನ್ನು ಆದಷ್ಟು ಬೇಗನೆ ಅವರ ಮುಂದಿಡಬೇಕಾಗಿದೆ. ನನ್ನ ಅಭಿಪ್ರಾಯದಂತೆ ಬಂಡಾಯದ ಮೂಲ ಏನೆಂಬುದಾಗಿ ನಾನು ಕೊಡುತ್ತಿರುವ ವಿಚಾರಗಳು ಈಗಾಗಲೇ ಕಮೀಶನರ ವಶದಲ್ಲಿ ಇರಲಾರದು ಎನ್ನುವ ಸಂಶಯ ನನಗಿಲ್ಲ.

ಇದರ ಮೂಲ ಅಲ್ಲಗಳೆಯುವಂತಿಲ್ಲ. ಆದರೆ ಇವೆರಡನ್ನೂ ಪೂರ್ಣವಾಗಿಯೂ ಒಪ್ಪಬಹುದಾದ ಯಾವುದೇ ಸಾಕ್ಷ್ಯಾಧಾರಗಳೂ ಇಲ್ಲ. ಅಪರಂಪಾರ ಮತ್ತು ಕಲ್ಯಾಣಪ್ಪ ಇವರ ಕಾರ್ಯಾಚರಣೆ ಸುಮಾರಾಗಿ ಬಂಡಾಯಗಾರರನ್ನು ತಲುಪುವಷ್ಟರೊಳಗೆ ಪುಟ್ಟಬಸಪ್ಪನ ನಾಯಕತ್ವಕ್ಕೆ ಅನುಯಾಯಿಗಳು ಪ್ರಧಾನ ಭೂಮಿಕೆಯಲ್ಲಿ ಕಾಣಿಸಿಕೊಂಡರು. ಈ ಜನರು ಕೂಡಲೇ ಪುಟ್ಟಬಸಪ್ಪನನ್ನು ಕೆನರಾಕ್ಕೆ ಪರಿಚಯಿಸಲು ತೊಡಗಿದ್ದರು. (ಶೇಷಗಿರಿ, ಮಾಲಿಂಗ ಮತ್ತು ಮಂಜಯ್ಯ ಮೇಲಿನ ಕೊಡಗಿನಲ್ಲಿ ಅಪರಂಪಾರನ ಅನುಯಾಯಿಗಳಾಗಿದ್ದರು)

ಅಪರಂಪಾರ ಮತ್ತು ಕಲ್ಯಾಣಪ್ಪ ಮೈಸೂರಿನಿಂದ ಪಾಯಸ್ ಘಾಟಿಗೆ (ಫಾಲ್ಘಾಟ್) ಸರಿದಿದ್ದರು. ಅವರು ಕೊಡಗಿನ ಮೂಲಕ ರಾಜ್ಯದೊಳಗೆ ದಾರಿಯಲ್ಲಿ ಒಳಸಂಚು ನಡೆಸಿದ್ದರು. ಅವರು ಜನರ ಮನಸ್ಸನ್ನು ಉದಾರವಾದ ಭರವಸೆಗಳಿಂದ ಆಕರ್ಷಿಸಿದ್ದರು. ಅವರ ಖ್ಯಾತಿಯು ದೇಶದ ಉದ್ದಗಲಕ್ಕೂ ಹರಡಿತ್ತಲ್ಲದೆ ಅವರ ಸ್ವಭಾವ ಮತ್ತು ಪ್ರಭಾವ ಮಾನವತ್ವಕ್ಕೆ ಮೀರಿ ಸ್ಥಾಪಿಸಲ್ಪಟ್ಟಿತ್ತು.

ಕೆನರಾದ ಜನರು ಅಮಾಯಕರು ಹಾಗೂ ಪುರೋಹಿತಶಾಹಿಯಲ್ಲಿ ನಂಬಿಕೆ ಇಟ್ಟವರು. ಇವರ ನಡುವೆ ಅಪರಂಪಾರನು ಯಾವತ್ತೂ ಅಪಾಯಕಾರಿ ವ್ಯಕ್ತಿಯಾಗಿದ್ದನು. ಶ್ರದ್ಧೆಯಿಂದ ಕೇಳುತ್ತಾ ಕುಳಿತುಕೊಳ್ಳುವ ಜನಸಮುದಾಯಕ್ಕೆ ಸ್ವಹಿತಾಸಕ್ತಿಗೆ ಬೇಕಾದಷ್ಟು ಭರವಸೆಗಳನ್ನಿತ್ತು ಜನರನ್ನು ಶೀಘ್ರದಲ್ಲಿಯೇ ಆತನ ಪ್ರಚೋದನೆಗೆ ಒಲಿಯಲು ತಯಾರಾಗಿಸಿದ್ದೇನೆಂದು ತೋರಿಸಿ ಕೊಂಡಿದ್ದನು. ಆತನ ಸ್ವಭಾವಕ್ಕೆ ಸರಿಹೊಂದುವ, ಆತನೊಡನಿದ್ದು ಗಲಭೆ ಎಬ್ಬಿಸಬಲ್ಲ, ಅತೀ ದೊಡ್ಡ ಸಂಖ್ಯೆಯ ಜನರನ್ನು ಆಕರ್ಷಿಸಬಲ್ಲವನಾಗಿದ್ದನು.

ಕೆನರಾದ ಪ್ರಮುಖ ವ್ಯಕ್ತಿಗಳಿಂದ ಏನು ಸಹಕಾರದ ಭರವಸೆಗಳನ್ನು ಪುಟ್ಟಬಸಪ್ಪ ಪಡೆದಿದ್ದ ಎನ್ನುವುದು ಖಚಿತವಾಗಿಲ್ಲ. ಆತನು ಕೆಲಸ ಪ್ರಾರಂಭಿಸಿದಾಗ, ಇಡೀ ಜಿಲ್ಲೆ ಆತನ ಪರವಾಗಿ ನಿಲ್ಲುವುದು. ಅದೇ ರೀತಿ ಜಿಲ್ಲೆಯ ನೆರೆಕರೆಯವರೂ ನಡಕೊಳ್ಳುವರೆಂಬ ನಿರೀಕ್ಷೆ ಇತ್ತು. ಸಾಮಾನ್ಯ ನಂಬಿಕೆಯಂತೆ, ಆಗ ಮತ್ತು ಈಗಲೂ ಕೂಡಾ, ವಿಚಾರಣೆಯಲ್ಲಿ ತಿಳಿದುಬಂದ ಪ್ರಕಾರ, ಜನರ ನಡುವೆ ತನ್ನ ಅನುಯಾಯಿಗಳನ್ನು ಸಂಗ್ರಹಿಸುವ ಸಾಧ್ಯತೆ ಇದ್ದಿತು ಎನ್ನುವುದನ್ನು ಅಲ್ಲಗಳೆಯುವಂತಿಲ್ಲ.

**ಒಬ್ಬನೇ ಒಬ್ಬ ನಮ್ಮ ಪರ ಇರಲಿಲ್ಲ:** ಆದರೆ ಪುಟ್ಟಬಸಪ್ಪ ಸ್ಪಷ್ಟ ಮೈತ್ರಿಗಳಿಂದ ಸರಿಯಾದ ದಾರಿತಯಾರು ಮಾಡಿಕೊಂಡಿರಲಿಲ್ಲ. ಕೆನರಾದ ಜಿಲ್ಲೆಯಲ್ಲಿ ಒಬ್ಬ ಸ್ನೇಹಿತ ಮತ್ತು ಹಿತೈಷಿ ಎಂಬಂತೆ ಜಿಲ್ಲೆಯನ್ನು ಪ್ರವೇಶಿಸಿದ್ದನು. ಬರಬೇಕಾದ ಕಾಲದಲ್ಲಿ ಬಂದಾಗ ಆತನಿಗೆ ಸ್ವಾಗತ ಖಚಿತವಾಗಿತ್ತು. ಆತನ ಕಾರ್ಯ ಜನತೆಯನ್ನು ತನ್ನ ಪರವಾಗಿಸಿಕೊಳ್ಳುವುದಾಗಿತ್ತು. ಆತ ಜನರ ಪಾಲಕನಾಗಿದ್ದದ್ದು ಬರಿ ಬಾಯಿಮಾತಿನಲ್ಲಿ ಮಾತ್ರ ಅಲ್ಲ. ಆದರೆ ಕೆಲವೊಂದು ಕಾರಣಕ್ಕಾಗಿ ಆತನಿಗೆ ಜನ ನೈಜವಾಗಿ ಭಯಪಡುವಂತಿತ್ತು. ಕೆನರಾದಲ್ಲಿ ಯಾರೊಬ್ಬನೂ ಆತನೆದುರು ಕೈಯೆತ್ತಲಿಲ್ಲ. ಸಾವಿರಾರು ಜನ ಆತನ ಸುತ್ತು ಸೇರಿಕೊಂಡರು. ಒಬ್ಬನೇ ಒಬ್ಬ ವ್ಯಕ್ತಿ ಕೂಡಾ ಸರಕಾರದ ಪರ ನಿಂತು ಬೆಂಬಲಿಸಿದ ಯಾವುದೇ ಒಂದು ಉದಾಹರಣೆ ಸಿಕ್ಕುವುದಿಲ್ಲ.

ಒಂದು ಪ್ರಬಲವಾದ ಹೊಸ ರಾಜವಂಶದ ಸ್ಥಾಪನೆ ಆತನ ಗುರಿಯಾಗಿತ್ತು. ಇದರ ಮೊದಲ ಹೆಜ್ಜೆಯಾಗಿ ಇಂಗ್ಲೀಷರನ್ನು ನಿರ್ಮೂಲಗೊಳಿಸುವುದು. ಇದನ್ನು ಕಾರ್ಯಗತಗೊಳಿಸುವುದಕ್ಕೆ ಆತನ ಹಿಂದೆ ಬಹಳ ದೊಡ್ಡ ಬೆಂಬಲ ಇದೆ ಮತ್ತು ಆತನನ್ನು ಮುಂದಿನ ದಿನಗಳಲ್ಲಿ ಈ ದ್ವೀಪದ ಹೆಚ್ಚು ಭಾಗಕ್ಕೆ ನಾಯಕನಾಗಿ ಮಾಡಲಾಗುವುದೆಂದು ಹೇಳಲ್ಪಡುತ್ತಿತ್ತು. ಮಧುರೆ, ವೆಲ್ಲೂರು, ತಿರುಚಿನಾಪಳ್ಳಿ ಮತ್ತು ಮೈಸೂರು ಎಲ್ಲಾ ಈಗಾಗಲೇ ಸ್ವಾಧೀನವಾಗಿದೆ ಮತ್ತು ಆ ಕಾರಣದಿಂದ ಆ ರಾಜ್ಯಗಳ ಬೆಂಬಲ ಹೊಂದಿದ್ದನೆಂಬುದಾಗಿ ನಮಗೆ ತಿಳಿಸಲಾಗಿತ್ತು. ಆದುದರಿಂದ ಕೆನರಾವೂ ಆತನಿಗೆ ಸುರಕ್ಷಿತವೆನ್ನಿಸಿತ್ತು. ಆತನ ಉದಾರತೆ ಪ್ರಖ್ಯಾತವಾಗಿತ್ತು. ಆತ ಕೆನರಾದಲ್ಲಿ ಇದ್ದಾಗ ಇಲ್ಲಿಯ ಜನರಲ್ಲಿ ಈ ವಿಚಾರ ಹಬ್ಬಿಕೊಂಡಿತ್ತು.

ಪುಟ್ಟಬಸಪ್ಪನು ಕೆಳಕೊಡಗನ್ನು ಆರಿಸಿಕೊಂಡದ್ದು ಆತನ ಯೋಜನೆ ಫಲಪ್ರದವಾಗುವಂತೆ ಮಾಡಿತ್ತು. ಯಾಕೆಂದರೆ ಇದೊಂದು ಏಕಾಂತ ಪ್ರದೇಶವಾಗಿತ್ತು. ಇಲ್ಲಿ ಉತ್ತಮ ಪ್ರಾರಂಭವನ್ನು ಮಾಡಲು ಸಮರ್ಥರಾಗಿದ್ದ ಸಾಕಷ್ಟು ಜನರು ಇದ್ದರು. ಇಲ್ಲಿಯ ಜನರಲ್ಲಿ ನಿಜವಾದ ಮತ್ತು ಕಾಲ್ಪನಿಕ ಅಸಮಾಧಾನಕ್ಕೆ ಕಾರಣಗಳಿದ್ದವು. ಈಗಿನ ಸರಕಾರದಿಂದ ಬೇರ್ಪಡಬೇಕೆಂಬ ಆಸಕ್ತಿ ಅವರಲ್ಲಿ ಹುಟ್ಟಿಕೊಂಡಿತ್ತು. ಬಂಡಾಯದ ಪ್ರತಿನಿಧಿಗಳಾಗಲು ಅವರು ತಯಾರಿದ್ದರು. ಆತನಿಗೆ ಬೇರೆಲ್ಲಿಗಿಂತಲೂ ಇಲ್ಲಿ ಅಷ್ಟು ಬೇಗನೇ, ಸಮರ್ಥನೀಯವಾಗಿ ದಿಗಿಲುಗೊಳಿಸಲು ಬಲ್ಲವರು ಇತರ ಭಾಗಗಳಿಗಿಂತ ಹೆಚ್ಚಿನ ಆಸಕ್ತಿ, ಒಪ್ಪಿಗೆ ಹೊಂದಿದ್ದದ್ದು ಕೆನರಾ ಜಿಲ್ಲೆಯು ಒಪ್ಪಿಗೆಯಾಗಲು ಮುಖ್ಯ ಕಾರಣವೆಂದು ನನಗೆ ಅನ್ನಿಸುತ್ತದೆ.

**ರಾಜವಂಶ ಗಾಳಕ್ಕೆ ಸಿಕ್ಕಿಸಿದ ಆಕರ್ಷಕ ವಸ್ತು:** ಮೇಲೆ ಹೇಳಿದ ಕಾರಣವಲ್ಲದೆ, ಅದರ ಜತೆಗೆ ಮೇಲಿನ ಕೊಡಗಿನ ಸಹಕಾರದ ನಿರೀಕ್ಷೆಯೂ ಸೇರಿತ್ತು. ಯಾವ ಕಾರಣಕ್ಕೆ, ಯಾರಿಂದ ಮತ್ತು ಎಷ್ಟರ ಮಟ್ಟಿಗೆ ಇದು ಸಿಗಬಹುದೆಂದು ಆತ ಲೆಕ್ಕ ಹಾಕಿದ್ದ ಎನ್ನುವುದು ಸರಿಯಾಗಿ ಗೊತ್ತಾಗಿಲ್ಲ. ದಂಗೆಯ ಪ್ರಾರಂಭದಲ್ಲಿ, ಘಟ್ಟದ ಮೇಲೆ ಮತ್ತು ಕೆಳಗೆ ದೊಡ್ಡ ರೀತಿಯಲ್ಲಿ ಪಾಲಘಾಟಿನ ಒಂದು ಭಾಗದ ಕೊಡಗರನ್ನು ತೆಗೆದುಕೊಳ್ಳಬಹುದೆಂಬ ಮತ್ತು ನಾಲ್ಕುನಾಡು ನಿವಾಸಿಗಳು ಒಮ್ಮಿಂದೊಮ್ಮೆಗೆ ನಿಷ್ಠೆ ಬದಲಾಯಿಸಬಹುದೆಂಬ ಶಂಕೆ ಇದ್ದು, ಸರಕಾರ ಎಚ್ಚರಗೊಳ್ಳುವುದಕ್ಕೆ ಸಹಾಯಕವಾಯಿತು. ಇವರ ನಿಷ್ಠೆಯ ಬಗ್ಗೆ ಅನುಮಾನವೆಂಬುದು ಎಲ್ಲರಿಗೂ ತಿಳಿದ ವಿಚಾರವಾಗಿತ್ತು. ನೆರೆಯ ರಾಜ್ಯಗಳಲ್ಲೂ ಪರಿಸ್ಥಿತಿಯ ತಿರುವುಗಳನ್ನು ಇವರು ಎದುರು ನೋಡುತ್ತಿದ್ದರು ಎನ್ನುವುದರಲ್ಲಿ ಯಾವುದೇ ಸಂಶಯವಿಲ್ಲ.

ಪುಟ್ಟಬಸಪ್ಪ ಕೊಡಗಿನಿಂದ ಯಾವುದೇ ಸಹಾಯ ನಿರೀಕ್ಷಿಸಿದ್ದರೂ, ಅದು ಕಲ್ಯಾಣಪ್ಪ ಕಳೆದ ನವೆಂಬರ್ ಮತ್ತು ಡಿಸೆಂಬರ್‌ನಲ್ಲಿ ಭೇಟಿ ನೀಡಿದಾಗ ಆತನಿಗೆ ಸಿಕ್ಕಿದ ವಾಗ್ದಾನಗಳು. ಆಗ ಮೊದಲು ದಂಗೆ ಏಳುವುದೆಂದು ನಿಶ್ಚಯವಾಗಿತ್ತೆಂದು ನಂಬಲಾಗಿದೆ. ಕೊಡಗಿಗೆ ಕಲ್ಯಾಣಪ್ಪ ಬಂದಾಗ ಅದೇ ಸಮಯ ಅಪರಂಪಾರನ ಕಾರ್ಯಸ್ಥರಾಗಿದ್ದ, ಮಣೆಯನ ಸುಬ್ರಾಯ ಮತ್ತು ಮಣೆಯನ ರಂಗಪ್ಪ ಅವರ ಗ್ರಾಮವಾದ ಬೇಕಲ್‌ಗೆ ಹಿಂತಿರುಗಿದರು. ಕಲ್ಯಾಣಪ್ಪನ ಗುರಿ ಏನಿತ್ತೋ ಅದಕ್ಕಾಗಿಯೇ ಅವರು ದುಡಿದರೆಂದು ಕಂಡುಬರುತ್ತದೆ. ರಾಜವಂಶಕ್ಕೆ ಸೇರಿದವನೆಂಬ ಮನವರಿಕೆ ಎಷ್ಟರಮಟ್ಟಿಗೆ ಸ್ಥಾಪಿಸಲ್ಪಟ್ಟಿತ್ತೋ, ಅಷ್ಟು ಆತ ಯಶಸ್ವಿಯಾಗಿದ್ದನು. ಹಾಲೇರಿ ಸಂಸ್ಥಾನ ಎಂಬುದು ಸ್ಥಾಪಿತ ನಿಶಾನಿಯಾಗಿ ಭಾವಿಸಲ್ಪಟ್ಟಿತು. ಕೊಡಗರು ಈ ಹಳೆ ವಂಶದ ಸ್ಥಾಪನೆಯನ್ನು ಘೋಷಿಸಿದೊಡನೆ, ಅವರಲ್ಲಿ ಚಂಚಲ ಮನಸ್ಸಿನವರ ಮೇಲೆಯೂ ಪರಿಣಾಮ ಬೀರಿ, ಅಧಿಕಾರ ಚಲಾಯಿಸಬಹುದೆಂದು ಲೆಕ್ಕ ಹಾಕಲಾಗಿತ್ತು. ನೈಜ ಸ್ವರೂಪದಲ್ಲಿ ರಾಜವಂಶ

ಪುನಃಸ್ಥಾಪನೆಯ ಯಾವುದೇ ಚಿಂತನೆ ನಡೆದಿರಲಿಲ್ಲ. ಬದಲಾಗಿ ಇದೊಂದು ಅಭಿನಯಿಸಲ್ಪಡುತ್ತಿರುವ ಗಾಳಕ್ಕೆ ಸಿಕ್ಕಿಸುವ ಆಕರ್ಷಕ ವಸ್ತುವಾಗಿ ಉಪಯೋಗಿಸಲ್ಪಟ್ಟಿದೆ.

**ಲಕ್ಷ್ಮೀನಾರಾಯಣ ಮತ್ತು ರಾಮಪ್ಪಯ್ಯ ನಿರಪರಾಧಿಗಳು:** ನನ್ನ ಅಭಿಪ್ರಾಯದಲ್ಲಿ ದಂಗೆಯು ಅಪಕ್ವವಾಗಿ ಹುಟ್ಟಿಕೊಂಡಿತ್ತು. ಮೇಲಿನ ಕೊಡಗಿನ ಸಹಕಾರದ ಅಗತ್ಯ ಇತ್ತು. ಈ ಆತುರಕ್ಕೆ ತುದಿಯಡ್ಕ ರಾಮಪ್ಪನ ವಿದ್ರೋಹ ಕಾರಣವಾಗಿರಬಹುದು. ರಾಮಯ್ಯ ಗೌಡನ ಒಳಸಂಚನ್ನು ತಿಳಿದು ತನ್ನ ಅಣ್ಣನಾದ ಲಕ್ಷ್ಮೀನಾರಾಯಣನಿಗೆ ಆತ ಬರೆದು ಕಳುಹಿಸಿ ಗುಟ್ಟು ಬಯಲು ಮಾಡಿದನೆಂಬ ಸಂಶಯ. ಈ ಪತ್ರವನ್ನು ಕೊಂಡೊಯ್ದು ಅದಕ್ಕೆ ಉತ್ತರ ತಂದಾತನ ವಿಚಾರಣೆಯಲ್ಲಿ ಸಾಕಷ್ಟು ಆಧಾರ ಸಿಕ್ಕಿಲ್ಲವಾದರೂ, ಸಾಮಾನ್ಯವಾದ ಅಭಿಪ್ರಾಯದಂತೆ, ರಾಮಪ್ಪನ ನಡವಳಿಕೆ ಮತ್ತು ಕಂಪೆನಿ ಸರಕಾರವನ್ನು ಕಿತ್ತೆಸೆಯುವುದು ಅಸಾಧ್ಯವೆನ್ನುವ ಆತನ ಹೇಳಿಕೆಯು ಕಾರಣ, ದಂಗೆಯ ಸಲುವಾಗಿ ಆತನ ಸಹಕಾರ ನಿರೀಕ್ಷೆಗೆ ಅವಕಾಶವೇ ಇರಲಿಲ್ಲ. ಆತನ ಸಾವಿನ ಪ್ರೇರಣೆಯೇ ನೇರವಾದ ಸಾಕ್ಷ್ಯಾಧಾರವಾಗಿರುವಾಗ, ಆತನನ್ನು ಮತ್ತು ಆತನ ಸಹೋದರನನ್ನು ಬಂಡಾಯದಲ್ಲಿ ಸಿಲುಕಿಸುವುದು ತೀರಾ ಅಸಂಬದ್ಧ.

ಬಂಡಾಯ ಪ್ರಾರಂಭವಾದಾಗ, ಲಕ್ಷ್ಮೀನಾರಾಯಣ ಮಡಿಕೇರಿಯ ಸೆರೆಯಲ್ಲಿದ್ದನು. ಪುಟ್ಟಬಸಪ್ಪನ ಕಾರ್ಯಕ್ಕೆ ಆತನಿಂದ ಏನು ಸೇವೆ ಸಂದಿರಬಹುದೆಂದು ಊಹಿಸಲು ಸಾಧ್ಯವಿಲ್ಲ. ದಿವಾನ ಹುದ್ದೆಯಲ್ಲಿದ್ದ ಏಕಮಾತ್ರ ಬ್ರಾಹ್ಮಣ ಮತ್ತು ಆತನನ್ನು ಅಧಿಕಾರದಿಂದ ಇಳಿಸುವಂತೆ ಮಾಡಿದ ಸನ್ನಿವೇಶ, ಹಿಂದೆ ಇದ್ದದ್ದೇ ಅಲ್ಲದೆ ಇನ್ನಷ್ಟು ಹೆಚ್ಚಿನ ಪಾಲು ದ್ವೇಷ ಆತನ ಮೇಲೆ ಸೇರಿಕೊಂಡಿತ್ತು. ಕೊಡಗಿನ ಅವನತಿಗೆ ಆಸಕ್ತಿವಹಿಸಿದ್ದನೆಂಬ ಆಧಾರದಿಂದ ಗುರುತಿಸಲ್ಪಟ್ಟವನಾಗಿದ್ದನೆಂದು ರಾಮಯ್ಯ ಗೌಡ ಆತನನ್ನು ಆಪಾದಿಸುತ್ತಾನೆ. ಬೀರಣ್ಣ ಬಂಟ ಮತ್ತು ಇತರರು ಇನ್ನೂ ಹೆಚ್ಚು ಆಳವಾಗಿ ಇದನ್ನು ಪ್ರಸ್ತಾಪಿಸಿದ್ದಾರೆ. ನಾನು ಆತನನ್ನು ಒಳಸಂಚಿನಲ್ಲಿ ಸೇರಿಸುವ ಬದಲು, ಸಂಪೂರ್ಣವಾಗಿ ದೋಷಮುಕ್ತನೆಂದು ನಂಬುತ್ತೇನೆ.

ಕಾರ್ಯಾಚರಣೆಗೆ ಬಹಳ ಹಿಂದೆಯೇ ಪಿತೂರಿ ತಯಾರಿಸಲ್ಪಟ್ಟಿತು. ಇದರ ಕಾರ್ಯಕರ್ತರು ಕೊಡಗಿನಲ್ಲಿ ಬಹಳಷ್ಟು ಕೆಲಸ ಮಾಡಿದ್ದರು. ಇದು ಅಲ್ಲಿ ಸಾಮಾನ್ಯವಾಗಿ ಎಲ್ಲರಿಗೂ ತಿಳಿದಿತ್ತು, ಎನ್ನುವುದನ್ನು ನಂಬಲು ಸಾಕಷ್ಟು ಕಾರಣಗಳಿದ್ದವು. ಆದರೂ ಕೆನರಾದಂತೆ, ಅಲ್ಲಿಯ ಸ್ಥಳೀಯ ಸರಕಾರಕ್ಕೆ ಇದು ಗಮನಕ್ಕೆ ಬಂದಿರಲಿಲ್ಲ. ಜನಸಾಮಾನ್ಯರು ಮತ್ತು ಸರಕಾರಿ ನೌಕರರು ಒಮ್ಮತದ ಅಭಿಪ್ರಾಯದಿಂದ ಸೇರಿಕೊಂಡು, ಕೆಳಕೊಡಗಿನಲ್ಲಿ ಮಾತ್ರವಲ್ಲದೆ ಎರಡು ಕಡೆ ಸಾಕಷ್ಟು ಜನ ಬಹಳ ಕಾಲದಿಂದ ರಹಸ್ಯವಾಗಿ ಒಳಸಂಚು ಮಾಡಿಕೊಂಡು ಬಂದಿದ್ದರು. ಸುಭೇದಾರ ಮಾದಯ್ಯನ ಜನ

ಯಾವಾಗ ವಶವಾದರೆಂದು ನನಗೆ ಗೊತ್ತಿಲ್ಲ. ಆದರೆ ಅವರು ತಯಾರಾಗಿಯೇ ಬಂದಿದ್ದರು ಮತ್ತು ಅವರಲ್ಲಿದ್ದ ಮಾಹಿತಿ ಅವರಿಗೆ ಮಾತ್ರ ಸೀಮಿತವಾಗಿದ್ದುದ್ದಲ್ಲ ಮತ್ತು ಮೇಲಿನ ಕೊಡಗಿನವರ ಸಹಕಾರದ ಆವಶ್ಯಕತೆ ಬಂಡಾಯಗಾರರಿಗೆ ಇತ್ತು. ಇವನ ಬಂಧನ ಯಶಸ್ಸಿಗೆ ತೊಡಕಾಯಿತೆಂಬುದು ಸ್ಪಷ್ಟ. ಈ ಎಲ್ಲಾ ಕಾರಣಗಳಿಂದ ಲಕ್ಷ್ಮೀನಾರಾಯಣನೂ ಅವರೊಡನೆ ಕೂಡಿಕೊಳ್ಳುತ್ತಿದ್ದರೆ ಪರಿಸ್ಥಿತಿ ವಿನಾಶಕಾರಿಯಾಗಬಹುದಿತ್ತು.

**ನಿಜವಾದ ಅಪರಂಪಾರ ಆಗಿರುತ್ತಿದ್ದರೆ....?:** ಪುಟ್ಟಬಸಪ್ಪನಿಗೆ ಮೂರು ವಾರಗಳ ಕಾಲ ರಾಮಯ್ಯ ಗೌಡ ಪೂಮಾಲೆ ಅರಣ್ಯದೊಳಗೆ ಸಂರಕ್ಷಣೆ ನೀಡಿದ್ದನು. ಈತನ ವಾಸ್ತವ್ಯ ಅವನನ್ನು ಭೇಟಿ ಮಾಡಿ ಅನೇಕ ಜನರಿಗೆ ತಿಳಿದಿತ್ತು. ರಾಮಯ್ಯ ಗೌಡ ಅಮರ ಸುಳ್ಯದ ಪ್ರಮುಖ ರೈತನಾಗಿದ್ದು ಹೆಚ್ಚಿನ ಈ ಭಾಗದ ನಿವಾಸಿಗಳೊಡನೆ ನಿಕಟ ಸಂಬಂಧ ಹೊಂದಿದ್ದನು. ಅಲ್ಲದೆ ಹತ್ತಿರದ ಮಡಿಕೇರಿಯಲ್ಲಿಯೂ ಮನೆಗಳನ್ನು, ಜಮೀನುಗಳನ್ನು ಹೊಂದಿದ್ದನು.

ಈತನು ಬೆಳ್ಳಾರೆಯಲ್ಲಿದ್ದಾಗ, ಕೊಡಗಿನ ಕೆಲವು ನಾಡುಗಳೊಡನೆ ವ್ಯವಹಾರ ಸಂಪರ್ಕ ಏರ್ಪಟ್ಟಿತ್ತು. ಮುಂದಿನ ಕಾರ್ಯಕ್ರಮ ನಿಶ್ಚಯಗೊಂಡಿತ್ತು. ಫಲಿತಾಂಶ ಬೇಕಾದಷ್ಟು ತೃಪ್ತಿಕರವಾಗಿದ್ದು, ಪೂರ್ವನಿಯೋಜನೆ ಬಗ್ಗೆ ಧೈರ್ಯ ತಾಳುವುದು ಸಾಧ್ಯವಾಗಿತ್ತು. ಸೈನ್ಯವನ್ನು ಮೂರು ವಿಭಾಗಗಳಾಗಿ ತಯಾರು ಮಾಡಲಾಯಿತು. ಇವುಗಳ ಪೈಕಿ ಒಂದನ್ನು ಮಡಿಕೇರಿ ಕಡೆ ಕಳುಹಿಸಲಾಯಿತು. ಇದರಲ್ಲಿದ್ದ ಜನ ಅಸಮರ್ಥರಾಗಿದ್ದು ಏನನ್ನೂ ಸಾಧಿಸಲಾರದವರಾಗಿದ್ದರು. ಇವರು ಮೇಲ್ ಕೊಡಗಿನ ಹಳೆ ಮನೆತನದ ವಂಶಸ್ಥರಾಗಿದ್ದು ಅಪರಂಪಾರನ ಆಯ್ದ ಸ್ನೇಹಿತರಾಗಿದ್ದರು. ಆತನು ಮೊದಲ ಮಡಿಕೇರಿಗೆ ಭೇಟಿ ನೀಡಿದ ಬಳಿಕ ಸುಬ್ರಹ್ಮಣ್ಯದ ಇವರ ಮನೆಯಲ್ಲಿ ವಾಸವಿದ್ದನು. ಇವರು ಈತನ ಸ್ವಾಗತಕ್ಕೆ ತಯಾರಾಗಿದ್ದರು. ಒಂದಿಷ್ಟೂ ತಕರಾರಿಲ್ಲದೆ, ತಮಗೆ ಒಪ್ಪಿಸಲ್ಪಟ್ಟ ಕರ್ತವ್ಯವನ್ನು ವಹಿಸಿಕೊಂಡು ಕಾರ್ಯಗತ ಮಾಡಲು ಹೊರಟರು. ಈ ಸಲ ಅವರಿಗೆ ಪುಟ್ಟಬಸಪ್ಪ ನಿಜವಾದ ಅಪರಂಪಾರನಲ್ಲವೆಂಬುದು ತಿಳಿದಿತ್ತೇ ಎನ್ನುವುದು ಅನುಮಾನಾಸ್ಪದವಾಗಿದೆ (ಪ್ರಾಯಶಃ ಅವರು ಮತ್ತು ಇತರರು ಒಗ್ಗಟ್ಟಿನ ಕಾರ್ಯ ಮತ್ತು ಆವಶ್ಯಕತೆಗಾಗಿ ಮೋಸ ಹೋಗಿದಂತಿದ್ದಿರಬಹುದು), ಮತ್ತು ಇದರ ಸೋಲಿಗೆ ಇದೊಂದು ಅಂಶ ಕಾರಣವೆಂದು ಗುರುತಿಸಲಾಗಿದೆ. ಪುಟ್ಟಬಸಪ್ಪನೇ ನಿಜವಾದ ಅಪರಂಪಾರನಾಗಿದ್ದರೆ, ಕೊಡಗರು ಆತನೊಂದಿಗೆ ತಮ್ಮನ್ನು ತೊಡಗಿಸಿಕೊಳ್ಳುತ್ತಿದ್ದರು. ಅವರು ಹಾಗೆ ಮಾಡಿದ್ದರೆ, ಕೆನರಾದ ನೆರೆಯ ರಾಜ್ಯಗಳು ಕೂಡಾ ಅವರನ್ನು ಅನುಸರಿಸಿದ್ದಿರಬಹುದು. ಎಲ್ಲವೂ ಕೊಡಗನ್ನು ಅವಲಂಬಿಸಿತ್ತು. ಮಡಿಕೇರಿಯ ಒಳಗೂ ಹೊರಗೂ ಪ್ರತಿಯೊಬ್ಬರು ಬಹಳ ಕುತೂಹಲದಿಂದ ಅದು ಯಾವ ಪಾತ್ರವಹಿಸುವುದೆಂದು ನಿರೀಕ್ಷಿಸುತ್ತಿದ್ದರು.

**ಮಡಿಕೇರಿಯಲ್ಲಿ ವಿಫಲಗೊಂಡ ಅನುಭವ:** ಕೊಡಗಿನವರ ಸ್ವಾಮಿನಿಷ್ಠೆಯನ್ನು ಪ್ರಶ್ನಿಸಿ ವಿಮರ್ಶಿಸುವುದಾದರೆ, ನನಗೆ ಗೊತ್ತಿರುವಂತೆ ತಪ್ಪು ಇರಬಹುದು. ನನಗಿರುವ ಮೇಲ್ಮಟ್ಟದ ಉಪಲಬ್ಧತೆಗಳಿಂದ ನಾನು ತಪ್ಪಿಬೀಳುವ ಸಾಧ್ಯತೆ ಇದೆ. ಕೊಡಗಿನಲ್ಲಿ ವಾಸ ಇದ್ದವರಿಗೆ ನನಗಿಂತ ಹೆಚ್ಚು ಗೊತ್ತಿರಬಹುದು. ಆದ ಕಾರಣ ಬೇರೆಯವರು ತೆಗೆದುಕೊಂಡಿರುವ ಅಭಿಪ್ರಾಯಕ್ಕೆ ನನ್ನದು ಭಿನ್ನವಾಗಿರಬಹುದು. ವಿಚಾರ ಅಷ್ಟೊಂದು ತೃಪ್ತಿಪಡಿಸಿಕೊಳ್ಳಲು ಸಾಧ್ಯವಾಗದ ಕಾರಣ ನನ್ನ ಅಭಿಪ್ರಾಯ ಕೊಡುವುದನ್ನು ತಡೆಹಿಡಿದಿದ್ದೇನೆ.

ಡಿಸೆಂಬರ್‌ನಲ್ಲಿ ಕಲ್ಯಾಣಪ್ಪನ ಮಡಿಕೇರಿ ಭೇಟಿಯ ಸಂದರ್ಭದ ಪರಿಸ್ಥಿತಿಯ ಬಗ್ಗೆ, ನನಗೆ ಸರಿಯಾದ ತಿಳುವಳಿಕೆ ಇಲ್ಲ. ಹಾಗೆ ಅವನೊಡನೆ ಯಾರು ಇದ್ದರು, ಲಕ್ಷ್ಮೀನಾರಾಯಣನ ಅವನತಿ ಹೇಗೆ ಆಯಿತು ಗೊತ್ತಿಲ್ಲ. ಆದರೆ ಅಪರಂಪಾರ ಮತ್ತು ಕಲ್ಯಾಣಪ್ಪ ಇಬ್ಬರು ವ್ಯಕ್ತಿಗಳು ಬೇರೆಯಾಗಿದ್ದರೂ, ಅವರ ಅಭಿಪ್ರಾಯ ಒಂದೇ ಆಗಿತ್ತು ಎಂದು ನನಗನ್ನಿಸುತ್ತದೆ. ಅವರು ಒಂದು ಜಾಗದ ಗಮನಸೆಳೆದು ಕಾಣಿಸಿಕೊಂಡರೆ, ಮತ್ತೊಮ್ಮೆ ಇನ್ನೊಂದು ಕಡೆ ಅದು ಮಡಿಕೇರಿಯಲ್ಲಿ. ನಮಗೆ ಒಳಸಂಚು ಇದ್ದ ಬಗ್ಗೆ ಸರಿಯಾದ ಆಧಾರ ಎಲ್ಲಿಯೂ ಸಿಗದೆ ಇದ್ದರೂ, ಒಳಸಂಚು ಇದ್ದೀತು ಎನ್ನುವ ಬಗ್ಗೆ ಸಂಶಯವೇ ಇಲ್ಲ.

ಕಲ್ಯಾಣಪ್ಪನ ಎರಡನೇ ಭೇಟಿಗೆ ಬಂಡಾಯದ ಬೀಜ ಬಿತ್ತುವುದರ ಹೊರತಾಗಿ ಬೇರೆ ಏನು ಕಾರಣ ಇದ್ದಿರಬಹುದು ಎನ್ನುವುದು ಅರ್ಥವಾಗುತ್ತಿಲ್ಲ. ಇದರಂತೆಯೇ ಅವನು ಮತ್ತು ಅಪರಂಪಾರ ಇಬ್ಬರೂ ಕೂಡ ಅದೇ ಸ್ಥಳದಲ್ಲಿ ಯಾವುದೇ ಖಚಿತ ಭರವಸೆ ಕೊಡದೆ ತಮ್ಮ ಕಾರ್ಯಕ್ರಮವನ್ನು ನಡೆಸಲು ಆಯ್ದುಕೊಂಡರು. ಪುಟ್ಟಬಸಪ್ಪ ಅವರನ್ನು ಅನುಕರಿಸಲೂ ಇಲ್ಲ - ಪ್ರತ್ಯೇಕವಾದ ಕಾರ್ಯಕ್ರಮ ಅಥವಾ ತಿಳುವಳಿಕೆಯನ್ನು ಪ್ರತಿಪಾದಿಸಲೂ ಇಲ್ಲ. ಇತ್ತೀಚೆಗೆ ಮಡಿಕೇರಿಯಲ್ಲಿ ಇಂತಹ ಕಾರ್ಯಕ್ರಮ ವಿಫಲಗೊಂಡಿದ್ದು, ಅಲ್ಲಿ ಅನುಭವಿಸಿದ ಕಷ್ಟದಿಂದ ಗೊತ್ತಾಗಿರಬೇಕು. ಈ ಕಷ್ಟ ಸುಳ್ಯದಲ್ಲಿ ಆಗಲಿಲ್ಲ. ಮಡಿಕೇರಿಯಿಂದ ಸುಳ್ಯ ದೂರವಾಗಿದ್ದ ಕಾರಣ ಇರಬಹುದು. ಆದರೂ ಮೇಲ್ ಕೊಡಗಿನಿಂದ ಅವರಿಗೆ ಸಹಾಯದ ನಿರೀಕ್ಷೆ ಕಡಿಮೆಯಾಗಿರಲಿಲ್ಲ.

**ಮೂಡುಬಿದಿರೆ, ಕಾರ್ಕಳದವರ ಆಸಕ್ತಿ:** ಈ ವಾದವನ್ನು ಮುಂದುವರಿಸುವುದು ಅನಗತ್ಯವೆನ್ನಿಸುತ್ತದೆ. ಆದ ಕಾರಣ ಕೆನರಾದಲ್ಲಿ ನಡೆದುದರ ಬಗ್ಗೆ ಹೇಳುತ್ತೇನೆ. ಇದು ಇಲ್ಲಿಯ ಜನರ ವ್ಯಕ್ತಿತ್ವವನ್ನು ತೋರಿಸಲು ಪ್ರಯೋಜನಕಾರಿಯಾಗಿದೆ. ಸರಕಾರದ ಕುರಿತು ಅವರ ನಡವಳಿಕೆಗೆ ಪ್ರೇರಣೆಯ ವಿವರವನ್ನು ಹೊರಗೆಡವಬೇಕಾಗಿದೆ. ಅವರು ತೆಗೆದುಕೊಂಡ ನಿರ್ಧಾರ ಮತ್ತು ಇದಕ್ಕೆ ಸಾಧಾರಣವಾಗಿ ಕಾಣುವ ಕಾರಣದಿಂದಾಗಿ ಈಗ

ಇದು ಕೆನರಾವನ್ನು ಯಾವಾಗಲೂ ಚಿಮ್ಮಲು ತಯಾರಾದ ಗನಿಯಾಗಿ ಮಾಡಿದೆ. ಯಾವನಾದರೂ ಪ್ರಥಮ ಸಾಹಸಿ ಬೆಳಕು ಬೀರಿದರೆ ಸಾಕು.

ಅಸಮಾಧಾನವನ್ನು ತೆರೆದು ತೋರಿಸಿದ್ದರೂ, ಪ್ರಥಮ ಕಾಣಿಸಿಕೊಂಡಿದ್ದು ಮಂಗಳೂರಿನ ಉತ್ತರ ಭಾಗದಲ್ಲಿ. ಗಡಿಯಾಚೆ ಅಂತಹ ದೊಡ್ಡ ಪ್ರಮಾಣದ ಉದ್ರಿಕ್ತ ಪರಿಸ್ಥಿತಿ ಕಾಣಿಸಿಕೊಳ್ಳಲಿಲ್ಲ. ಆದರೆ ಮೂಡಬಿದಿರೆ ಮತ್ತು ಕಾರ್ಕಳ ಬಹಳ ಸಮಯದ ತನಕ, ಅತೀ ತವಕ ಮತ್ತು ಉದ್ವಿಗ್ನತೆಯಿಂದ ಕುದಿಯುತ್ತಿತ್ತು. ಅವರು ಯಾವುದೇ ಕ್ರಿಯಾತ್ಮಕ ಸಹಕಾರ ಕೊಡದಿದ್ದರೂ ಕೂಡಾ ಬಂಡಾಯಗಾರರನ್ನು ಸಂಧಿಸುವುದಕ್ಕಾಗಿ ಆಸಕ್ತಿಯಿಂದ ಕಿವಿಯರಳಿಸಿಕೊಂಡಿದ್ದರು. ಕೆನರಾದ ಕೆಳ ಉತ್ತರ ಭಾಗಗಳಲ್ಲಿ, ಯಾವ ಕಾಲಕ್ಕೂ ಇದನ್ನು ಒಪ್ಪುವವರಲ್ಲ. ಅದೂ ಕೂಡಾ ನಿಷ್ಕ್ರಿಯ ಶತ್ರುವನ್ನು! ಇಲ್ಲಿಯ ನಿವಾಸಿಗಳ ಪರಿಚಿತ ಸ್ವಭಾವವೇ ಹಾಗೆ. ಸರಕಾರದ ೧೨೪೦ರ ಫಸ್ಲಿಯಲ್ಲಿ ಅವರ ಮೇಲಿನ ಈ ನಂಬಿಕೆ ಬಗ್ಗೆ ಹೇಳಲು ಪ್ರಯೋಜನವಾಗಿದೆ. ಇವರು ಯಾವತ್ತೂ ಪರಿಸ್ಥಿತಿಯ ದುರುಪಯೋಗ ಮಾಡಿಕೊಳ್ಳಲಿಲ್ಲ.

ಸರಕಾರ ಈ ರೀತಿ ಪ್ರತಿರೋಧವನ್ನು ಎದುರಿಸುತ್ತಿದ್ದು, ಅಸಮಾಧಾನವನ್ನು ಬಿಟ್ಟು ಹೊರಗೆಡಹಿದ ಕಾರಣ ೧೨೪೦ ಫಸ್ಲಿಯಲ್ಲಿ ಕಠಿಣವಾದ ತೊಂದರೆ ಇರುವುದು ಕಂಡುಬಂದಿತ್ತು. ಪುನರಪಿ ಇಡೀ ಜಿಲ್ಲೆಯಲ್ಲಿ ಕೆಲಸ ಮಾಡಬೇಕಾಯಿತು. ಪ್ರಶ್ನಿಸಬೇಕಾದ ವಿಚಾರವೆಂದರೆ, ಅರಾಜಕತೆ ಮತ್ತು ಗಲಭೆಗಳಲ್ಲಿ ಬಲಿಪಶುಗಳಾಗಬಹುದೋ ಎಂಬ ದುರ್ಬಲ ವರ್ಗದ ನಿವಾಸಿಗಳಲ್ಲಿ ಉಂಟಾದ ಭಯವು ಸರಕಾರದ ಪರವಾಗಿ ಪರಿಣಾಮ ಬೀರಿತು.

**ಮುಲ್ಕಿ, ಪಣಂಬೂರು ಲೂಟಿ - ಸುಲಿಗೆ :** ಮೊದಲು ಸ್ವಲ್ಪ ಕಾಲ ನಿಜವಾದ ಅತೃಪ್ತಿ ಯಾವುದೂ ಇಲ್ಲದಿದ್ದರೂ ಅಸಮಾಧಾನದ ಸುಳಿವು ಪ್ರದರ್ಶಿಸಲ್ಪಟ್ಟಿತು. ಹೊನ್ನಾವರದ ಉತ್ತರದಲ್ಲಿ ಕಾನೂನು ವ್ಯವಸ್ಥೆಯನ್ನು ವಿಫಲಗೊಳಿಸುವುದು, ಮತ್ತು ಮುಲ್ಕಿ ಪಣಂಬೂರು ನಡುವೆ ಸ್ವಹಿತಾಸಕ್ತಿಯಿಂದ ಲೂಟಿ ಸುಲಿಗೆಗಳಾಗುವುದು ಅಲ್ಲಲ್ಲಿ ಕಾಣಿಸಿಕೊಂಡವು. ಆಪತ್ಕಾಲದಲ್ಲಿ ಹುಟ್ಟಿಕೊಳ್ಳುವ ಆಕಾಂಕ್ಷೆಗಳು, ಇಂತಹ ಸಂದರ್ಭದಲ್ಲಿ ಸರ್ವೇಸಾಧಾರಣವಾಗಿ ತತ್ಪರಿಣಾಮದಿಂದ ಕಾಣಿಸಿಕೊಳ್ಳುತ್ತವೆ.

ಇದರ ಅಗತ್ಯವನ್ನಾಗಲಿ, ಸಾಧ್ಯತೆಯನ್ನಾಗಲಿ ಯಾವತ್ತೂ ಚಿಂತಿಸುವ ಗೊಡವೆಗೆ ಹೋಗದೆ ಸುರಕ್ಷಿತವಾಗಿ ಸ್ವಸಾಮರ್ಥ್ಯದಿಂದ ಇವರನ್ನು ತಡೆಹಿಡಿಯುಬಹುದೆಂದು ಯೋಚಿಸಲಾಗುವುದಿಲ್ಲ. ಧಾರವಾಡದ ಮೆಜಿಸ್ಟ್ರೇಟರು ಕೇಳಿದೊಡನೆ ಕೆನರಾಕ್ಕೆ ಸೈನ್ಯ ಕಳುಹಿಸಿ ಪರಿಸ್ಥಿತಿಯನ್ನು ಹದ್ದುಬಸ್ತಿನಲ್ಲಿಡುವಂತೆ ಮಾಡದಿದ್ದರೆ ಇದು ಸೊಂದೆಯ ಬಾಲಘಾಟನ್ನು ಕೂಡಲೇ ತಲುಪುತ್ತಿತ್ತು.

ಬಂಡಾಯವನ್ನು ಸೇರಿದ ಇಲ್ಲಿನ ನಿವಾಸಿಗಳ ಪೈಕಿ ಒಂದಷ್ಟು ಜನರು ಕಂಪೆನಿ ಸರಕಾರ ಕೊನೆಗೊಳ್ಳುತ್ತಿದೆ ಎಂದು ನಂಬಿದ್ದರು, ಮತ್ತು ಅನಂತರ ಅತ್ಯಂತ ಚಟುವಟಿಕೆಯ ವಿರೋಧಿಗಳಾದರು. ಇನ್ನೊಂದಷ್ಟು ಜನರು ನಿಷ್ಠೆಯನ್ನು ತ್ಯಜಿಸಿದರು. ಭಯದಿಂದ ಇರಬಹುದು ಅಥವಾ ತಾವು ಯಾವ ಸರಕಾರದಡಿಯಲ್ಲಿದ್ದೇವೆಂಬ ನಿರ್ಲಕ್ಷ್ಯ ಧೋರಣೆಯಿಂದ ಇರಬಹುದು. ಇನ್ನೂ ಒಂದಿಷ್ಟು ಜನ ಅರಾಜಕತೆ ಮತ್ತು ಗಲಭೆಯ ಲಾಭ ಪಡೆಯಲು ಹೊರಟರು. ಕೊನೆಯ - ಆದರೆ ಪ್ರಮುಖ ಬೆಂಬಲಿಗರು ಹೊಸ ಆಡಳಿತದಲ್ಲಿ ಸಂಪ್ರದಾಯದತ್ತವಾಗಿ ತಮಗೆ ಸಿಗಬಹುದಾದ ಲಾಭದ ನಿರೀಕ್ಷೆಯನ್ನಿಟ್ಟುಕೊಂಡದ್ದೇ ಕಾರಣ. ಭಾರತದ ಜನರು ನಂಬಿಕೊಂಡ ಸೂತ್ರವೇ ಆಗಾಗ್ಗೆ ಹಳೆಯದನ್ನು ಬದಲಾಯಿಸಲು ಬೆಂಬಲ ಕೊಡುವುದು. ಇದು ಪುರಾತನ ಕಾಲದಿಂದ ಇತ್ತೀಚಿನ ನಾಗರಿಕ ಕಾಲದಲ್ಲಿಯೂ ನಡೆಯುತ್ತಿರುವುದು.

**ಬಂಡಾಯಗಾರರ ನಡವಳಿಕೆ ಮೇಲ್ಮಟ್ಟದ್ದು :** ಈ ಸಂದರ್ಭದಲ್ಲಿ ಕೂಡಾ ಇದರ ಪ್ರಭಾವ ಕಳೆದುಹೋಗಿಲ್ಲ. ಜನಸಮುದಾಯದ ಮನಸ್ಸಿಗೆ ಪ್ರಮುಖ ವಿಚಾರವಾಗಿ ಇದನ್ನು ದುಡಿಸಿಕೊಂಡಿದ್ದಾರೆಂದು ತಿಳಿದುಬರುತ್ತದೆ. ತೆರಿಗೆ ವಿನಾಯಿತಿಯ ಭರವಸೆ, ಏಕಸ್ವಾಮ್ಯವನ್ನು ರದ್ದುಪಡಿಸುವುದು ಮತ್ತು ಇತರ ಆರ್ಥಿಕ ಧೋರಣೆಗಳನ್ನು ಜನರಿಗೆ ಒತ್ತಿ ಹೇಳಲಾಗಿತ್ತು. ಇದರ ನಿಜಾಂಶ ಸಾಬೀತುಪಡಿಸುವುದಕ್ಕಾಗಿ ಅವರು ಉಪ್ಪಿನ ಮತ್ತು ಹೊಗೆಸೊಪ್ಪಿನ ಬೆಲೆಯನ್ನು ಒಮ್ಮಿಂದೊಮ್ಮೆಗೆ ಇಳಿಸಿದರು. ಇವುಗಳನ್ನು ಸ್ಥಾಪಿತ ಸರಕಾರವಾಗಿ ಅಧಿಕಾರ ಹೊಂದಿದವರಂತೆ ಪ್ರದರ್ಶಿಸಿ ತಿಳಿಯಪಡಿಸಲಾಗಿತ್ತು. ಇವುಗಳ ಪ್ರಚಾರಕ್ಕೆ ಸರಕಾರಿ ನೌಕರರನ್ನೂ ಕೆಲಸಕ್ಕೆ ತೆಗೆದುಕೊಳ್ಳಲಾಗಿತ್ತು. ಕೆಲವು ಅಧಿಕಾರಿಗಳೊಡನೆ ಕೆಟ್ಟದಾಗಿ ನಡೆದುಕೊಳ್ಳಬೇಕಾಗಿ ಬಂದಲ್ಲಿಯೂ ಕೂಡಾ ನಂತರ ಸಹಮತಕ್ಕೆ ತೆಗೆದುಕೊಂಡು, ಮಾನವೀಯ ನಡವಳಿಕೆ ಮತ್ತು ಗೌರವದಿಂದ, ಮುಂದಿನ ಸರಕಾರ ಸ್ಥಾಪನೆಗೆ ಬೆಂಬಲ ಮುಂದುವರಿಯುವಂತೆ ಮಾಡಿದ್ದರಿಂದ, ಇವರ ನಡವಳಿಕೆ ಮೇಲ್ಮಟ್ಟದ್ದು ಮತ್ತು ನ್ಯಾಯಬದ್ಧವಾದದ್ದು ಎನ್ನುವುದನ್ನು ಅಲ್ಲಗಳೆಯುವಂತಿಲ್ಲ.

**ಸೋಲಿನ ಸುಳಿಯಲ್ಲಿ:** ಏಳನೇ ಮತ್ತು ಹನ್ನೆರಡನೇ ಏಪ್ರಿಲ್ ನಡುವೆ ಕೆಲವೊಂದು ಘಟನೆಗಳು (ಅಷ್ಟರಲ್ಲಿ ಕಣ್ಣನೂರಿನಿಂದ ಸೈನ್ಯ ಬಂದು ತಲುಪಿತ್ತು) ಉಲ್ಲೇಖಿಸಲು ಅರ್ಹವಾಗಿವೆ. ಈ ನಡುವೆ ಮುಖ್ಯ ಬಂಡಾಯಗಾರರ ತಂಡವೂ ಒಡೆದು ಪ್ರತ್ಯೇಕ ಗುಂಪುಗಳಾಗಿ ರಾಜ್ಯದ ಉದ್ದಗಲಗಳಲ್ಲಿ ಹರಡಿಕೊಂಡು, ಆಡಳಿತವನ್ನು ನಿಯಂತ್ರಿಸಲು ಸಹಕರಿಸತೊಡಗಿದರೆಂಬ ವರದಿ ಬಂದಿತ್ತು. ಈ ಸಮಯದಲ್ಲಿ ಜಿಲ್ಲೆಯ ವಿವಿಧ ಭಾಗಗಳಲ್ಲಿ ಯಾರು ಹೆಚ್ಚು ಬಲಶಾಲಿಗಳು ಎನ್ನುವುದನ್ನು ತೋರಿಸಿ ಜನರಲ್ಲಿ ನಂಬಿಕೆ ಹುಟ್ಟಿಸುವುದಕ್ಕೆ ಮತ್ತು ಭ್ರಮೆಯಿಂದ ಹಿಂತಿರುಗುವುದಕ್ಕೆ ಸ್ವಲ್ಪ ಸೈನ್ಯದ ಅಗತ್ಯ ಮಾತ್ರ ಸಾಕಿತ್ತು.

ಈ ಸಮಯಕ್ಕೆ ಹಿಂದೆ, ವೈಯಕ್ತಿಕ ಮನೆಗಳ ಲೂಟಿ ಮಾಡಿದ ಘಟನೆ ಸಂಭವಿಸಿತ್ತು. ಸರಕಾರದ ಚೌಕಿ (ಉಕ್ಕಡ)ಗಳನ್ನು ವಶಕ್ಕೆ ತೆಗೆದುಕೊಳ್ಳಲಾಗಿತ್ತು. ಊರಿನ ಜನರು ಇದಕ್ಕೆ ಸಹಕರಿಸಿದ್ದರು. ಊರಿನ ಗಣ್ಯರ ಕೃಪಾದೃಷ್ಟಿಯನ್ನು ಹೊಂದಿ, ಹೆಚ್ಚಾಗಿ ಸರಕಾರಿ ನೌಕರರ ಸಮ್ಮತಿ ಮೇರೆಗೆ, ಕೆಲವೊಮ್ಮೆ ಅಲ್ಲಿದ್ದ ನೌಕರರನ್ನು ಹಿಂಸಿಸಿ, ಅವರಿಂದ ಸ್ವಾಧೀನಪಡಿಸಿಕೊಂಡ ಘಟನೆಗಳು ಇವೆ. ಸ್ಪೆಶಲ್ ಕಮೀಶನರಲ್ಲಿ ವಿವಿಧ ಕಾರಣಗಳಿಂದ ವಿಚಾರಣೆಗೆ ಗುರಿಯಾಗಿರುವ ಸರಕಾರಿ ನೌಕರರ ಸಂಖ್ಯೆಯನ್ನು ಕಮೀಶನರು ಗಮನಿಸುವುದು ಅಗತ್ಯ. ಬಂಡಾಯಗಾರರು ಎಷ್ಟು ಆಳವಾಗಿ ಇವರ ಮೇಲೆ ಪ್ರಭಾವ ಹೊಂದಿದ್ದರೆಂದು ಗೊತ್ತಾಗುತ್ತದೆ. ಇಡೀ ಜನತೆ ಅವರನ್ನು ಬೆಂಬಲಿಸಿದಾಗ, ನಮ್ಮ ಪರವಾಗಿದ್ದ ಸಣ್ಣ ಸಂಖ್ಯೆಯಿಂದ, ಪರಿಣಾಮಕಾರಿ ತಡೆಯೊಡ್ಡಲು ಹೇಗೆ ಸಾಧ್ಯವಾದೀತೆಂದು ಊಹಿಸಬಹುದು.

ಇಲ್ಲಿಯ ನಿವಾಸಿಗಳು ಅವರ ನೆರೆಯವರೊಂದಿಗೆ ನಡೆದುಕೊಂಡ ರೀತಿ, ಅಸಹ್ಯ ಹುಟ್ಟಿಸುವಂತಹ ಒಂದು ಸ್ವರೂಪದ್ದಾಗಿತ್ತು. ಹೀಗೆ ಆದಾಗ ಸರಕಾರದ ನೌಕರರು ಆ ಕೂಡಲೇ ಸರಿಪಡಿಸುವ ಅಥವಾ ಯಥಾಸ್ಥಿತಿಗೆ ತರುವ ಕೆಲಸ ಮಾಡಿಲ್ಲವೆಂದು ಗೊತ್ತಾಗುತ್ತದೆ. ಹೊಸ ರಾಜ ಸಂತತಿ ಬಂದಿದೆ ಎಂದು ಸಾರುತ್ತಾ ದೊಡ್ಡ ಸಂಖ್ಯೆಯಲ್ಲಿ ದುರಾತ್ಮರ ತಂಡಗಳು ಬರತೊಡಗಿದ್ದವು. ಹಿಂದುಗಳ ದೇವಸ್ಥಾನದ ಸ್ವತ್ತುಗಳನ್ನು ಅಪಹರಿಸಿದರು. ಅವರು ಹೋದಲ್ಲೆಲ್ಲಾ ಗಲಭೆ ಮತ್ತು ಭಯೋತ್ಪಾದನೆ ಹರಡಿತ್ತು.

ಹೊನ್ನಾವರದ ಸುತ್ತಮುತ್ತ ಅತೃಪ್ತಿ ಪ್ರದರ್ಶಿಸಲ್ಪಟ್ಟಿತು. ಉತ್ತರ ಕೆನರಾದ ಸಬ್‌ಕಲೆಕ್ಟರ್ ಕಾರ್ಯಾಲಯದಲ್ಲಿ ರೈತರು ಗುಂಪಾಗಿ ಸೇರಿ ಮುಂದಿನ ಕಂದಾಯದಲ್ಲಿ ವಿನಾಯಿತಿ ಕೇಳಿದ್ದರು. ಆ ವರ್ಷದ ಸುಗ್ಗಿ ಬೆಳೆ ಯಾವತ್ತಿಂದ ಕಡಿಮೆಯಾಗಿದ್ದು ೧೨೪೦ರ ಫಸ್ಲಿಯಲ್ಲಿ ವಿನಾಯತಿ ಕೋರಿದ್ದರು. ಇದೇ ವರ್ಷದ ಮೊದಲ ಭಾಗದಲ್ಲಿ ಬಂಡಾಯದಿಂದಾಗಿ ಕಿಸ್ತಿನಲ್ಲಿ ಹೆಚ್ಚಿನ ಪಾಲು ಪಾವತಿಸಿರಲಿಲ್ಲ. ಕೂಡಲೇ ತಕ್ಕ ಕ್ರಮ ತೆಗೆದುಕೊಳ್ಳದಿದ್ದರೆ ಕಂದಾಯ ವಸೂಲಾತಿಯಲ್ಲಿ ಕಠಿಣ ತೊಂದರೆಯನ್ನು ಅನುಭವಿಸಬೇಕಾಗಬಹುದೆಂಬುದರಲ್ಲಿ ಯಾವ ಸಂದೇಹವು ಇಲ್ಲ.

**ಬಂಡಾಯದ ಗುರಿ ಏನಿತ್ತು? :** ಪುತ್ತೂರಿನಿಂದ ಕೂಡಲೇ ಮಂಗಳೂರಿಗೆ ಸೈನ್ಯ ಹಿಂತಿರುಗಿಸಿದ್ದು ಮತ್ತು ಮುಂದೆ ಆದಂತಹ ಕಾರ್ಯಕ್ರಮಗಳು, ಶತ್ರುಗಳನ್ನು ಆಕ್ರಮಣ ಮಾಡಲು ಆಹ್ವಾನಿಸಿದಂತಾಯಿತು. ಇಲ್ಲವಾಗಿದ್ದರೆ ಅವರು ಧೈರ್ಯ ತೆಗೆದುಕೊಳ್ಳುತ್ತಿರಲಿಲ್ಲವೆಂಬುದನ್ನು ದೃಢೀಕರಿಸಬಹುದು. ಇದು ಕಾರಣವಾಗಿದ್ದರೆ – ಫಲಿತಾಂಶವನ್ನು ಉಂಟುಮಾಡಲು ನಾನೇ ಕಾರಣಕರ್ತನಾಗಿದ್ದರೆ - ನಾನು ನನ್ನ ಅಂತರಾಳದಿಂದ ಪರಿತಪಿಸುತ್ತೇನೆ. ಆದರೆ ಈ ಕಂಠೋಕ್ತಿ ಒಬ್ಬನ ಮನಸ್ಸನ್ನು ವಿಚಲಿತಗೊಳಿಸಬಲ್ಲುದಾದರೂ ಇದು ಅಸತ್ಯ. ಒಬ್ಬಾತನ ನಿಷ್ಠೆ ಮತ್ತು ಉಪದೇಶಗಳನ್ನು

ಗಮನಿಸಿದರೆ ಅವರ ಗುಣಮಟ್ಟಕ್ಕೆ ಇದೊಂದು ಸಾಮಾನ್ಯ ಮಟ್ಟದ ಆಪಾದನೆ ಎಂಬುದಾಗಿ ಸರಕಾರವು ಸಂಪೂರ್ಣ ವಿವರಣೆಗಳನ್ನು ಅವಲೋಕಿಸಿ ತೀರ್ಮಾನಕ್ಕೆ ಬರುವ ಸಾಧ್ಯತೆ ಇದೆ. ಈ ವಿಚಾರವನ್ನು ಅವರಿಗೆ ವಿಶದಪಡಿಸುವುದಕ್ಕಾಗಿ, ನಾನು ಮಂಗಳೂರಿಗೆ ಬಂಡಾಯಗಾರರ ಮುನ್ನಡೆಯನ್ನು ತಾತ್ಕಾಲಿಕವಾಗಿ ತಡೆಯಲು ನಿರ್ಧರಿಸಿದ್ದೆ. ಪ್ರತಿ ದಿಕ್ಕಿನಿಂದ ಅವರು ಮುಂದುವರಿದ ದಾರಿಗಳಲ್ಲಿ ಮುಂದಡಿ ಇಡುತ್ತಾ, ಅವರು ಬೆಳ್ಳಾರೆ ಪೇಟೆಯಿಂದ ಹೊರಟಾಗ ಬಂಡಾಯಗಾರರ ಗುರಿ ಮಂಗಳೂರು ಆಗಿತ್ತೇ, ಇಲ್ಲವೇ? ನಿರ್ಧರಿಸುವುದನ್ನು ಕಮೀಶನರಿಗೆ ಬಿಡುತ್ತೇನೆ. ಆದರೆ ಅವರ ವಿಚಾರಣೆಯ ಫಲಿತಾಂಶವಾಗಿ ಇದು ಅಲ್ಲವೆಂದು ತೋರಿಸುತ್ತದೆ. ಅಲ್ಲದೆ, ಸ್ವಲ್ಪವೂ ಸಂಶಯವಿಲ್ಲದೆ, ಅದೇ ಸಂದರ್ಭದಲ್ಲಿ ಅವರ ಉದ್ದೇಶ ಏನಿತ್ತು? ಎನ್ನುವುದನ್ನು ತೋರಿಸುತ್ತದೆ.

ಈ ವಾದಕ್ಕಾಗಿ ಒಪ್ಪಿಕೊಳ್ಳುವುದಾದರೆ, ಒಳ ನುಸುಳಿದ ಸತ್ಯ ಮತ್ತು ಬಂಡಾಯಗಾರರಿಗೆ ನಮ್ಮ ನಡವಳಿಕೆ ಧೈರ್ಯ ತಂದಿತು ಎನ್ನುವುದಾದರೆ, ಖಂಡಿತವಾಗಿ ೫ನೇ ಎಪ್ರಿಲ್‌ನಂದಿನ ಪ್ರಥಮ ಆಕ್ರಮಣದ ಫಲಿತಾಂಶದಿಂದ ಉಂಟಾದ ಪರಿಣಾಮ ಹೆಚ್ಚು ಸಮಯ ಉಳಿಯುತ್ತಿರಲಿಲ್ಲ. ಹಿಂದೆ ಯಾವುದೇ ತಪ್ಪು ಮಾಡದೇ ಇದ್ದರೂ, ಆದಿನ, ಮೋಸಹೋಗದೆ ಬಂಡಾಯಗಾರರ ಸೈನ್ಯ ಮಂಗಳೂರು ಪೇಟೆಯನ್ನು ಪ್ರವೇಶಿಸಿತ್ತು ಮತ್ತು ಅವರು ಜನರೊಡನೆ ಸಂಪರ್ಕ ಇಟ್ಟುಕೊಂಡರು. ಅವರಿಗೆ ಸಂಪೂರ್ಣ ಮಾಹಿತಿ ಲಭ್ಯವಿತ್ತು. ಯಾಕೆ ಇದು ಸತ್ಯ? ಅವರು ಎರಡು ದಿನಗಳ ನಂತರ ೭ನೇ ತಾರೀಕಿನಂದು ನಾವು ಇದ್ದಲ್ಲಿ ಆಕ್ರಮಣ ನಡೆಸಿದ್ದರು. ಇದು ನಮ್ಮನ್ನು ೬೦ ಹೊಸ ಜನ ಸೇರಿಕೊಂಡು ನಮ್ಮ ಹಾಳುಗೆಡವಲ್ಪಟ್ಟ ಸ್ಥಿತಿ ಸುಧಾರಣೆಯಾಗುತ್ತಿದ್ದಾಗ ನಡೆದದ್ದು. ಇದು ಮಾತ್ರವಲ್ಲದೆ, ಈಗ ನನ್ನ ಕೈಸೇರಿರುವ ಸುಬ್ರಾಯ ಕರಣಿಕನ ಹಸ್ತಾಕ್ಷರದಲ್ಲಿರುವ ದಾಖಲೆ ಬಂಡಾಯಗಾರರ ನಾಯಕ ಪುಟ್ಟಬಸಪ್ಪನ ಪ್ರಾಮುಖ್ಯತೆ ವಿಶದೀಕರಿಸಿ, ಮಂಗಳೂರಿನ ಮೇಲೆ ಮೂರನೇ ದಾಳಿಯನ್ನು ಇದೇ ತಿಂಗಳ ಹತ್ತನೇ ತಾರೀಕಿಗೆ ನಡೆಸಲು ತಯಾರಾಗುವಂತೆ ಅದರಲ್ಲಿ ಅಪ್ಪಣೆ ಕೊಡಿಸಲಾಗಿತ್ತು.

ಕಳೆದ ೪೦ ವರ್ಷಗಳಲ್ಲಿ ವಸೂಲಾದ ಕಂದಾಯ ಕೆಲವು ಸಾವಿರದಷ್ಟು ವ್ಯತ್ಯಾಸ ಇದ್ದರೆ, ಫಸ್ಲಿ ವರ್ಷ ೧೨೪೦ರಲ್ಲಿ ವಸೂಲಾಗಿರುವುದರಲ್ಲಿ ೨ ಲಕ್ಷದಷ್ಟು ಕಡಿಮೆಯಾಗಿರುವುದನ್ನು ಕಮೀಷನರು ಗಮನಿಸಬಹುದು. ಕೆನರಾ ಯಾವುದೇ ಕಾಲದಲ್ಲಿ ಕಠಿಣವಾದ ಅನಾವೃಷ್ಟಿಗೆ ಒಳಗಾಗಿಲ್ಲ. ಬರಗಾಲವು ಇದಕ್ಕೆ ಕಂಡರಿಯದ ವಿಚಾರ. ಬೇರೆಲ್ಲೂ ಗೊತ್ತಿಲ್ಲದಂತಹ ಕಂದಾಯ ವಸೂಲಿಯ ಸೌಲಭ್ಯ ಇಲ್ಲಿಯದು. ಈಸ್ಟ್ ಇಂಡಿಯಾ ಕಂಪೆನಿಯ ವಶಕ್ಕೆ ಬಂದ ಲಾಗಾಯಿತಿನಿಂದ ಜಿಲ್ಲೆಯ ಫಸ್ಲಿವಾರ್ ಕಂದಾಯ ವಸೂಲಾತಿ ತಖ್ತೆಯನ್ನು ಹೆಚ್ಚಿನ ಸಂದರ್ಭಗಳ ತುಂಬಾ ವರ್ಷ ಹಿಂದಿನದರೊಂದಿಗೆ ಜೋಡಿಸಿದ್ದೇನೆ.

| ಜನ ಸಂಖ್ಯೆ | ಫಸಲಿ | ವಸೂಲಾದ ಭೂಕಂದಾಯ | | | ಜನಸಂಖ್ಯೆ | ಫಸಲಿ | ವಸೂಲಾದ ಭೂಕಂದಾಯ | | |
|---|---|---|---|---|---|---|---|---|---|
| | | ರೂ. | ಆಣೆ | ಪೈಸೆ | | | ರೂಪಾಯಿ | ಆಣೆ | ಪೈಸೆ |
| 592635 | 1210 | 1669314 | 8 | 10 | | 1229 | 1674401 | 8 | 9 |
| 592635 | 1211 | 1727778 | 14 | 7 | 649135 | 1230 | 1694400 | 6 | 1 |
| 567621 | 1212 | 1719228 | 5 | 6 | 657594 | 1231 | 1697370 | 14 | 5 |
| | 1213 | 1718238 | 10 | 0 | | 1232 | 1705518 | 1 | 3 |
| | 1214 | 1723427 | 4 | 5 | | 1233 | 1700211 | 11 | 10 |
| | 1215 | 1728392 | 4 | 5 | | 1234 | 1703121 | 9 | 2 |
| | 1216 | 1702457 | 0 | 0 | | 1235 | 1681554 | 11 | 8 |
| 574440 | 1217 | 1723696 | 7 | 2 | 665652 | 1236 | 1665121 | 0 | 5 |
| | 1218 | 1720155 | 6 | 11 | | 1237 | 1681208 | 4 | 8 |
| | 1219 | 1704987 | 15 | 1 | | 1238 | 1679092 | 13 | 4 |
| | 1220 | 1702164 | 2 | 0 | 707571 | 1239 | 1646338 | 11 | 8 |
| | 1221 | 1705667 | 7 | 11 | | 1240 | 1452030 | 2 | 6 |
| | 1222 | 1705781 | 3 | 3 | | 1241 | 1614822 | 15 | 11 |
| | 1223 | 1702726 | 10 | 8 | 718333 | 1242 | 1613346 | 4 | 11 |
| | 1224 | 1705348 | 5 | 5 | | 1243 | 1649115 | 10 | 5 |
| 670355 | 1225 | 1693990 | 6 | 6 | | 1244 | 1685085 | 7 | 6 |
| | 1226 | 1698728 | 3 | 0 | 726680 | 1245 | 1701826 | 8 | 7 |
| | 1227 | 1698256 | 6 | 4 | | 1246 | 1706432 | 4 | 10 |
| | 1228 | 1643313 | 4 | 9 | | | | | |
| ಪ್ರಥಮ 5 ವರ್ಷಗಳಲ್ಲಿ ಕಂಪೆನಿ ಸರಕಾರಕ್ಕೆ ವಸೂಲಿ ಬಂದ (ಸರಾಸರಿ ಕಂದಾಯ) | | | | | | | 1711597 | 9 | 9 |
| ಕೊನೆಯ 5 ವರ್ಷಗಳಲ್ಲಿ ಕಂಪೆನಿ ಸರ್ಕಾರಕ್ಕೆ ವಸೂಲಿ ಬಂದ ಸರಾಸರಿ ಕಂದಾಯ | | | | | | | 1664134 | 4 | 10 |
| ನಿವ್ವಳ ಖೋತ | | | | | | | 47463 | 4 | 11 |

ಇದರಲ್ಲಿ ಬೇರೆ ಬೇರೆ ಕಾಲದಲ್ಲಿ ಇಲ್ಲಿನ ಜನಸಂಖ್ಯೆ ಕೂಡಾ ಇದೆ. ಭೂಮಿಯನ್ನು ಪಡಕೊಂಡಷ್ಟೆ ಮೌಲ್ಯಕ್ಕೆ ಮಾರಾಟ ಮಾಡಬಹುದಾಗಿರುವ ಕಾರಣ ಜನರು ಯಾವತ್ತೂ ಭಾರವಾದ ಒತ್ತಡಕ್ಕೆ ಒಳಗಾಗುವ ಪರಿಸ್ಥಿತಿಯಲ್ಲಿ ಇದ್ದಾರೆ ಎನ್ನುವುದಕ್ಕೆ ತಕ್ಕುದಾದ ದೃಷ್ಟಾಂತವಾಗಿದೆ - ಎಷ್ಟು ಹಗುರ ಎನ್ನುವುದಕ್ಕೆ ಬೇಕಾದ ಪುರಾವೆಯನ್ನು ಹೊಂದಿದೆ.

ಬೇರೆ ಜಿಲ್ಲೆಗಳನ್ನು ಹೋಲಿಸಿದರೆ ಇಲ್ಲಿಯ ಹಾಗೆ ಇರುವುದು ಕಂಡುಬರುವುದಿಲ್ಲ. ಕೆನರಾದಲ್ಲಿ ಜಮೀನ್ದಾರ ಸಾಮಾನ್ಯವಾಗಿ ಒಪ್ಪಿಕೊಳ್ಳುವ ಲಾಭವನ್ನು ಹೊಂದಿಕೊಂಡು ಸರಕಾರವು ಕಂದಾಯವನ್ನು ನಿಶ್ಚಯಿಸುತ್ತದೆ. ಬೇರೆ ಕಡೆಯಂತೆ ಯಾವುದೇ ಅನಿಶ್ಚಿತವಾದ, ತತ್ವಾಧಾರಿತ ನಿಯಮಗಳಿಂದ ಇಲ್ಲಿಯ ಬೆಳೆ ನಿಗದಿಯಾಗುವುದಿಲ್ಲ.

ಬೇರೆ ಎರಡು ಜಿಲ್ಲೆಗಳಲ್ಲಿ ಕಲೆಕ್ಟರನಾಗಿದ್ದ ಮತ್ತು ಎರಡು ಸ್ಥಳೀಯ ನ್ಯಾಯಾಲಯಗಳಲ್ಲಿ ನ್ಯಾಯಾಧೀಶನಾಗಿದ್ದ ಕಾರಣ ನನಗೆ ಕೆನರಾದಲ್ಲಿ ಸಿಕ್ಕಿರುವ ಅನುಭವವನ್ನು ನ್ಯಾಯಾಂಗ ಮತ್ತು ಕಂದಾಯ ಇಲಾಖೆಯ ಕುರಿತಾಗಿ ಇಲ್ಲಿಯ ಜನರೊಂದಿಗೆ ತುಲನ ಮಾಡಲು ಸಾಧ್ಯವಾಗುತ್ತದೆ. ಮದ್ರಾಸ್ ಸರಕಾರದಲ್ಲಿ ಕಳೆದ ಕೆಲವು ವರ್ಷಗಳಿಂದ ಬೇರೆ ಯಾವುದೇ ಒಂದು ಜಿಲ್ಲೆ, ಇದಕ್ಕೆ ಸರಿಸಮವಾಗಿ ತಮ್ಮ ಬೇಡಿಕೆಗಳನ್ನು ಸರಕಾರದಿಂದ ಪರಿಹರಿಸಿಕೊಂಡಿಲ್ಲವೆಂದು ನನ್ನ ಸಂಪೂರ್ಣ ನಂಬಿಕೆಯಿಂದ ಹೇಳುವುದಕ್ಕೆ ನಾನು ಹಿಂಜರಿಯುವುದಿಲ್ಲ. ಇದಕ್ಕೆ ಸರಕಾರದಿಂದ ಸಿಕ್ಕಿದಷ್ಟು ಗಮನವಾಗಲೀ, ಸಹಾಯವಾಗಲೀ, ಕಂದಾಯ ನಿರ್ಣಯದಲ್ಲಿನ ಕನಿಕರವಾಗಲೀ, ಬೇರೆ ಯಾವುದೇ ಜಿಲ್ಲೆಗೆ ಸಿಕ್ಕಿಲ್ಲವೆಂಬುದು ಕಾಣುತ್ತದೆ.

ಸರಕಾರವು ದಂಗೆ ಏಳುವವರನ್ನು ಮನ್ನಿಸುವ, ಅದಕ್ಕೂ ಹೆಚ್ಚಾಗಿ ಬೇಡಿಕೆಗಳನ್ನು ಒಪ್ಪಿಕೊಳ್ಳುವ, ಸರಕಾರಿ ನೌಕರರಿಗೆ ಕಾನೂನು ಪ್ರಕಾರ ಕಠಿಣ ತೀರ್ಪುಗಳನ್ನು ಹೊರತುಪಡಿಸುವಂತಹ ಪರಿಸ್ಥಿತಿ ದೇಶದಲ್ಲಿ ಇದ್ದಿತು. ಪ್ರಾಯಶಃ ಇದನ್ನು ಜನರು ಅರ್ಥ ಮಾಡಿಕೊಳ್ಳಲೂ ಇಲ್ಲ. ಒಪ್ಪಲೂ ಇಲ್ಲ. ಇದೇ ರೀತಿ ಬಂಡೇಳುವುದರಿಂದ ಆಗುವ ಲಾಭ ಅವರಿಗೆ ಪ್ರೇರಣೆಯಾಗಿರಬಹುದು.

ಕೆನರಾವು ಕಂಪೆನಿಯ ಅಧೀನಕ್ಕೆ ಬಂದಾಗಿನ ಫಸ್ಲಿ ೧೨೦೯ರ ಹಿಂದಿನ ಸರಕಾರದ ಸಾಂಕೇತಿಕವಾಗಿ ಗೇಣಿಯನ್ನು ಇಳಿಸಲಾಯಿತು. ಅಲ್ಲದೆ ವೈಯಕ್ತಿಕ ಗೇಣಿಯನ್ನು ಹೆಚ್ಚಿಸುವುದಿಲ್ಲವೆಂಬ ಭರವಸೆಯನ್ನು ಕೊಡಲಾಯಿತಲ್ಲದೆ, ಈ ಭರವಸೆಯನ್ನು ಕಾಪಾಡಿಕೊಂಡು ಬರಲಾಗಿದೆ. ಆದರೆ ಮುಂದಿನ ವರ್ಷಗಳಲ್ಲಿ ಹಿಡುವಳಿಗಳ ಸಾಮರ್ಥ್ಯವನ್ನು ಪರಿಶೀಲಿಸುವ ಕಾರ್ಯ ನಡೆದಿದೆ. ಇದು ಕಂದಾಯ ಹೆಚ್ಚಿಸುವ

ಉದ್ದೇಶಕ್ಕಾಗಿ ಅಲ್ಲ, ನ್ಯಾಯಬದ್ಧವಾದ ಕಂದಾಯ ನಿಗದಿಗೊಳಿಸುವುದಕ್ಕಾಗಿ ಮತ್ತು ಎಲ್ಲಿ ಹೆಚ್ಚು ಒತ್ತಡ ಬಿದ್ದಿದೆ ಅಲ್ಲಿ ಇಳಿಸುವುದರ ಮೂಲಕ ಉತ್ತಮಪಡಿಸು ವುದಕ್ಕಾಗಿರುತ್ತದೆ. ಈ ರೀತಿ ಪರಿಶೀಲನೆಯಲ್ಲಿ ಸಿಕ್ಕಿರುವ ಖಚಿತವಾದ ಮಾಹಿತಿ ಪ್ರಕಾರ ಜಿಲ್ಲೆಯ ೫೫೦೦೦ ಹಿಡುವಳಿಗಳಲ್ಲಿ ನೂರಕ್ಕೆ ಎರಡಕ್ಕಿಂತ ಹೆಚ್ಚಾಗದಷ್ಟು ಉತ್ಪತ್ತಿ ಅಥವಾ ಗೇಣಿಯ ಅರ್ಹತೆ ಸರಿಯಾಗಿ ಗೊತ್ತಾಗಿಲ್ಲ. ಸರಕಾರದ ಮುಂದೆ ಇಟ್ಟಿರುವ ಇದರ ಫಲಿತಾಂಶ ಅದಕ್ಕೆ ಮತ್ತು ಜನತೆಗೆ ಸಿಗಬೇಕಾದ ಖಚಿತವಾದ ನ್ಯಾಯವನ್ನು ಕೊಡಲು ಸಾಧ್ಯವಾಗುವ ಸ್ಥಿತಿಯಲ್ಲಿದೆ.

ಕೆನರಾದಲ್ಲಿ ವಾರ್ಷಿಕ ತೀರ್ವೆಯೂ ಹೆಚ್ಚು ಕಡಿಮೆ ವಾರ್ಷಿಕ ತನಿಖೆಯಾಗಿ ಕೊನೆಗೊಳ್ಳುತ್ತದೆ. ತಪಾಸಣಾ ಶಕ್ತಿ ಮತ್ತು ಪರಿಶ್ರಮಗಳಿಂದ ಕೊನೆಯ ಗಳಿಗೆಯವರೆಗೂ ನಡೆಸಲ್ಪಡುತ್ತದೆ. ಬೇರೆ ಜಿಲ್ಲೆಗಳಲ್ಲಿ ಹಾಗಿಲ್ಲ. ರೈತರನ್ನು ಕರೆದು ಅವರು ವ್ಯವಸಾಯ ಮಾಡುತ್ತಿರುವ ಭೂಮಿಯ ಕಂದಾಯವನ್ನು ಪಾವತಿಸಲು ಹೇಳಿದರೆ ಆಯಿತು. ಋತುಕಾಲದ ಬಗ್ಗೆ ಏನೂ ಸಂಬಂಧ ಇಲ್ಲ. ಅಥವಾ ಇನ್ನು ಯಾವುದೇ ಪರಿಶೀಲನೆ ಇಲ್ಲ. ಆತ ಪಡೆದುಕೊಂಡಿರುವ ಪಟ್ಟಾದಲ್ಲಿರುವ ಭೂಮಿಗೆ ನಿಗದಿತ ಕಂದಾಯದ ತಖ್ತೆ ಇದೆ. ಮತ್ತೆ ಅದರ ಹೊರತು ಬೇರೆ ಏನೂ ಇಲ್ಲ.

ಕೆನರಾದಲ್ಲಿ ತೀರ್ವೆ ನಿರ್ಧರಿಸಲು ಋತುಗಳ ಪ್ರಭಾವವನ್ನು ಮಾತ್ರವಲ್ಲದೆ, ರೈತನು ಭೂಮಿಯಿಂದ ಗಳಿಸಬಹುದಾದ ಸಾಮಾನ್ಯ ಸ್ಥಿತಿ ಸಾಮರ್ಥ್ಯಗಳ ಕಡೆ ಗಮನ ಕೊಡಬೇಕಾಗಿದೆ. ಸ್ಥಳೀಯ ಕಂದಾಯ ಇಲಾಖೆಯು ರೈತನ ಕಡೆ ಸಾಮಾನ್ಯ ಸ್ಥಿತಿಗತಿಗಳನ್ನು ವಿಚಾರಿಸಿ, ಅವನು ಯಾವ ಪರಿಸ್ಥಿತಿಗೆ ತಲುಪಿದ್ದಾನೆಂಬ ವಿವರಣೆಯನ್ನು ಕೊಡುತ್ತದೆ. ತೆರಿಗೆ ವಸೂಲಿಯ ಕಠಿಣ ಜವಾಬ್ದಾರಿಗಾಗಿ ನೇಮಿಸಲ್ಪಟ್ಟ ಅಧಿಕಾರಿಯೂ, ಒಬ್ಬಾಕೆ ಸಾಮಾನ್ಯ ದಾದಿಯ ಪಾತ್ರವನ್ನು ನಿರ್ವಹಿಸುತ್ತಾನೆ. ಈ ಪರಿಸ್ಥಿತಿಯಲ್ಲಿ ಸರಕಾರದ ಬೇಡಿಕೆ, ಕೇಳಿಕೆ ಮತ್ತು ಭೂಮಿಯ ಲಾಭ ಹೆಚ್ಚಾಗಿ ಗಣನೆಗೆ ಬರುವುದಿಲ್ಲ. ಬದಲಾಗಿ ವೈಯಕ್ತಿಕ ಸ್ಥಿತಿಯ ಪ್ರಕಾರ ಸ್ಥಳೀಯ ಕಂದಾಯಾಧಿಕಾರಿಯ ನಿರ್ಧಾರಕ್ಕೆ ಒಳಪಟ್ಟು ರಿಯಾಯಿತಿಯನ್ನು ಪಡೆಯುವುದು ರೂಢಿಯಾಗಿದೆ.

ಈ ಪದ್ಧತಿಯು ತತ್ವಾಧಾರಿತವಾಗಿದ್ದು, ಒಮ್ಮೊಮ್ಮೆ ವೈಯಕ್ತಿಕ ಮತ್ತು ನಿಶ್ಚಿತ ಸಂದರ್ಭಗಳಲ್ಲಿ ಎಷ್ಟೇ ಪರಿಣಾಮಕಾರಿಯಾಗಿದ್ದರೂ ಕೂಡಾ ಹೆಚ್ಚಾಗಿ ನ್ಯಾಯಬದ್ಧತೆಯ ಕೊರತೆಯನ್ನು ಹೊಂದಿದೆ. ಈ ಕನಿಕರದ ಧೋರಣೆಯೊಂದಿಗೆ, ವ್ಯವಸಾಯದ ವಿಸ್ತರಣೆ ಮತ್ತು ಅಭಿವೃದ್ಧಿಗಾಗಿ ಕಂತುಗಳಲ್ಲಿ ಮರುಪಾವತಿಸುವ ಠಖಾವಿ ಸಾಲಗಳನ್ನು ಮಂಜೂರು ಮಾಡುವ ಪದ್ಧತಿಯಿದೆ. ಇದು ಹೆಚ್ಚಾಗಿ ದುರುಪಯೋಗವಾಗುತ್ತಿತ್ತು. ಸಂತೃಪ್ತ ಸ್ವಭಾವದ ಜಮೀನ್ದಾರ ಸರಕಾರದ ಪರವಹಿಸುವಂತಾಗುವುದಕ್ಕೂ ಇದು ಸಹಕಾರಿಯಾಗಿಲ್ಲ. ಯಾವ ಕಾರಣಕ್ಕಾಗಿ ಅದು ಕೊಡಲ್ಪಟ್ಟಿದೆ, ಅದು ಏನಾಗಿದೆ,

ಯಾವುದಕ್ಕೆ ಉಪಯೋಗಿಸಲ್ಪಟ್ಟಿದೆ ಎನ್ನುವುದನ್ನು ಕೆಲವೊಮ್ಮೆ ಕಂಡುಹಿಡಿಯುವುದೇ ಅಸಾಧ್ಯವಾಗಿದೆ. ಖಜಾನೆಯಲ್ಲಿ ಸುಮ್ಮನೆ ಉತ್ಪಾದನೆಯಿಲ್ಲದೆ ಬಿದ್ದಿರುವ ಹಣವನ್ನು ಈ ರೀತಿ ತೊಡಗಿಸಿರುವುದು ಸರಕಾರವನ್ನು ನಷ್ಟಕ್ಕೆ ಗುರಿಪಡಿಸುವುದಿಲ್ಲ ಮತ್ತು ಇದು ಲಾಭದಾಯಕ ಹಾಗೂ ಉಪಯುಕ್ತವೆಂದು ತಿಳಿದಿದ್ದೇನೆ. ಈ ಸಂದರ್ಭದಲ್ಲಿ ಉದಾರೀಕರಣ ಉತ್ತಮವೆಂದು ನಾನು ತಿಳಿಯುತ್ತೇನೆ.

ಋತುಮಾನಗಳ ಪ್ರಭಾವದಿಂದ ಉಂಟಾದ ಪ್ರತಿಯೊಂದು ದುಷ್ಪರಿಣಾಮ ಎಷ್ಟೆಂದು ವಿವರ ಕೊಡದೆ ಇದ್ದರೂ ಕೂಡಾ ಇದಕ್ಕಾಗಿ ಪರಿಹಾರವೆಂದು ಕಂದಾಯದಲ್ಲಿ ರಿಯಾಯಿತಿ ಕೊಡುವುದಾಗಿ ಭಾವಿಸಲ್ಪಡುತ್ತಿತ್ತು. ಇದಕ್ಕಾಗಿ ಹಿಡುವಳಿಯ ಲಾಭವನ್ನು ಆಗಾಗ್ಗೆ ಪರೀಕ್ಷಿಸಬೇಕಾಗುತ್ತಿತ್ತು. ಸರಕಾರದ ಉತ್ಪತ್ತಿ ಈ ರೀತಿಯ ಸಂಪ್ರದಾಯವನ್ನು ಸರಿಯಾಗಿ ನಡೆಸಿಕೊಂಡು ಬರಲು ಎಷ್ಟಕ್ಕೂ ಸಾಕಾಗುತ್ತಿರಲಿಲ್ಲ. ಅಪ್ರಾಮಾಣಿಕ ಮತ್ತು ಸುಳ್ಳು ಮನವಿಗಳನ್ನು ಅವರ ಅಧಿಕಾರಿಗಳು ಬಯಲುಗೊಳಿಸುವ ಅವಕಾಶ ಇರಲಿಲ್ಲ. ಕನಿಕರವು ಸಂಪ್ರದಾಯವಾಗಿ ಕಾಣಿಸಿಕೊಂಡಿತು. ತೃಪ್ತಿಪಡಿಸಲು ಕೊಟ್ಟಂತದ್ದು ಮುಂದೆ ಹಕ್ಕು ಎಂಬಂತೆ ಕೇಳಲ್ಪಡುತ್ತಿತ್ತು. ಮೋಸಗಾರಿಕೆಯ ಯಂತ್ರವಾಗಿ ಪರಿವರ್ತಿಸಲ್ಪಟ್ಟು ತೊಂದರೆಗಳು ವೃದ್ಧಿಯಾಗತೊಡಗಿದವು. ಸಾಕಷ್ಟು ರಿಯಾಯಿತಿಬೇಕೆಂದು ಆಗ್ರಹಿಸುವ ಬೇಡಿಕೆಗಳನ್ನು ತರುವ ಕೀಳುಮಟ್ಟದ ಪ್ರವೃತ್ತಿ ಅಭ್ಯಾಸವಾಯಿತು. ಪ್ರತಿಯೊಂದು ಬೇಡಿಕೆಗಳನ್ನು ಪರೀಕ್ಷಿಸುವುದು ಅಸಾಧ್ಯವಾದ ಕಾರಣ ಅತೃಪ್ತಿ ಬೆಳೆಯಿತು. ನ್ಯಾಯಕ್ಕಿಂತ ರಿಯಾಯಿತಿ ಗದ್ದಲ ತುಂಬಾ ಹೆಚ್ಚಾಗತೊಡಗಿತು. ಸುಮ್ಮನಿರಿಸುವುದರ ಹೊರತಾಗಿ ಬೇರೆ ಕಾರಣವೇ ಇಲ್ಲದಾಗ ಸಣ್ಣ ಮೊತ್ತ ಕೊಡಲಾಗುತ್ತಿತ್ತು. ಇದರ ಪರಿಣಾಮ ಒಬ್ಬೊಬ್ಬರೇ ಗದ್ದಲ ಮಾಡುವ ಬದಲು ಒಟ್ಟಾಗಿ ಮಾಡಿದರೆ ಎಷ್ಟು ಲಾಭ ಎಂಬುದನ್ನು ಯೋಚಿಸಲು ಪ್ರಚೋದನೆ ನೀಡಿತು. ೧೨೪೦ ಫಸ್ಲಿ ಕೂಟ್ ಇದು ಎಷ್ಟು ದೊಡ್ಡದಾಯಿತು ಎನ್ನುವುದನ್ನು ತೋರಿಸುತ್ತದೆಂದು ಭಾವಿಸುತ್ತೇನೆ.

ಕೂಟ್ ಕಾಣಿಸಿಕೊಂಡ ವರ್ಷದಲ್ಲಿ ಅಸಾಧಾರಣ ಅತೃಪ್ತಿಕರವಾಗಿತ್ತು ಎಂಬ ಕಾರಣವಾದರೂ ಇದ್ದಿತು. ಆದರೆ ಕೊಟ್ಟಿರುವ ಪರಿಹಾರ ಆವಶ್ಯಕತೆಗಿಂತ ಮೀರಿತ್ತು. ಮತ್ತು ತಪ್ಪು ತಿಳುವಳಿಕೆಯದ್ದಾಗಿತ್ತು. ಇಡೀ ಜಿಲ್ಲೆ ಯಾವುದೇ ಕಾಲದಲ್ಲಿ ಕೇಳದಷ್ಟು ದೊಡ್ಡ ಮೊತ್ತದ ರಿಯಾಯಿತಿಯನ್ನು ಈ ಪರಿಸ್ಥಿತಿಯ ಕೆನರಾದಲ್ಲಿ ಕೊಡಲಾಯಿತು. ಈ ಬೇಡಿಕೆಯು ಬಂಡಾಯದ ಸ್ವರೂಪದಲ್ಲಿ ಇಡೀ ಜಿಲ್ಲೆಯಲ್ಲಿದ್ದಿತು. ಈ ತರದ ರಿಯಾಯಿತಿಯ ಕೆಟ್ಟ ಪರಿಣಾಮ ಕೂಡಲೇ ಉಂಟಾಗುತ್ತದೆ. ತಿಳುವಳಿಕೆ ಇಲ್ಲದ ಸ್ವಾರ್ಥಿ ಜನರಿಗೆ ಮುಂದಿನ ದಿನಗಳಲ್ಲಿ ಇದೊಂದು ಅನುಕರಿಸಬಹುದಾದ ಉದಾಹರಣೆಯಾಗದೆ ಉಳಿಯುವುದಿಲ್ಲ. ಆ ಕಾಲದ ಘಟನೆಯ ಪ್ರಭಾವದಿಂದ ಸರಕಾರದ ವಿರುದ್ಧ ನಿಲ್ಲಲು, ಪ್ರೋತ್ಸಾಹ ನೀಡುವುದಾದರೆ, ಮುಂದೆ ಕಂಡಂತಹ ನಡವಳಿಕೆ ಜನರ ಪ್ರೀತಿಯನ್ನು

ಗಳಿಸುವಂತದ್ದು. ಜಿಲ್ಲೆಯ ಕಂದಾಯ ನಿರ್ವಹಣೆಯಲ್ಲಿನ ಬದಲಾವಣೆಯನ್ನು ಸೇರಿಸಬೇಕಾಗಿದೆ. ಸರಕಾರದ ನಿರ್ಲಕ್ಷ್ಯಕ್ಕೆ ಒಳಗಾಗಿದ್ದ ಕೆಲವು ವಿಚಾರಗಳು - ಹಬ್ಬಗಳಿಗೆ ಸಾಲ ಕೊಡುವ ಪದ್ಧತಿ, ಗೋಪುರಗಳನ್ನು ದುರಸ್ತಿ ಮಾಡುವುದು - ಬದಲಾದ ಆರ್ಥಿಕ ಸುಧಾರಣೆಯಲ್ಲಿ ಪ್ರಮುಖವಾದದ್ದು - ಇದುವರೆಗೆ ಜನರಿಗೆ ಗೊತ್ತೇ ಇಲ್ಲದಂತದ್ದು.

ಸರಕಾರವು ಪ್ರಾಂತ್ಯದ ಉತ್ಪತ್ತಿಯ ಬಗ್ಗೆ ಸಾಕಷ್ಟು ಮಾಹಿತಿ ಗಳಿಸಿಕೊಂಡಿರುವುದರಿಂದ, ಹಿಂದಿನ ಸರಕಾರದ ತಪ್ಪುಗಳನ್ನು ಮುಂದುವರಿಸದೆ ಸರಿಯಾದ ನಿಶ್ಚಿತ ಭೂಕಂದಾಯ ನಿಗದಿಪಡಿಸುವುದು ಅಗತ್ಯವಾಗುತ್ತದೆ. (ಅದು ಈವರೆಗೆ ಪ್ರಭಾವ ಬೀರುತ್ತಿದ್ದ ವಾರ್ಷಿಕ ಕೂಲಿಯ ಬದಲಾವಣೆ ಮತ್ತು ಗೊಂದಲದ ತತ್ವವನ್ನು ಬದಿಗಿರಿಸಿ ನಿರ್ಣಯಿಸಿದ ಮೊತ್ತ.) ಸರಕಾರದ ತಗಾದೆಯು ಬರಿ ನಿಗದಿತ ಮತ್ತು ನ್ಯಾಯೋಕ್ತ ಮೊಬಲಗು ಆಗಿರಬೇಕು. ಕಂದಾಯವು ಭೂಮಿಯ ವಿಸ್ತೀರ್ಣ ಮತ್ತು ಅದರಿಂದ ಬರುವ ಸಂದೇಹರಹಿತ ಲಾಭಗಳಿಗೆ ಅನುಗುಣವಾಗಿ ನಿಶ್ಚಯಿಸಲ್ಪಡಬೇಕು.

ಈ ವರೆಗಿನಂತೆ ವಾರ್ಷಿಕ ತೀರ್ವೆಯ ತನಿಖೆಯನ್ನು ಇನ್ನು ಮುಂದೆ ಮಾಡದೆ ಕಂದಾಯದ ತತ್ವವನ್ನು ಅನುಸರಿಸುತ್ತಾ ಹಿಡುವಳಿಗೆ ನಿಗದಿಪಡಿಸಿದ ಕಂದಾಯದ ಮೊಬಲಗನ್ನು ಹೆಚ್ಚಿಸಬೇಕಾದಲ್ಲಿ ಅದಕ್ಕೆ ಕಾಲಾವಧಿ ಕಂತುಗಳನ್ನು ನಿಶ್ಚಯಿಸಬೇಕು. ತನಿಖೆ ಮತ್ತು ಅನುಭವಗಳಿಂದ ಯಾರ ಸಾಮರ್ಥ್ಯಕ್ಕೆ ಕಂದಾಯ ಹೆಚ್ಚಾಗಿದ್ದರೆ ಅದಕ್ಕೆ ಅನುಗುಣವಾಗಿ ಇಳಿಸಬೇಕು.

ಈ ರೀತಿಯ ವ್ಯವಸ್ಥೆಯಿಂದ ಕೆನರಾ ಜಿಲ್ಲೆಯ ರೈತನು ಹಿಂದಿನದರೊಂದಿಗೆ ಹೋಲಿಸಿ ಎಂತಹ ದುಸ್ಥಿತಿಗೆ ಬಂದಿದೆ ಎಂದು ತಿಳಿಯುತ್ತಾನೆ. ಈ ತನಕ ಹುಜೂರ್ ಜಮಾಬಂದಿಯ ಮುಂದೆ ತನ್ನ ಬೇಡಿಕೆಯನ್ನು ಮುಂದಿಡುವ ಸೌಲಭ್ಯ ಇನ್ನು ಮುಂದೆ ಇಲ್ಲವಾಗುತ್ತದೆ. ದೂರು ಕೊಟ್ಟು ತನ್ನ ಹಕ್ಕು ಎನ್ನುವಂತೆ ರಿಯಾಯಿತಿಗಾಗಿ ಬೆಳೆ ಮತ್ತು ವ್ಯವಸಾಯ ವೆಚ್ಚಗಳಿಗೆ ಅನುಗುಣವಾಗಿ ಕಂದಾಯ ನಿರ್ಧರಿಸಲ್ಪಡುತ್ತದೆಂದು ಹಿಂದಿನಂತೆಯೇ ರೈತನ ತಲೆಗೆ ಹೊಕ್ಕಿದೆ. ಅದನ್ನು ಕೊನೆಗೊಳಿಸಿ, ಹೊಸ ವಿಧಾನದಿಂದ ಸಂಕ್ಷಿಪ್ತಗೊಳಿಸಲಾಗಿದೆ ಎಂದು ಆತನಿಗೆ ಭರವಸೆ ಕೊಡಬೇಕಾಗಿದೆ. ಕಾರ್ಯಗತಗೊಳಿಸಲು ಸಾಧ್ಯವಾಗದಂತಹ ಮತ್ತು ಅತೃಪ್ತಿಗಳಿಂದ ಕೊನೆಗೊಳ್ಳುವಂತಹ, ಅಲ್ಲದೆ ಇಂತಹ ಫಲಿತಾಂಶಗಳನ್ನುಂಟುಮಾಡುವ ಈ ವ್ಯವಸ್ಥೆ ಇಷ್ಟು ದಿನ ಮುಂದುವರಿದುದು ಹೇಗೆ ಎನ್ನುವುದು ಗೊತ್ತಾಗುವುದಿಲ್ಲ. ಯಾಕೆಂದರೆ ಹತ್ತಿರದ ಮಲಬಾರ ಜಿಲ್ಲೆಯಲ್ಲಿ ಕಂದಾಯ ಹೆಚ್ಚಿಗೆ ಇದ್ದೂ ಅವರ ಇತ್ತೀಚಿನ ಭೂ ತೀರ್ವೆಯ ಮೂಲ ಖಚಿತವಾಗಿ ವಿವರಿಸಲ್ಪಟ್ಟಿಲ್ಲ. ಆದುದರಿಂದ ಸೂಕ್ಷ್ಮವಾದ ವಾರ್ಷಿಕ ತನಿಖೆಯ ಆವಶ್ಯಕತೆಯನ್ನು ಸೂಚಿಸಲು ಕಾರಣವಾಗಬಹುದು.

| ತಾಲೂಕು | ದೇವದ್ಯಂ ಸೇರಿ 1239ರ ಫಸ್ಲಿ ಜಮಾಬಂದಿ | | | ದೇವದ್ಯಂ ಸೇರಿ 1240ರ ಫಸ್ಲಿ ಜಮಾಬಂದಿ | | | ಏರಿಕೆ | | | ಖೋತಾ | | |
|---|---|---|---|---|---|---|---|---|---|---|---|---|
| | ರೂ. | ಆಣೆ | ಪೈ | ರೂ. | ಆಣೆ | ಪೈ | ರೂ. | ಆಣೆ | ಪೈ | ರೂ. | ಆಣೆ | ಪೈ |
| ಮಂಗಳೂರು | 214966 | 9 | 2 | 150435 | 2 | 11 | | | | 64531 | 6 | 3 |
| ಬೇಕಲ್ | 202384 | 10 | 5 | 171937 | 8 | 7 | | | | 30447 | 1 | 10 |
| ಬಂಟ್ವಾಳ | 187290 | 11 | 2 | 155524 | 2 | 11 | | | | 31766 | 8 | 3 |
| ಬಾರ್ಕೂರ್ | 330499 | 2 | 0 | 301329 | 0 | 5 | | | | 29170 | 1 | 7 |
| ಕುಂದಾಪುರ | 215211 | 15 | 4 | 196149 | 2 | 2 | | | | 19062 | 13 | 2 |
| ಹೊನ್ನಾವರ | 164392 | 14 | 0 | 153515 | 7 | 0 | | | | 10877 | 7 | 0 |
| ಅಂಕೋಲ | 103392 | 5 | 5 | 102411 | 13 | 5 | | | | 1227 | 8 | 0 |
| ಸೂಪ | 71299 | 12 | 0 | 69701 | 13 | 2 | | | | 1597 | 14 | 10 |
| ಸೊಂದೆ | 116953 | 12 | 5 | 118453 | 6 | 10 | 1499 | 10 | 5 | | | |
| ಬಿಳ್ಗಿ | 49426 | 10 | 0 | 49368 | 1 | 2 | | | | 58 | 8 | 10 |
| ಜುಮ್ಲಾ | 1656065 | 5 | 11 | 1468825 | 10 | 7 | 1499 | 10 | 5 | 187239 | 11 | 4 |

ನನ್ನ ಈ ಪತ್ರದಲ್ಲಿ ಹೇಳಿರುವ ಕಂದಾಯ ರಿಯಾಯಿತಿ ವಿಚಾರ ಎಷ್ಟು ಸರಿಯೆಂಬ ತೀರ್ಮಾನಕ್ಕೆ ಬರಲು ಕಮೀಶನರಿಗೆ ಅನುಕೂಲವಾಗಲು ಈ ಕೆಳಗಿನ ತಾಲೂಕುವಾರು ವಿತರಣೆ ವಿವರಣೆಗಳನ್ನೊಳಗೊಂಡ ತಖ್ತೆಯನ್ನು ತಮ್ಮ ಮುಂದಿಡುತ್ತಿದ್ದೇವೆ.

ವಿನಾಯಿತಿಯು ಎಲ್ಲಿ ಅಗತ್ಯವಿತ್ತೋ ಅಲ್ಲಿ ಕೊಟ್ಟಿಲ್ಲ, ಎಲ್ಲಿ ಕೊಡುವ ಅಗತ್ಯವೇ ಇರಲಿಲ್ಲವೋ ಅಲ್ಲಿ ಧಾರಾಳವಾಗಿ ಕೊಡಲಾಗಿದೆ, ಎಂಬುದನ್ನು ಇದು ತೋರಿಸುತ್ತದೆ.

ಹೊಸ ಪದ್ಧತಿಯು ಎಂತಹ ಭಾವನೆಗಳನ್ನು ಹುಟ್ಟಿಸಬಹುದೆನ್ನುವ ತೀರ್ಮಾನಕ್ಕೆ ಬರಲು ಕೆಲವೊಂದು ವಿಚಾರಗಳನ್ನು ಗಮನಿಸಬೇಕು. ಈ ಮೊದಲು ರೈತರ ಆವಶ್ಯಕತೆಯನ್ನು ಮಾತ್ರ ಲಕ್ಷ್ಯದಲ್ಲಿಡಲಾಗುತ್ತಿತ್ತು. ಬಹಳ ಉದಾರತೆಯ ಪದ್ಧತಿಯ ನಂತರ ಹೊಸ ಪದ್ಧತಿ ಬಂದಿದೆ. ಇದು ಈ ಹಿಂದೆ ಕೆನರಾ ಜಿಲ್ಲೆ ಕಂಡರಿಯದ ಕಠಿಣ ರೀತಿಯ ವಸೂಲಿಯ ಉತ್ಸಾಹವನ್ನು ಹೊಂದಿದೆ. ಇದರಲ್ಲಿ ರಿಯಾಯಿತಿಯನ್ನು ಹಳೆ ಅನುಭವದಿಂದ ಕೊಡಲಾಗುತ್ತಿಲ್ಲ. ಈ ಹೊಸ ಪದ್ಧತಿಗೆ ಕಾರಣ ರೈತರಿಗೆ ಅನುಕೂಲವಾಗುವುದಾಗಲಿ, ಅವರ ಸಮ್ಮತಿಯನ್ನು ಪಡೆಯುವುದಾಗಲೀ ಇದರಲ್ಲಿ ಇಲ್ಲ. ಈಗಿನ ಅನುಕೂಲತೆಗೆ ಹಿಂದಿನದನ್ನು ಕೈಬಿಟ್ಟು ಮುಂದೆ ಆತ ಯಾವುದಕ್ಕಾಗಿ ತೊಡಗಿಸಲ್ಪಟ್ಟಿದ್ದಾನೆಂಬ ನಿರೀಕ್ಷೆಯನ್ನು ಭರವಸೆಯನ್ನು ಕೊಡಲಾಗಿದೆ. ಕಂದಾಯಕ್ಕೆ ಸಂಬಂಧಪಟ್ಟಂತೆ, ಕೆನರಾಕ್ಕೆ ಅಭ್ಯಾಸವಿಲ್ಲದಂತಹ ಈ ನಿಶ್ಚಿತವಾದ ತತ್ವಕ್ಕೆ ಜನರ ಸ್ವೀಕೃತಿಯನ್ನು ಕೂಡಲೇ ಪಡಕೊಳ್ಳಬೇಕಾಗಿದೆ.

ಇದರ ಪ್ರಾಥಮಿಕ ಪರಿಣಾಮವಾಗಿ ಕಂದಾಯ ಹೆಚ್ಚಳ - ಈ ಹಿಂದೆ ಯಾವತ್ತು ಸರಕಾರದ ಕೇಳಿಕೆ ಸಂಪೂರ್ಣವಾಗಿ ವಸೂಲಾಗದೆ ಇದ್ದದ್ದು ಈಗ ಪೂರ್ಣ ಪಾವತಿಯಾದದ್ದು. ಇನ್ನು ಕೆಲವು, ಒಂದು ಸಲ ಪಾವತಿಸಿದ ಕಂದಾಯಕ್ಕೆ ಹೇರಿಸಲ್ಪಟ್ಟ ಒಂದಂಶ, ಅದು ಬಾಕಿಯಾಗಿಯೇ ತಪ್ಪಿಸಿಕೊಳ್ಳಬಹುದೆಂದು ಭಾವಿಸಿದ್ದದ್ದು (ಹಲವು ವರ್ಷಗಳಿಂದ ತಪ್ಪಿಸಿಕೊಂಡದ್ದು ಮತ್ತು ಹೆಚ್ಚಿನ ಕಂದಾಯಕ್ಕೆ ಸಾಕ್ಷಿಯಾಗಿ ಸ್ವೀಕರಿಸಲ್ಪಟ್ಟದ್ದು) ಶಾಶ್ವತವಾದ ಸ್ಥಳೀಯರಿಂದಾಗಿ ಒಂದೇ ಪ್ರಮಾಣದ ಉತ್ಪಾದನಾ ಶಕ್ತಿಯಿಂದ ಕಂದಾಯವನ್ನು ಭರಿಸಲು ಸಾಧ್ಯವಾಗದ ಹಿಡುವಳಿಗಳಿಗೆ ಮಾತ್ರ ಇದರಿಂದ ತೊಂದರೆಗಳಾಗಿಲ್ಲ.

ಇಡೀ ಜಿಲ್ಲೆಯ ವಿಸ್ತೀರ್ಣದೊಳಗೆ ಹೆಚ್ಚಿನ ಸಂಖ್ಯೆಯ ಎಲ್ಲಾ ಕೆಲಸ ಒಮ್ಮಿಂದೊಮ್ಮೆ ಸರಿಯಾಗಬೇಕು. ತಪ್ಪುಗಳಾಗಬಾರದೆಂದು ಅಪೇಕ್ಷಿಸುವುದು ಸರಿಯಲ್ಲ. ಇದರಲ್ಲಿ ಸಾಕಷ್ಟು ಸಂಖ್ಯೆಯವು ಕಂದಾಯ ಸಮಿತಿ ಮತ್ತು ಸರಕಾರದ ಗಮನವನ್ನು

ಸೆಳೆಯುತ್ತವೆ ಮತ್ತು ಹಿಂದಿನ ಜಮಾಬಂದಿ ಇದಕ್ಕೆ ಸೇರಿಸಿದ್ದನ್ನು ತೋರಿಸುತ್ತದೆ. ಕೆಲವೊಂದು ಹಿಡುವಳಿಗಳ ಗೇಣಿ ನಿಗದಿಪಡಿಸಿದ ಮೊತ್ತಕ್ಕಿಂತ ಕಡಿಮೆ ಇದೆ. ಸರಕಾರದ ಅಧಿಕಾರಿಗಳು ತನಿಖೆಯನ್ನು ಸರಿಯಾಗಿ ಮಾಡಿಲ್ಲವೆಂಬ ಆಪಾದನೆ ಇದೆ ಎಂಬುದನ್ನು ನಾನು ತಿಳಿದಿದ್ದೇನೆ. ಆದರೆ ಇದನ್ನು ಎಷ್ಟು ಮಾತ್ರಕ್ಕೂ ನಂಬುವುದಿಲ್ಲ. ಕೆನರಾದಲ್ಲಿ ಪರಂಪರಾಗತವಾಗಿದ್ದದ್ದು ಎಲ್ಲಾ ಲೆಕ್ಕಾಚಾರಗಳನ್ನು ತಪ್ಪಾಗಿಸಬಹುದು. ರೈತನು ತನ್ನ ಹಿತಕ್ಕೆ ವಿರುದ್ಧವೆಂದು ಭಾವಿಸುತ್ತಾ, ಹೊಸ ವಿಧಾನಕ್ಕೆ ಒಂದಿಷ್ಟು ತೊಡಗಿಸಿಕೊಳ್ಳಬಾರದೆಂದು ನಿಶ್ಚಯಿಸಿಕೊಂಡು, ಬದಲಾವಣೆ ಇಲ್ಲದೆ ಮುಂದುವರಿಯಬೇಕೆಂದು ಬಯಸುವುದು, ನನ್ನ ಅಭಿಪ್ರಾಯದಂತೆ ಸಾಕಷ್ಟು ಪ್ರಭಾವ ಬೀರಿದೆ.

ಇತರ ಜಿಲ್ಲೆಗಳನ್ನು ಹೋಲಿಸಿದಾಗ ಈ ಜಿಲ್ಲೆಯ ವಾರ್ಷಿಕ ಕಂದಾಯ ಬಹಳ ಸರಿಯಾಗಿದೆ. ಸರಕಾರದ ಬೇಡಿಕೆಯನ್ನು ಕೊಡುವುದಕ್ಕೆ ಖಾಸಗಿ ಗೇಣಿ ಸಾಕಷ್ಟು ಸಮರ್ಥನೀಯವಾಗಿದೆ ಎಂಬ ಸರಿಯಾದ ತಿಳುವಳಿಕೆ ಪ್ರಜೆಗಳಿಗೆ ಇರಬೇಕು. ಇದನ್ನು ಸಣ್ಣ ಹಿಡುವಳಿಗಳಲ್ಲಿ ನಾನು ಕಂಡಿದ್ದೇನೆ. ಇವುಗಳು ಹೆಚ್ಚಾಗಿ ರೈತನ ಜೀವನ ನಿರ್ವಹಣೆಗೆ ಸಾಕಾಗುವಷ್ಟು ಇರುತ್ತವೆ. ಕಡಿಮೆ ಬೀಳುವುದನ್ನು ಭರ್ತಿ ಮಾಡಲು ಬೇರೆ ಸಂಪನ್ಮೂಲ ಇರುವುದಿಲ್ಲ. ಇಂತಹ ಸಂದರ್ಭದಲ್ಲಿ ಹಿಡುವಳಿಯ ರಿಯಾಯಿತಿ ಮತ್ತು ಪರಾಭಾರೆಗೆ ಮಧ್ಯವರ್ತಿಗಳಿಲ್ಲ. ಕೆನರಾದಲ್ಲಿ ಗೇಣಿ ನಿಶ್ಚಯಿಸಿದ್ದರ ಪರಿಣಾಮ ಇದೆಂದು ಕಾಣುತ್ತದೆ. ಇದನ್ನು ಕಾರ್ಯಗತಗೊಳಿಸಿದರೆ ಬಹಳಷ್ಟು ಮಂದಿ ಹಿಂದಿನ ಕಾಲದ ಮೂಲಗಾರರು ಅವರ ಹಿಡುವಳಿಯನ್ನು ಕಳೆದುಕೊಂಡು ಗೇಣಿ ಒಕ್ಕಲುಗಳಾಗಲು ಹೆಚ್ಚು ಕಾಲ ಬೇಕಾಗಲಾರದು. ಇದುವರೆಗೆ ಈ ಜಮೀನ್ದಾರರು ತಮ್ಮ ಭೂಮಿಯನ್ನು ಹೆಚ್ಚು ಸಮರ್ಥರಾದ ಮಿತವ್ಯಯದವರಿಗೆ ಕೊಟ್ಟು ಊರಿಗೆ ಉಪಕಾರವಾಗುವಂತೆ ಮಾಡುತ್ತಿದ್ದರು. ಇದು ಈಗಾಗಲೇ ಮಲಬಾರಿನ ಅನುಭವ. ಸ್ವಲ್ಪ ಮಟ್ಟಿಗೆ ಕೆನರಾದ್ದು ಕೂಡಾ. ಬಹುಸಂಖ್ಯಾತರಲ್ಲಿ ನಿರ್ಲಕ್ಷದಿಂದ ಕೈಗಾರಿಕೆಯನ್ನು ಮತ್ತು ಶಕ್ತಿಯನ್ನು ಪ್ರಗತಿಗೆ ಮಾರಕವಾಗಿಸುವ ಅಭ್ಯಾಸ ಕಾಣಿಸಿಕೊಂಡಿದೆ. ಪ್ರಾಯಶಃ ಕೆನರಾಕ್ಕೆ ಕ್ರಿಶ್ಚಿಯನ್ನರು ಹೇಗೋ, ಮಲಬಾರಿನಲ್ಲಿ ಈಚಿನ ವರ್ಷಗಳಲ್ಲಿ ಮಾಪಿಳ್ಳೆಯವರು ಹಾಗೆಯೆ. ಅವರು ಹೆಚ್ಚಿನ ಚಟುವಟಿಕೆಯಿಂದ ಪ್ರಾಮುಖ್ಯತೆ ಗಳಿಸಿದ್ದಾರೆ, ಮತ್ತು ರಾಜ್ಯದ ಸಂಪತ್ತಿನ ಸಂಗ್ರಹವನ್ನು ಹೆಚ್ಚಿಸುವ ಸ್ವಸಾಮರ್ಥ್ಯವನ್ನು ಹೊಂದಿ ಇತರರಿಗಿಂತ ಈ ಜನಾಂಗಕ್ಕೆ ಸೇರಿದವರು ಮೇಲು ಎಂಬುದನ್ನು ಸಾಬೀತುಪಡಿಸಿದ್ದಾರೆ.

ಇತ್ತೀಚಿನ ವರ್ಷಗಳವರೆಗೆ, ಕೆನರಾದಲ್ಲಿ ಭೂಮಿಯ ವ್ಯವಸಾಯದಲ್ಲಿನ ಊಹಾಪೋಹೆಗಳು ಸ್ವಲ್ಪವೂ ತಿಳಿದಿರಲಿಲ್ಲ. ಹಿಂದೆ ಅನಾದಿ ಕಾಲದಿಂದ, ಸರಕಾರದೊಂದಿಗೆ ರೈತನು ದ್ವೇಷ ಭಾವನೆಯಿಂದ ಬಂಧಿತನಾಗಿದ್ದು, ವಾಣಿಜ್ಯ ತತ್ವವೆಂಬ ಕಂಪನವನ್ನು ಹೊಂದಿದ್ದಕ್ಕೆ ವಿರುದ್ಧವಾದ ಭಾವನೆಯನ್ನು ಮುಂದುವರಿಸಿದ್ದನು.

ಈಗಿನಂತಹ ತತ್ವವು ಮೊದಲೇ ಕೆನರಾದಲ್ಲಿ ಜಾರಿಯಲ್ಲಿರುವಂತಿದ್ದರೆ, ಪ್ರಾಯಶಃ ಈಗಾಗಲೇ ಒಂದಂಶ ಪ್ರಗತಿಯನ್ನು ಅನುಭವಿಸಬಹುದಾಗಿತ್ತು ಮತ್ತು ಬಹಳ ವರ್ಷಗಳಿಂದ ಅತೃಪ್ತಿಗೆ ಕಾರಣವಾಗಿರುವ ಕಳವಳಗೊಳಿಸುವ ಅನುಮಾನ ಮತ್ತು ತೊಂದರೆಗಳಿಂದ ಕೂಡಿದ ಭೂಕಂದಾಯ ಪದ್ಧತಿಯನ್ನು ಬಹಳ ಹಿಂದೆಯೇ ಕೈಬಿಡಬಹುದಾಗಿತ್ತು. ವಾಡಿಕೆಯ ಋತುಕಾಲಗಳು ಮತ್ತು ಪೇಟೆಧಾರಣೆ, ಒಂದಷ್ಟು ಜನಸಂಖ್ಯೆಗೆ ಭೂಕಂದಾಯದ ನಿಜವಾದ ಬೆಲೆ, ಅದಕ್ಕೆ ಸಾಧ್ಯವಾಗುವಂತೆ ಹೊಂದಿಕೊಳ್ಳಬಲ್ಲ ಸರಕಾರದ ಗೇಣಿ, ಎಲ್ಲಾ ಸರಕಾರಗಳು ಹೆಚ್ಚು ಕಡಿಮೆ ಕೈಗೊಳ್ಳುವ ಮತ್ತು ತೆಗೆದುಕೊಳ್ಳಬಹುದಾದ ನಿಯಮ. ಈ ತನಿಖೆಯ ಸಮಯದಲ್ಲಿಯ ವಿಚಾರವಾಗುವುದಿಲ್ಲ. ಮೂಲಗಾರನು ಹಿಡುವಳಿಯಲ್ಲಿ ಹೊಂದಿರುವ ಅಧಿಕಾರ ಸ್ಥಿತಿಯನ್ನು ಪರಾಭಾರೆ ಮಾಡಲ್ಪಟ್ಟಿದ್ದು, ಸರಕಾರದ ಸಹಾಯ ಆತನಿಗೆ ಕೊಡಲ್ಪಟ್ಟಿದೆ. ಅವನಲ್ಲಿ ಭದ್ರತೆ ಕಳೆದುಕೊಂಡ ಭಾವನೆಯುಂಟಾದಾಗ, ಪ್ರತಿಯೊಂದು ಗಣಿಸಲ್ಪಟ್ಟು ಆತಂಕ ಹುಟ್ಟಿಸಲು ಕಾರಣವಾಗುತ್ತದೆ. ಆಗ ಮುನ್ನೆಚ್ಚರಿಕೆ ಇಲ್ಲದೆ ಪ್ರವಹಿಸುವುದಕ್ಕೆ ಪ್ರೋತ್ಸಾಹ ಕೊಟ್ಟಂತೆ ಆಗುತ್ತದೆ. ಈಗ ಅಥವಾ ಮುಂದೆ ಆಗಲೇಬೇಕಾಗಿದ್ದ ಸಾಮಾನ್ಯ ಪ್ರಗತಿಗೆ ಆತನನ್ನು ಸುಲಭವಾಗಿ ಬಲಿಪಶುವನ್ನಾಗಿಸಿದಂತಾಗುತ್ತದೆ.

ರೈತನು ಧೃತಿಗುಂದಿದ ಪರಿಣಾಮವನ್ನು ಹೊಂದಿರುವ ಕಾರಣ ಹಿಡುವಳಿಯ ಪರಿಪೂರ್ಣ ಬೆಳವಣಿಗೆ ಸಾಧ್ಯವಾಗಲಿಲ್ಲ. ಕೂಲಿಗಾರರ ಶ್ರಮಕ್ಕೆ ತಕ್ಕದಾದ ಲಾಭವನ್ನು ಗಳಿಸುವುದು ಸಾಧ್ಯವಾಗಲಿಲ್ಲ. ಇದು ಇಡೀ ದೇಶದ ವೆಚ್ಚದಲ್ಲಿ ನಿರ್ವಹಿಸಲ್ಪಟ್ಟ ವಿಚಾರವಾಗಿದೆ. ಆದರೆ ಇದರ ಲಾಭವನ್ನು ಪಡೆದದ್ದು ವ್ಯಾಪಾರಸ್ಥರ ಒಂದು ಸಮುದಾಯ. ಇವರು ವ್ಯವಹಾರದಲ್ಲಿ ರೈತನೊಂದಿಗೆ ನೇರವಾಗಿ ಅಥವಾ ಸರಕಾರದ ಪ್ರತಿನಿಧಿಯಾಗಿ ಆತನನ್ನು ಗುಲಾಮಗಿರಿಯಲ್ಲಿ ಇರುವಂತೆ ಮಾಡಿ, ಕ್ರಮೇಣ ಆತನ ನಾಶಕ್ಕೆ ಕಾರಣರಾದ ಹಲವು ಸಂದರ್ಭಗಳಿವೆ. ಈಗ ಕೆನರಾದಲ್ಲಿ ಸಾರ್ವಜನಿಕರ ಮನಸ್ಸು ಉದ್ರೇಕಗೊಳ್ಳುವುದಕ್ಕೆ ಪ್ರಾಮುಖ್ಯ ಮೂಲಕಾರಣ ಇದೆಂದು ನಾನು ಭಾವಿಸಲು ಯಾವುದೇ ಸಂಶಯ ಇಲ್ಲ. ರೈತನ ಪರಿಸ್ಥಿತಿಯಲ್ಲಿ ನಾಗರಿಕತೆಯಿಂದ ಪ್ರಭಾವಿತವಾದ ಆಚರಣೆಗೆ ಹೊರತಾಗಿರುವ, ಒರಟುತನದ ವರ್ತನೆಯು ಸಾಮಾನ್ಯವಾಗಿ ನೇರ ಮತ್ತು ಮುಕ್ತವಾದ ತತ್ವಗಳ ಮೂಲಕ ಪರಿಹರಿಸಲು ಖಂಡಿತವಾಗಿ ಸಾಧ್ಯವಿಲ್ಲದ್ದಾಗಿದೆ. ಕೆನರಾದ ಹಿಡುವಳಿದಾರನ ಸ್ವಭಾವವನ್ನು ಇಲ್ಲಿ ನೋಡುವ ಅಗತ್ಯ ಇದೆ. ದೇಶದ ಪ್ರಗತಿಗೆ ಆವಶ್ಯ ಆದ್ಯತೆಯನ್ನಿತ್ತು, ನಂತರ ಬದಲಾವಣೆಯ ಪ್ರಭಾವದ ಫಲಿತಾಂಶವನ್ನು ಯೋಚಿಸಬೇಕಿತ್ತು.

ಜಿಲ್ಲೆಯಲ್ಲಿರುವ ಒಟ್ಟು ಹಿಡುವಳಿಗಳಲ್ಲಿ ಶೇಕಡಾ ಹತ್ತರಷ್ಟು ಕಳೆದ ೨೫ ವರ್ಷಗಳಲ್ಲಿ ಕೈಬದಲಾಯಿಸಲ್ಪಟ್ಟಿವೆ. ಹೀಗೆ ಹೇಳಲ್ಪಟ್ಟ ಸಂಖ್ಯೆ, ನಾನು ತಿಳಿದಂತೆ

ನಿಜವಾಗಿಯೂ ಇದಕ್ಕಿಂತ ಹೆಚ್ಚು ಇರಬೇಕು. ಇದರ ಕಾರ್ಯವಿಧಾನ ಸಾಕಷ್ಟು ವಿಸ್ತಾರವಾದ ವ್ಯಾಪ್ತಿಯನ್ನು ಹೊಂದಿದೆ. ಇದು ಕೆನರಾದ ರೈತನಲ್ಲಿ ಬಲವಾದ ಜಾಗತಿಕ ಪೂರ್ವ ಶಂಕೆಯನ್ನುಂಟುಮಾಡುತ್ತದೆ. ಅಡಮಾನದ ಕೈಯಲ್ಲಿ ಸೇರಿರುವುದರ ಮತ್ತು ಬೇರೆ ರೀತಿ ವ್ಯವಹಾರದಲ್ಲಿ ಸಿಲುಕಿಕೊಂಡಿರುವುದರ ಸಂಖ್ಯೆ ರೈತರ ಆಪಾದನೆ ಎಷ್ಟು ವಿಚಾರಹೀನವೆಂದು ಹೇಳಿದರೂ ಕೂಡಾ ಸಾಕಷ್ಟು ಪ್ರಮಾಣದಲ್ಲಿ ಇದೆ, ಎನ್ನುವುದನ್ನು ಧಾರಾಳವಾಗಿ ಸೂಚಿಸುತ್ತದೆ.

ಹೀಗಿದ್ದಾಗಿಯೂ ರೈತನ ಅವನತಿಗೆ ಕಾರಣವೆಂದು ನಾನು ಆರಿಸಿಕೊಂಡಂತಹ ವಿಚಾರ ಕೆಲಸ ಮಾಡಿದ್ದು ಮಾತ್ರ ಅಲ್ಲದೆ, ಗೇಣಿ ನಿಗದಿಪಡಿಸಿದ್ದು ಇನ್ನೂ ಹೆಚ್ಚಿನ ಪ್ರಭಾವ ಬೀರಿರಬಹುದು. ತಮ್ಮ ಸಮ್ಮತಕ್ಕೆ ಅವಕಾಶವಿಲ್ಲದೆ ಇಚ್ಛಾನುಸಾರ ಹೆಚ್ಚಿಸುವುದಕ್ಕೆ ನಾವು ಒಳಗಾಗಬಾರದು. ಸಾಮಾನ್ಯ ಲಾಭ ತಂದರೂ ಅದರೊಂದಿಗೆ ಹೆಚ್ಚು ಭದ್ರತೆಯಿರುವ, ಸಮಾಜದಲ್ಲಿ ವೈಯಕ್ತಿಕ ಪ್ರಾಮುಖ್ಯತೆ ತರಬಲ್ಲಂತಹ ಆಸ್ತಿ ಮೇಲೆ ದುಡ್ಡಿದ್ದ ಜನರು ಬಂಡವಾಳ ಹಾಕತೊಡಗಿದ್ದರು.

ಇತ್ತೀಚಿನ ಪಕ್ಷಪಾತದ ಕಾರಣದಿಂದಾಗಿ ಅಡಮಾನದಲ್ಲಿರುವ ಹಿಡುವಳಿಗಳಲ್ಲಿ ಬಹು ಪಾಲಿನಷ್ಟು ಹಿಂತಿರುಗಿಸಲ್ಪಡುವುದಿಲ್ಲ. ಭೂ ಜವಾಬ್ದಾರಿ ಮೇಲೆ ಕೆಲವು ಸಾಲಗಳು ಆಗುತ್ತವೆ. ಇದರಲ್ಲಿ ಸಾಲ ಕೊಡುವವನಿಗೆ ಶಾಶ್ವತವಾಗಿ ಸಂಪೂರ್ಣ ಸ್ವಾಧೀನಮಾಡಿಕೊಳ್ಳಬೇಕೆಂದು ಇರಾದೆ ಇರುವುದಿಲ್ಲ. ಆನಂತರ ರೈತ ಮತ್ತು ವ್ಯಾಪಾರಸ್ಥರ ನಡುವೆ ಕೆಲವು ಲೆಕ್ಕಾಚಾರದ ಹೊಂದಾಣಿಕೆ ಇರುತ್ತದೆ. ಹೀಗೆ ಆತನ ಭೂಮಿ ಗಂಡಾಂತರಕ್ಕೆ ಸಿಲುಕುವುದಿಲ್ಲ.

ಕೋರ್ಟು ತೀರ್ಪಿನ ಪ್ರಕಾರ ಹೆಚ್ಚಾಗಿ ಭೂಮಿ ವಿಕ್ರಯಿಸಲ್ಪಡುವುದಿಲ್ಲವೆಂದು ಮಿ. ಸ್ಟೂಕ್ಸ್‌ರವರ (ಕೆನರಾದ ಜಿಲ್ಲಾ ನ್ಯಾಯಾಧೀಶರ ಉಲ್ಲೇಖನಗಳಲ್ಲಿ ಒಂದು ಹೇಳಿಕೆಯು) ರೈತನ ಪ್ರಬಲವಾದ ಭ್ರಾಮಕ ಪರೀಕ್ಷೆಯೆಂದು ನನಗೆ ಅನ್ನಿಸುತ್ತದೆ. ಒಂದು ಸಾಲ ಇನ್ನೊಂದನ್ನು ಅಳಿಸುತ್ತಾ ಅವರಲ್ಲಿಹೆಚ್ಚಾಗಿ ಕೊನೆಯದನ್ನು ಮುಗಿಸುವುದು ಮೊದಲನೆಯದಕ್ಕಿಂತ ಒಳಿತನ್ನುಂಟುಮಾಡುವುದರಿಂದ ಪ್ರಾಯಶಃ ಆತನಿಗೆ ಅದು ಉತ್ತಮವಾಗಬಹುದು. ಒಂದೇ ಫಲಿತಾಂಶದಲ್ಲಿ ಸಾಲ ಕೊನೆಗೊಳ್ಳುತ್ತದೆ.

ಮುಂದುವರಿದ ಪಾರಾಗಳಲ್ಲಿ ಕೆನರಾದ ರೈತರು ಸರಕಾರದ ಸಂಬಂಧವನ್ನು ಕಳೆದುಕೊಂಡ ಪರಿಸ್ಥಿತಿಯನ್ನು ಹೇಗೆ ತಯಾರುಮಾಡಿತು, ಎಂಬುದನ್ನು ಕಮಿಷನರ ಮುಂದಿಡುವುದು ನನ್ನ ಆಕಾಂಕ್ಷೆಯಾಗಿದೆ. ನಾನು ಇದನ್ನು ಪರಿಪೂರ್ಣ ರೀತಿಯಲ್ಲಿ ಮಾಡುವುದಕ್ಕಾಗಿ ನಿಜವಾದ ಸಮಸ್ಯೆಗಳನ್ನು ನನ್ನ ತಿಳುವಳಿಕೆಗೆ ಮಾತ್ರ ತನಿಖೆ ನಡೆಸಿದ್ದಲ್ಲ - ಎಲ್ಲಾ ಆಪಾದನೆಗಳ ಮೂಲವನ್ನು ವೈಚಾರಿಕತೆ ಇರಲಿ, ಇರದಿರಲಿ

ಖಚಿತಪಡಿಸಿದ್ದೇನೆ. ಸಾಮಾಜ, ಜನರು ಮತ್ತು ಇತರರಲ್ಲಿಯ ನನ್ನ ಸಂಭಾಷಣೆಯಲ್ಲಿ ನಾನು ಸುದೀರ್ಘವಾಗಿ ಚರ್ಚಿಸಲು ಅವಕಾಶವಾಗಿದೆ. ಸರಕಾರ ತೆಗೆದುಕೊಳ್ಳಬೇಕಾದ ಪರಿಹಾರ ಕ್ರಮ, ಯಾವುದಾದರೂ ಹೊಸದಾಗಿ ಒತ್ತಡ ತಂದ ವಿಚಾರಗಳು ಇದುತನಕ ಬಯಲಾಗದೆ ಬಾಕಿ ಇರುವುದು ಉಲ್ಲೇಖಿಸುವಂತಾದ್ದು. ಕೋರ್ಟುಗಳು, ಸ್ಟಾಂಪುಗಳು, ಹೊಗೆಸೊಪ್ಪು ಮತ್ತು ಉಪ್ಪು ಮೇಲಿನ ಏಕಸ್ವಾಮ್ಯ, ಇವೆಲ್ಲವೂ ವಿಮರ್ಶಿಸಲ್ಪಟ್ಟವು. ಆದರೆ ಇವುಗಳಲ್ಲಿ ಯಾವುದೊಂದು, ಏಕಸ್ಥವಾಗಿ ಅಥವಾ ಒಂದುಗೂಡಿದರೂ ಕೂಡಾ ಭೂಮಿಗೆ ಸಂಬಂಧಪಟ್ಟಂತೆ ಉಂಟಾಗುವ ಭಾವನೆಯಿಂದ ಹುಟ್ಟಿಕೊಂಡ ದ್ವೇಷದೊಂದಿಗೆ ಹೋಲಿಸಲು ಸಾಧ್ಯವಿಲ್ಲ.

ಕಾರ್ಯದರ್ಶಿಯವರ ದಿನಾಂಕ ೨೦ ಪತ್ರದಲ್ಲಿ ಕೋರ್ಟು ಮತ್ತು ಏಕಸ್ವಾಮ್ಯ(Monopoly)ದ ಬಗ್ಗೆ ಹೇಳಲು ನನಗೆ ಅವಕಾಶ ಇರುವ ಕಾರಣ ಈ ಸಂಭೋದನೆಯನ್ನು ಕೊನೆಗೊಳಿಸುತ್ತಿದ್ದೇನೆ. ಸಾವಧಾನವಾಗಿ ಚರ್ಚಿಸುವ ಮೂಲಕ ಹೆಚ್ಚಿನ ಚಿಂತನೆಗೆ ಅವಕಾಶ ಪಡೆಯಲು ನನಗೆ ಸಾಧ್ಯವಾಗುವುದಾದರೆ ಅದು ನನ್ನನ್ನು ಸಂತೃಪ್ತನಾಗಿ ಮಾಡುತ್ತದೆ.

ಮಹತ್ವವಾದ ಒಳಹರೆಯುವಿಕೆಯ ಪರಿಸ್ಥಿತಿಯಲ್ಲಿ, ಅವುಗಳ ಜರೂರಿ ಮತ್ತು ಆಗ್ರಹಿಸಲ್ಪಟ್ಟ ಸೇವೆಯ ನಿಮಿತ್ತವಾಗಿ, ಬೇರೆ ಸಂದರ್ಭಗಳಲ್ಲಿ ಧಾರಾಳವಾಗಿ ದೊರೆಯುತ್ತಿದ್ದ, ಸಾಮಾನ್ಯವಾಗಿ ನಿಸ್ಸಂದೇಹವಾದ ಭೇಟಿ ನನಗಿಲ್ಲದೆ, ಇದರ ಬಗ್ಗೆ ಬಹಳಷ್ಟು ಚಿಂತನೆಗಳನ್ನು ಬಿಡಬೇಕಾಯಿತು.

ಮಂಗಳೂರು — ಕೆನರಾ ನನ್ನದಾಗಿರು & ಸಿ., & ಸಿ.
೩ನೇ ನವಂಬರ್ ೧೮೩೭ — (ಸಹಿ) ಎಂ. ಲೆವಿನ್
ಪ್ರಿನ್ಸಿಪಲ್ ಕಲೆಕ್ಟರ್

ಪುತ್ತೂರಿನಿಂದ ಮಿ. ವೈಟ್‌ಗೆ ಬರೆದ ಪತ್ರಗಳು: ಈ ವರದಿಯಲ್ಲಿ ಬಿಟ್ಟುಹೋಗಿರುವ, ತಾರೀಕು ೧ ಮತ್ತು ೨ರಂದು ಪುತ್ತೂರಿನಿಂದ ಮಿ. ವೈಟ್‌ರವರಿಗೆ ಬರೆದಿರುವ ಪತ್ರಗಳನ್ನು ಇದರೊಂದಿಗೆ ಜೋಡಿಸಿದ್ದೇನೆ. ಇದರಲ್ಲಿ ಮಂಗಳೂರಿನ ಕಮೀಶನರುಗಳಿಗೆ ಬಂಡಾಯದ ಪ್ರಥಮ ಮುನ್ಸೂಚನೆಯನ್ನು ತಿಳಿಸಿದ್ದೇನೆ.

ಪುತ್ತೂರು, ಎಪ್ರಿಲ್ ಒಂದು ೧೮೩೭
ಪೂರ್ವಾಹ್ನ ೧೦ ಗಂಟೆ

ಪ್ರಿಯ ಮಹನೀಯರೇ,

ಮಂಗಳೂರಿನಲ್ಲಿ ಯಾವುದೇ ಮುನ್ನೆಚ್ಚರಿಕೆಯ ಕ್ರಮಗಳ ಆವಶ್ಯಕತೆ ನನಗೆ ಕಂಡುಬರುವುದಿಲ್ಲವಾದರೂ, ಜಿಲ್ಲೆಯಲ್ಲಿ ದೊಡ್ಡ ಸಂಖ್ಯೆಯ ಸಶಸ್ತ್ರ ಗುಂಪು

ಅಡ್ಡಾಡುತ್ತಿರುವುದಂತೂ ಖಚಿತವಾಗಿದೆ. ಅವರು ಮಂಗಳೂರು ಕಡೆ ಮುನ್ನುಗ್ಗುತ್ತಿರುವುದು ಅಸಂಭವ ಆದರೂ ಅಸಾಧ್ಯವಲ್ಲವೆನಿಸುತ್ತದೆ. ಇದು ನಿಮಗೆ ಮುನ್ನೆಚ್ಚರ ನೀಡುವುದಕ್ಕೆ ಬರೆದದ್ದಲ್ಲವಾದರೂ ನಿಮ್ಮ ಸುರಕ್ಷತೆಯನ್ನು ಇಟ್ಟುಕೊಳ್ಳುವುದು ಅಗತ್ಯ. ಈ ದಿನ ಕಮಾಂಡಿಂಗ್ ಆಫೀಸರಿಗೆ, ೩೦೦ ಮಂದಿಯನ್ನು ಮಂಗಳೂರಿಗೆ ಕಳುಹಿಸಿಕೊಡುವಂತೆ ಬರೆದಿದ್ದೇನೆ. ಅವರು ಎಂಟು ದಿನಗಳೊಳಗಾಗಿ ಬರುವ ನಿರೀಕ್ಷೆ ಇದೆ. ಅನಗತ್ಯವಾಗಿ ಜನರಿಗೆ ಮುನ್ನೆಚ್ಚರಿಕೆ ಕೊಡದಂತೆ ನಿಗಾವಹಿಸಬೇಕು. ನನ್ನ ಅಂದಾಜಿನಲ್ಲಿ ಒಂದೊಮ್ಮೆ ಈ ಜನ ಬಂದದ್ದೆ ಆದರೆ ಮಂಗಳೂರು ಅವರನ್ನು ಹತ್ತಿಕ್ಕಲು ಶಕ್ತವಾಗಿದೆ. ನಮಗೆ ಸಿಕ್ಕಿದ ಮಾಹಿತಿ ಬಹಳ ಅಸ್ಪಷ್ಟವಾಗಿದೆಯಾದರೂ, ಅವರ ಸಂಖ್ಯೆ ಬಹಳ ದೊಡ್ಡದಿದೆ ಎಂಬ ಮಾತನ್ನು ಖಚಿತವಾಗಿ ಹೇಳಬಹುದು.

ಮಿ. ವೈಟ್ ಎಸ್‌ಕ್ವೈಯರ್ & ಸಿ., ಸಿ.
ಯುವರ್ಸ್ & ಸಿ.
(ಸಹಿ) ಎಂ. ಲೆವಿನ್
ಪುತ್ತೂರು, ೨ನೇ ಎಪ್ರಿಲ್ ೧೮೩೭

ಪ್ರಿಯ ಮಹನೀಯರೇ,

ನೀವು ದಯವಿಟ್ಟು, ನನ್ನ ಮಂಗಳೂರು ವಿಳಾಸಕ್ಕೆ ಬಂದ ಅರ್ಜಿ ಮತ್ತು ಉದ್ಯೋಗ ಸಂಬಂಧಿತ ಪತ್ರಗಳನ್ನು ಒಡೆದು ನೋಡಿ ಆವಶ್ಯಕತೆಯ ತುರ್ತು ಕಂಡುಬಂದಲ್ಲಿ ಉತ್ತರಿಸಿರಿ ಮತ್ತು ತಕ್ಕ ಅಪ್ಪಣೆಯನ್ನು ಹೊರಡಿಸಿರಿ. ಈ ವಿಜ್ಞಾಪನೆಯು ಎಲ್ಲಿ ವಿಳಂಬದಿಂದಾಗಿ ಕೆಲಸಕ್ಕೆ ಹಾನಿಯುಂಟಾಗಬಹುದೋ ಅಂಥವುಗಳಿಗೆ ಮಾತ್ರ ಸಂಬಂಧಿಸಿದೆ. ಮಂಗಳೂರು ಮತ್ತು ಇಲ್ಲಿಗೆ ಸಂಪರ್ಕ ಕಡಿದುಹೋಗಿರುವುದನ್ನು ತಪ್ಪಿಸಲು ತಕ್ಕ ಕ್ರಮ ತೆಗೆದುಕೊಳ್ಳುವಂತೆ ವಿನಂತಿಸುತ್ತಿದ್ದೇನೆ. ಆದರೆ ಯಾವುದೇ ಕಾರಣಕ್ಕೂ ಅತಿ ಅಗತ್ಯವೆಂದೆನಿಸದಿದ್ದಲ್ಲಿ ಸಿಪಾಯಿಗಳನ್ನು ಬಳಸಿಕೊಳ್ಳಬಾರದು. ಕಣ್ಣನೂರಿನಿಂದ ನಿರೀಕ್ಷಿಸಿದ ಸೈನ್ಯ ಮಂಗಳೂರು ತಲುಪಿದ ಕೂಡಲೇ ೨೦೦ ಬಂದೂಕುಧಾರಿಗಳನ್ನು ಸೇನಾಧಿಕಾರಿಯೊಂದಿಗೆ ಒಂದಿಷ್ಟೂ ತಡಮಾಡದೆ ಕಳುಹಿಸಬೇಕು. ೫೦೦ ಜನರಿಗೆ ಹತ್ತು ದಿನಗಳಿಗೆ ಸಾಕಾಗುವಷ್ಟು ಜೀವನಾವಶ್ಯಕ ವಸ್ತುಗಳನ್ನು ಅವರೊಂದಿಗೆ ತರಬೇಕು. ನಿಮ್ಮ ಮನಸ್ಸಿಗೆ ಕಂಡ ರೀತಿಯ ಸಾಮಾನ್ಯ ವ್ಯವಸ್ಥೆಗಳನ್ನು ಈ ಸಂದರ್ಭದಲ್ಲಿ ನೀವು ಮಾಡುವಿರೆಂದು ಭಾವಿಸುತ್ತೇನೆ.

ಯುವರ್ಸ್ & ಸಿ
(ಸಹಿ) ಎಂ. ಲೆವಿನ್
ಪ್ರಿನ್ಸಿಪಲ್ ಕಲೆಕ್ಟರ್

## ಅಡಿ ಟಿಪ್ಪಣಿ

ಮಂಗಳೂರಿನ ಕಮಾಂಡಿಂಗ್ ಆಫೀಸರ್‌ಗೆ ೬೦೦೦ ರೌಂಡ್‌ಗೆ ಬೇಕಾಗುವ ಗುಂಡುಮದ್ದು, ೬೦೦ ಚಕಮಕಿ ಕಲ್ಲು (Flint) ಶೇಖರಿಸಿಡಲು ತಿಳುವಳಿಕೆ ನೀಡಬೇಕು. ಸೈನ್ಯಕ್ಕೆ ಸಹಕರಿಸಲು ಕನಿಷ್ಟ ೨೪ ರೌಂಡು ಮದ್ದುಗುಂಡು ಮತ್ತು ಬಂದೂಕುಗಳೊಂದಿಗೆ ೫೦ ಪೇದೆಗಳನ್ನು ಇಟ್ಟುಕೊಳ್ಳಬೇಕು.

(ಸಹಿ) ಎಂ. ಲೆವಿನ್
ಪ್ರಿನ್ಸಿಪಲ್ ಕಲೆಕ್ಟರ್

ಕರ್ನಲ್ ಎಲನ್‌ಗೆ ೩೦೦ ಜನರನ್ನು ಕಳುಹಿಸಲು ನಾನು ಕೇಳಿಕೊಂಡ ಟಪ್ಪಾಲು ತಲುಪಿದೆಯೆ ಎನ್ನುವುದು ನನ್ನ ತಿಳುವಳಿಕೆಗೆ ಬಂದಿಲ್ಲ. ತಲುಪಿಲ್ಲವಾದರೆ, ತುರ್ತಾಗಿ ಕೇಳಿಕೆಯನ್ನು ಕಳುಹಿಸಿ, ಆದಷ್ಟು ಬೇಗನೆ ಜನರನ್ನು ಕಳುಹಿಸುವಂತೆ ಮಾಡುವುದು.

(ಸಹಿ) ಎಂ. ಲೆವಿನ್

*``ಇಲ್ಲಿಯ ರೈತರು ಬ್ರಿಟಿಷ್ ಸರಕಾರಕ್ಕೆ ವಿಧೇಯತೆಯನ್ನು ತೊರೆಯಬೇಕಾಗಿ ಬಂದ ಕಾರಣಗಳೇನು? ಕೆಲವರು ಬೆದರಿಕೆಯ ಪ್ರಭಾವದಿಂದ ಆಗಿದ್ದಿರಲುಬಹುದು! ಆದರೆ ಬಹುಸಂಖ್ಯಾತ ಜನರು ಸ್ವ-ಇಚ್ಛೆಯಿಂದ ಬಂಡಾಯದ ನಾಯಕರನ್ನು ಸೇರಿಕೊಂಡಿದ್ದರು ಎನ್ನುವುದರಲ್ಲಿ ಸಂಶಯವಿಲ್ಲ! ಧಾರಾಳವಾದ ಭರವಸೆಗಳ ಪ್ರಕಟಣೆಗಳಿಂದ ಆಕರ್ಷಿಸಿದ್ದಲ್ಲದೆ, ಬ್ರಿಟಿಷ್ ಪ್ರಭುತ್ವ ಈ ದೇಶದಿಂದ ತೊಲಗಲಿದೆ ಎಂಬ ನಂಬಿಕೆ ಹುಟ್ಟಿಸಿದ್ದರು."*

*ಮದ್ರಾಸ್ ರೆಕಾರ್ಡ್ಸ್ ಆಫೀಸಿನಲ್ಲಿರುವ ಚೀಫ್ ಸೆಕ್ರೆಟರಿಗೆ ೧೮೪೧ರಿಂದ*
*ಕೆನರಾದ ಕಲೆಕ್ಟರಾಗಿದ್ದ ಪಿ. ಬ್ಲೇರನು ೧೪-೩-೧೮೪೨ರಲ್ಲಿ*
*ಕಳುಹಿಸಿದ ವರದಿಯಿಂದ ಆಯ್ದದ್ದು.*



## ೭. ಕೊಡಗು ಬಂಡಾಯ – ರಿಕ್ತರ್ ಗಜೆಟಿಯರ್‌ನಿಂದ

ಕೊಡಗು ಬಂಡಾಯವೆಂದು ಕರೆಯಲ್ಪಡುವುದು ನಿಜವಾಗಿ ಹೇಳುವುದಾದರೆ ಗೌಡರ ಮೇಲ್ಬೀಳುವಿಕೆ. ಇವರು ಕೊಡಗರನ್ನು ಹೋಲುವ ಸ್ವಭಾವವನ್ನು ಹೊಂದಿದ್ದು ಘಾಟಿಯ ಪಶ್ಚಿಮ ಇಳಿಜಾರು ಪ್ರದೇಶದಲ್ಲಿರುವ ಜನಾಂಗ. ಇವರಿಗೆ ಕಂಪೆನಿ ಸರಕಾರದ ಬಗ್ಗೆ ಅಸಂತುಷ್ಟಿ ಇತ್ತು. ಕೊಡಗನ್ನು ಸ್ವಾಧೀನಪಡಿಸಿಕೊಂಡ ಬಳಿಕ ಅಮರಸುಳ್ಯ, ಪುತ್ತೂರು ಮತ್ತು ಬಂಟ್ವಾಳ ಜಿಲ್ಲೆಗಳು ಮಂಗಳೂರು ಸಮೀಪ ಇದ್ದು ಇವುಗಳನ್ನು ಕೆನರಾ ಪ್ರಾಂತ್ಯಕ್ಕೆ ವರ್ಗಾಯಿಸಲಾಯಿತು. ಹಿಂದೆ ಕೆನರಾದಿಂದ ಇವುಗಳನ್ನು ತೆಗೆದುಕೊಂಡದಾಗಿತ್ತು. ಕೊಡಗುರಾಜರ ಕಾಲದಲ್ಲಿ ಕಂದಾಯ ವಸ್ತುರೂಪದಲ್ಲಿದ್ದಿತು. ಮಂಗಳೂರು ಕಲೆಕ್ಟರ್ ಈಗ ಹಣದಲ್ಲಿ ಪಾವತಿಸುವಂತೆ ಒತ್ತಾಯಿಸಿದರು. ಇದರಿಂದಾಗಿ ರೈತರು - ವರ್ತಕರ ಕೃಪೆಯಡಿಯಲ್ಲಿರಬೇಕಾಗಿ ಬಂದದ್ದು, ಅಸಂತೋಷಕ್ಕೆ ಕಾರಣವಾಯಿತು. ನಾಲ್ಕು ದಿವಾನರ ಪೈಕಿ ಒಬ್ಬನಾದ ಲಕ್ಷ್ಮೀನಾರಾಯಣನೆಂಬ ಹೆಸರಿನ ಬ್ರಾಹ್ಮಣನು ಕೊಡಗಿನ ತನ್ನ ಸಹ ದಿವಾನರ ಪ್ರಾಬಲ್ಯದ ಬಗ್ಗೆ ಅಸಮಾಧಾನ ಹೊಂದಿದ್ದು, ಈ ಪರಿಸ್ಥಿತಿಯಲ್ಲಿ ಗೌಡರ ಅಸಂತುಷ್ಟಿಯನ್ನು ರಾಜಕೀಯ ಲಾಭಕ್ಕೆ ಉಪಯೋಗಿಸಿದನು. ಆತನ ಸಹೋದರ ಕೆಳರಾಜ್ಯದ ಸುಳ್ಯದಲ್ಲಿದ್ದನು. ಶ್ರೀಮಂತರೂ, ಪ್ರಭಾವಶಾಲಿಗಳೂ ಆಗಿದ್ದ ಅತೃಪ್ತ ಗೌಡ ಒಕ್ಕೂಟದಲ್ಲಿದ್ದ ಆತನು ಅಪರಂಪರನ ಪಿತೂರಿಯನ್ನು ಬೆಂಬಲಿಸಿದ್ದನು.

ಬಂಡಾಯಗಾರರು ಸುಳ್ಯದಲ್ಲಿ ಬಂದು ಸೇರಿದರು. ಅವರೊಂದು ಜನಜಂಗುಳಿಯಾಗಿ ಸೇರಿದರು ಕೂಡಾ ಪುತ್ತೂರಿನಲ್ಲಿ ಮಂಗಳೂರು ಕಲೆಕ್ಟರ್ ಮತ್ತು ಎರಡು ಸೈನ್ಯದ ತುಕಡಿಯ ಮೇಲೆ ಧಾಳಿ ನಡೆಸಿ ಜಯಶಾಲಿಗಳಾದರು. ಇದರಿಂದ ಧೈರ್ಯ ಹೆಚ್ಚಿತಲ್ಲದೆ ಸಂಖ್ಯೆಯೂ ಹೆಚ್ಚಿತು. ಒಂದು ತಂಡವು ಮಂಗಳೂರಿಗೆ ಹೋಗಿ ಜೈಲು ತೆರೆದು ಅವರನ್ನು ಸೇರಿಸಿಕೊಂಡು ಕಛೇರಿಯನ್ನು, ಗುಡ್ಡದ ಮೇಲಿದ್ದ ಕೆಲವು ನಾಗರಿಕರ ಮನೆಗಳನ್ನು ಲೂಟಿ ಮಾಡಿ ಸುಟ್ಟು ಹಾಕಿದರು. ಅಲ್ಲಿದ್ದ ಎಲ್ಲಾ ಯುರೋಪಿಯನ್ನರು ದಿಗಿಲುಗೊಂಡರು

ಮತ್ತು ಕಣ್ಣಾನೂರಿಗೆ ಹೊರಟ ಹಡಗನ್ನು ಹತ್ತಿ ನಾಗರಿಕರೆಲ್ಲಾ ಓಡಿ ಹೋದರು. ತಮ್ಮ ಮನೆಗಳು ದಳ್ಳುರಿಯಲ್ಲಿ ಸಿಲುಕಿರುವುದನ್ನು ನೋಡಿದಾಗ, ಇಡೀ ದೇಶವೇ ಶಸ್ತ್ರ ಎತ್ತಿಕೊಂಡಂತೆ ಕಾಣುತ್ತಿತ್ತು. ಕಮಾಂಡಿಂಗ್ ಆಫೀಸರನು ಯುದ್ಧದ ಮಾತುಕತೆ ನಡೆಸಿದನು. ಆವಶ್ಯಕತೆಯು ಶೌರ್ಯದಿಂದೊಂದಿಗೆ ರಕ್ಷಣಾಪಡೆಯನ್ನು ಹಡಗು ಹತ್ತಿಸಬೇಕಾಯಿತು. ಅದೂ ಕೂಡಾ ಸಾಕಷ್ಟು ದುರ್ಬಲವಾಗಿತ್ತು. ಸೋತು, ಚದರಿದ ಹಲವಾರು ಸೇನಾತಂಡಗಳು ಕೆಲವೇ ನೂರು ಗೌಡರ ಮತ್ತು ಜೈಲಿನ ಜನಜಂಗುಳಿಯನ್ನು ಎದುರಿಸಲಾಗದೆ ಸಿಕ್ಕಿದಷ್ಟು ದೋಣಿಗಳಲ್ಲಿ ಹತ್ತತೊಡಗಿತು. ಕಣ್ಣಾನೂರಿನಿಂದ ಮತ್ತು ಬೊಂಬೈಯಿಂದ ಕೂಡಲೇ ಸೈನ್ಯ ಕಳುಹಿಸಲ್ಪಟ್ಟಿತು. ಆದರೆ ಅವರು ಬಂದು ತಲುಪಿದಾಗ ಹೋರಾಡಲು ಯಾರೂ ಇದ್ದಿರಲಿಲ್ಲ. ಮಂಗಳೂರು ರಕ್ಷಣಾಪಡೆಯು ಸಮಯಪ್ರಜ್ಞೆಯನ್ನು ಮರಳಿ ಪಡೆದು, ಏನೂ ತೊಂದರೆ ಇಲ್ಲದೆ ಶಾಂತಿ ಮರುಸ್ಥಾಪನೆ ಮಾಡಿತು.

ಇದು ಸಂಪೂರ್ಣವಾಗಿ ಗೌಡರ ವ್ಯವಹಾರವಾದರೂ ಕೂಡಾ, ಬಂಡೇಳುವ ಅಭಿಪ್ರಾಯ ನಾಲ್ಕುನಾಡು ಮತ್ತು ಬೆಪ್ಪುನಾಡು ಕೊಡಗರಲ್ಲಿ ಮತ್ತು ಪಂಜ, ಬೆಳ್ಳಾರೆ ಮತ್ತು ಸುಬ್ರಹ್ಮಣ್ಯ ಜಿಲ್ಲೆಗಳ ಬಡಗರಲ್ಲಿ ಮತ್ತು ಉತ್ತರ ಕೊಡಗಿನ ನಿವಾಸಿಗಳಾದ ರಾಜನ ನಂಬಿಕಸ್ಥ ಮತ್ತು ಆಶ್ರಿತ ಶಿವಾಚಾರಿಗಳಲ್ಲಿಯೂ ಇದ್ದಿತು. ಅಷ್ಟೇ ಅಲ್ಲದೆ ದಿ| ದಿವಾನ ಕುಂಟ ಬಸವನ ಸಂಬಂಧಿಕರು, ಆಪ್ತರು ಮತ್ತು ಅವಶ್ಯ ಉಪಕಾರಿಗಳಾಗಿ ಸದಾ ತಯಾರಾಗಿದ್ದರು. ಮೊದಲು ಹುಕುಂನಾಮೆ ಹೊರಡಿಸಿದ್ದು, ಸಂದೇಹಾಸ್ಪದ ವ್ಯಕ್ತಿ ಅಪರಂಪರನ ಹೆಸರಲ್ಲಿ. ಈಗ ಆತ ಎಲ್ಲೆಲ್ಲೂ ಇದ್ದಾನೆ, ಎಲ್ಲೂ ಇಲ್ಲ ಎನ್ನುವಂತಾಗಿದೆ. ಘನವೆತ್ತಿದ ಹಾಲೇರಿಯ ರಾಜಕುಮಾರ ತನ್ನ ಹಕ್ಕು ಸ್ಥಾಪನೆ ಮಾಡಲಿದ್ದು, ಕೊಡಗರು ಮತ್ತು ರಾಜ್ಯದ ಇತರ ನಿವಾಸಿಗಳು ಸೇವೆ ನೀಡಲು ಬರಬೇಕೆಂದು ಕರೆ ನೀಡಲಾಗಿತ್ತು. ತಲಕಾವೇರಿ ಮತ್ತು ನಾಲ್ಕುನಾಡುಗಳಲ್ಲಿ ಸಾಕಷ್ಟು ಕೊಡಗರು ಈ ಹುಕುಂನಾಮೆಯಲ್ಲಿದ್ದ ರಾಜಮುದ್ರೆ ಮತ್ತು ಇದರ ಸಂದೇಶವಾಹಕರು ಕೊಟ್ಟ ಭರವಸೆಗಳನ್ನು ನಂಬಿದ್ದರು. ಅವರು ಆಯುಧ ತೆಗೆದುಕೊಂಡು ಪ್ರಧಾನ ಕಛೇರಿಯಾದ ಸುಳ್ಯದ ಕಡೆ ಇಳಿದು ಹೋದರು. ಅಪರಂಪರನ ಪತ್ರ ಬೆಪ್ಪುನಾಡಿಗೆ ಕೊಂಡೊಯ್ಯಲ್ಪಟ್ಟಿತು. ಅಲ್ಲಿನ ಕೊಡಗರು, ಅಧಿಕಾರಿಗಳು ಮತ್ತು ಇತರರು ಆಶ್ಚರ್ಯ ಹೊಂದಿದರು. ಏನನ್ನು ನಂಬಬಹುದು ಎನ್ನುವುದು ಗೊತ್ತಾಗದೇ ಅಪಾಯರಹಿತ ಯಾವುದೆಂದು ಪರಿಶೀಲಿಸುವಲ್ಲಿ ಆತಂಕಗೊಂಡರು.

ಒಂದೆರಡು ದಿನಗಳಲ್ಲಿ ವೀರಾಜಪೇಟೆಯಿಂದ ಒಂದು ನಿಯೋಗ ಮಡಿಕೇರಿಗೆ ಹೋಗಿ ದಿವಾನರುಗಳಿಗೆ ವಿಚಾರ ತಿಳಿಸಿ, ಅವರ ಅಭಿಪ್ರಾಯ ಕೇಳಿತು. ಕ್ಯಾಪ್ಟನ್ ಲಿ

ಹಾರ್ಡಿ, ಸುಪರಿಂಟೆಂಡನು ಎಚ್ಚೆತ್ತುಕೊಂಡನು. ದಿವಾನರುಗಳೊಡನೆ ಸಮಾಲೋಚನೆ ನಡೆಸಿ, ಪೊನ್ನಪ್ಪನನ್ನು ಮಡಿಕೇರಿಯಲ್ಲಿಟ್ಟು, ಬೋಪು ಮತ್ತು ಸಂಗಡಿಗರೊಂದಿಗೆ ಸುಳ್ಯದ ಕಡೆ ಸಂಪಾಜೆ ತನಕ ಹೋದನು. ಬೋಪುಗೆ ಸಿಕ್ಕಿದ ಮಾಹಿತಿ ಪ್ರಕಾರ ಬಂಡಾಯಗಾರರು ಅಲ್ಲಿಗೆ ತಲುಪಬೇಕಿತ್ತು. ಕ್ಯಾಪ್ಟನ್ ಲಿ ಹಾರ್ಡಿ ಘಟ್ಟದ ಬುಡದಲ್ಲಿರುವ ಸಂಪಾಜೆಯ ದೂರದ ಕಠಿಣದ ದಾರಿಯಲ್ಲಿ ನಡೆದ. ಅಲ್ಲಿ ನೋಡಿದರೆ ಬಂಡಾಯಗಾರರು ಇರಲೇ ಇಲ್ಲ. ಉತ್ತರ ಕೊಡಗಿನ ಬಿಸ್ಲೆ ಘಾಟಿ ಕಡೆ ಅವರು ಹೋಗಿದ್ದಾರೆಂದು ತಿಳಿದುಬಂತು. ಬಂಡಾಯಗಾರರನ್ನು ಆ ದಟ್ಟ ಕಾಡಿನ ಮೂಲಕ ಹಿಂಬಾಲಿಸುವುದು ಅಸಾಧ್ಯವಾಗಿತ್ತು. ಸಾಮಾನ್ಯವಾಗಿ ಪ್ರಯಾಣಿಕರಿಗೆ ಆ ದಾರಿ ಕಷ್ಟಕರವಾಗಿತ್ತು. ಆದಕಾರಣ ಆತ ಮಡಿಕೇರಿಗೆ ಹಿಂತಿರುಗಿದನು. ಮತ್ತೆ ಮೇಲಿನ ಕೊಡಗು ಮೂಲಕವಾಗಿ ಬಂಡಾಯಗಾರರು ಭೇಟಿಯಾಗುವ ಸ್ಥಳವೆನ್ನಿಸಿಕೊಂಡಲ್ಲಿಗೆ ಪ್ರಯಾಣಿಸಿದನು. ಬೋಪುವನ್ನು ಜತೆಗೂಡಿಕೊಂಡು ಅಲ್ಲಿಗೆ ತಲುಪಿದಾಗ, ಯಾವ ಬಂಡಾಯಗಾರನೂ ಕಾಣಿಸಲಿಲ್ಲ. ಶತ್ರುಗಳು ಸಂಪಾಜೆಯಲ್ಲಿದ್ದಾರೆಂಬ ಸುದ್ದಿ ಗುಪ್ತಚಾರರು ತಂದರು. ಅಲ್ಲಿಂದ ಕಡಮಕಲ್ಲು ಮೂಲಕ ಸಂಪಾಜೆಗೆ ಪ್ರಯಾಣಿಸಿದನು. ಸುಪರಿಂಟೆಂಡೆಂಟ್‌ಗೆ ಬೋಪು ದಿವಾನನ ಮೇಲೆ ಸಂಶಯ ಉಂಟಾಗ ತೊಡಗಿತು. ಮಡಿಕೇರಿಗೆ ಮರಳಿ ಬಂದು ತಲುಪಿದಾಗ, ಬೋಪು ಮೇಲೆ ಅತೃಪ್ತಿ ಇದ್ದ ಇನ್ನೊಬ್ಬ ದಿವಾನ ಪೊನ್ನಪ್ಪನಿಂದ "ಬೋಪುವಿನ ಸಾಕಷ್ಟು ಮಂದಿ ಸಂಬಂಧಿಕರು ಬಂಡಾಯಗಾರರನ್ನು ಸೇರಿದ್ದಾರೆ." ಎಂಬ ವರ್ತಮಾನ ಸಿಕ್ಕಿತು. ಕ್ಯಾಪ್ಟನ್ ಲಿ ಹಾರ್ಡಿಯ ಸಂಶಯ ಸಾಬೀತಾದಂತಾಯಿತು. ಆತ ಬೋಪುವನ್ನು ಕರೆದು ವಿದ್ರೋಹದ ಆರೋಪವನ್ನು ನೇರವಾಗಿ ಆತನ ಮೇಲೆ ಹೊರಿಸಿದನು. ``ಹೋಗು ಇಳಿದು. ನಿನ್ನ ಸ್ನೇಹಿತ ಬಂಡಾಯಗಾರರನ್ನು ಸೇರಿಕೋ. ಮುಚ್ಚುಮರೆಯಿಲ್ಲದೆ ಶತ್ರುವಾಗು. ಹೋಗು. ನಾನು ನಿನ್ನನ್ನು ಹಿಂಬಾಲಿಸಿ ಬರುತ್ತೇನೆ. ಮತ್ತೆ ನಾನು ನಿನ್ನನ್ನು ಹಿಡಿದದ್ದೇ ಆದರೆ ನೇಣುಗಂಬಕ್ಕೆ ಏರಿಸುತ್ತೇನೆ." ಬೋಪುವೂ ಕೂಡಾ ಆತನ ಸ್ನೇಹಿತ ಪೊನ್ನಪ್ಪನಂತೆ ಕಂಪೆನಿಯ ಪ್ರಾಮಾಣಿಕ ಸೇವಕನಾಗಿದ್ದು, ವಿಪರೀತ ಗಾಬರಿಗೊಂಡನು. ಕಾಣುವಂತೆ ಎಲ್ಲವೂ ಆತನಿಗೆ ವಿರುದ್ಧವಾಗಿತ್ತು. ಆದರೂ ಆತ ಮುಗ್ಧನಾಗಿದ್ದನು. ಆದರೆ ಯಜಮಾನನ ನಂಬಿಕೆ ಕಳೆದುಕೊಂಡು, ಮತ್ತೆ ಗಳಿಸಬೇಕಾಗಿತ್ತು. ಕಣ್ಣೀರು ಸುರಿಸುತ್ತಾ ಕುಸಿದು ಕುಳಿತ ಆತ ತನ್ನ ಪ್ರಾಮಾಣಿಕತೆಯನ್ನು ಹತಾಶ ಮಾತುಗಳಿಂದ ಬಣ್ಣಿಸಿದ. "ಕ್ಯಾಪ್ಟನ್ ಲಿ ಹಾರ್ಡಿ, ನೀವು ಇಲ್ಲಿಯೇ ಉಳಿಯಿರಿ. ಈ ನೀಚ ಬಂಡಾಯಗಾರರನ್ನು ತುಳಿದು ಹಾಕಲು ನನ್ನನ್ನು ಬಿಡಿರಿ. ಸಂದರ್ಭಕ್ಕೆ ತಕ್ಕ ಹಾಗೆ ನಡೆದುಕೊಳ್ಳುವ ಅಧಿಕಾರ ನನಗೆ ಕೊಡುವ ಜವಾಬ್ದಾರಿ ನೀವು

ತೆಗೆದುಕೊಳ್ಳುವುದಾದರೆ, ನಾನು ಅವರ ಮುಖ್ಯಸ್ಥರನ್ನು ಜೀವಂತವಾಗಿ ಅಥವಾ ಶವಗಳಾಗಿ ತಂದೊಪ್ಪಿಸಲು ಈಗಲೇ ಹೊರಡುತ್ತೇನೆ." ಕ್ಯಾಪ್ಟನ್ ಲಿ ಹಾರ್ಡಿಗೆ ಈ ವ್ಯಕ್ತಿ ಸತ್ಯವಂತ ಅನ್ನಿಸಿ, ಆತನಿಗೆ ಬೇಕಾದ್ದು ಮಾಡಲು ಅನುಮತಿ ಕೊಟ್ಟನು.

ಬೆಪ್ಪುನಾಡಿನ ಮತ್ತು ಇತರ ಜಿಲ್ಲೆಗಳ ಕೊಡವರು, ಇದೇ ಸಮಯದಲ್ಲಿ ಮಡಿಕೇರಿಗೆ ಬಂದು ಸೇರಿದ್ದರು. ಸುಭೇದಾರ ಅಪ್ಪಚಣ್ಣ (೧೮೭೦ರಲ್ಲಿ ಮುಖ್ಯ ಶಿರಸ್ತೇದಾರನಾಗಿದ್ದಾನೆ)ನ ಸಂಗಡ ಅರುವತ್ತು ಜನರ ತುಕಡಿ ಉತ್ತರಕ್ಕೆ - ಬೋಪು ಜತೆ ನೇರವಾಗಿ ಕೆಳಗೆ ಸಂಪಾಜೆ ಕಡೆ ಹೊರಟಿತು. ತನ್ನದೇ ಶೈಲಿಯಲ್ಲಿ ಇಬ್ಬರು ಕೊಡಗು ಪ್ರತಿನಿಧಿಗಳು ಮುಂದುವರಿದರು. ಇಬ್ಬರು ಕೂಲಿಗಳು ಹೊಸದಾಗಿ ಕತ್ತರಿಸಿದ ಬೆತ್ತದ ಹೊರೆಯನ್ನು ಹೊತ್ತಿದ್ದರು. ದಿವಾನನು ಬಂಡಾಯಗಾರರಿಗೆ ನಿಜವಾದ ಅರ್ಥದಲ್ಲಿ ನೆಕ್ಕಿಸಬೇಕೆಂಬ ನಿರ್ಧಾರಕ್ಕೆ ಬಂದಿದ್ದನು. ನಾಲ್ಕು ನಾಡಿನ ಮುಖ್ಯ ಸ್ನೇಹಿತರು ಆತನ ಸುತ್ತುವರಿದರು. ಅವರ ಪೈಕಿ ಮೂವರು ದಿವಾನನಿಗಿಂತ ತುಸು ಮುಂದೆ ಆತನ ದಾರಿಯ ಅಪಾಯ ನಿವಾರಿಸುತ್ತಾ ನಡೆದುಹೋಗುತ್ತಿದ್ದರು. ಯಾಕೆಂದರೆ ಚೆಟ್ಟಿಕುಡಿಯ ಬೋಪುವನ್ನು ಕಂಡಲ್ಲೆ ಗುಂಡಿಕ್ಕಿ ಕೊಲ್ಲುವುದಾಗಿ ಪ್ರಮಾಣ ಮಾಡಿದ್ದನು. ಆತ ಮಲೆಕುಡಿಯರ ಪಂಗಡಕ್ಕೆ ಸೇರಿದವನಾಗಿದ್ದು, ಲಿಂಗರಾಜನಿಗೆ ಕೋವಿ ವಿದ್ಯೆಯ ಗುರುವಾಗಿದ್ದು ಆತನ ಆಪ್ತನಾಗಿದ್ದನು. ಈತನು ಹಾರುತ್ತಿರುವ ಹಕ್ಕಿಯ ಕಣ್ಣಿಗೆ ಗುರಿ ಹೊಡೆದಿದ್ದನೆಂಬ ವದಂತಿ ಇದ್ದಿತು. ತುಕಡಿಯು ರಾಜಾಸೀಟು ದಾಟಿ ಹೋಗಿರಲಿಲ್ಲ. ಇನ್ನೇನು ಘಟ್ಟವನ್ನು ಇಳಿಯಬೇಕೆನ್ನುವಷ್ಟರಲ್ಲಿ ಎರಡು ಜನ ದುರದೃಷ್ಟಶಾಲಿ ಮುಖ್ಯಸ್ಥರಾದ ಮಾಜಿ ಸುಭೇದಾರ ಮುದ್ದಯ್ಯ (ಲೆವಿನ್‌ನ ವರದಿಯಲ್ಲಿ ಕಾಣಿಸಿಕೊಂಡ ಸುಭೇದಾರ ಮಾದಯ್ಯ ಆಗಿರಬಹುದೇ?) ಮತ್ತು ಪೌತಿ ಪಾರಪತಿಗಾರ ಅಪ್ಪಯ್ಯ ಕಾಣಸಿಕ್ಕಿದರು. ಬೋಪುವಿಗೆ ಅವರು ಪರಿಚಿತರಾಗಿದ್ದರು. ಅವರು ಬಂಡಾಯದ ಸುಳಿವು ಆತನಿಗೆ ತಿಳಿಸಿರಲಿಲ್ಲ. ಅವರಿಗೆ ಖಂಡಿತವಾಗಿ ವಿಚಾರ ತಿಳಿದಿತ್ತು. ಸರಿಯಾದ ಸಮಯದಲ್ಲಿ ವಿಚಾರ ತಿಳಿಸಿದ್ದರೆ ಆತನಿಗೆ ಹೀನವಾದ ಅಪಮಾನದ ಅಪಾಯ ಇರುತ್ತಿರಲಿಲ್ಲ. ಏನೋ ಸರ್ವನಾಶದ ಅಂಚಿನಲ್ಲಿ ಉಳಿದುಕೊಂಡನು. ಆದ ಕಾರಣ ಆತನ ಜತೆಗಾರರಲ್ಲಿ ಕೆಲವರಿಗೆ ಅವರನ್ನು ವಶಕ್ಕೆ ತೆಗೆದುಕೊಳ್ಳಲು ಹೇಳಿದನು. ಮತ್ತೆ ಕೆಲವರಿಗೆ ಒಂದೊಂದು ಬೆತ್ತ ತೆಗೆದುಕೊಳ್ಳಲು ಹಾಗೂ ಅವರಿಗೆ ಚೆನ್ನಾಗಿ ಬಾರಿಸಲು ಹೇಳಿದನು. ಕ್ರೂರ ಕೈಗಳು ಅವರನ್ನು ಹಿಡಿದು ಕೋಟುಗಳನ್ನು ಕಿತ್ತೆಸೆದಾಗ, ಆ ಅದೃಷ್ಟಹೀನರು ಯಾಕೆ ಹೀಗೆ ಮಾಡುತ್ತಿದ್ದೀರೆಂದು ಕೇಳಿದಕ್ಕೆ ಉತ್ತರವಾಗಿ ಏಟುಗಳು ಬೀಳುತ್ತಿದ್ದುವು. ಅವರು ಅರೆಜೀವವಾಗಿ ನೆಲಕ್ಕುರುಳಿದ ನಂತರ ಅದನ್ನು ಬಿಟ್ಟು ಬೋಪು ಮುನ್ನಡೆದನು.

ಸಂಪಾಜೆ ಘಾಟಿಯ ಅರ್ಧದಾರಿಯಲ್ಲಿ, ನಾಲ್ಕುನಾಡು ಕೊಡಗರ ಒಂದು ಗುಂಪು ಆತನಿಗೆ ಕಾಣಿಸಿತು. ಇವರೆಲ್ಲ ಆತನ ಗುರುತಿನವರೇ ಆಗಿದ್ದರು. ಅವರನ್ನೆಲ್ಲ ವಶಕ್ಕೆ ತೆಗೆದುಕೊಳ್ಳುವಂತೆ ತನ್ನ ಸಂಗಡಿಗರಿಗೆ ಅಪ್ಪಣೆ ಮಾಡಿದನು. ಅವರು ಸಶಸ್ತ್ರರಾಗಿದ್ದು, ಸಂಖ್ಯೆಯಲ್ಲಿ ಹೆಚ್ಚಿದ್ದರೂ ಹೋರಾಡುವ ಧೈರ್ಯ ತೆಗೆದುಕೊಳ್ಳಲಿಲ್ಲ. ಬಂಡಾಯಗಾರರ ಓಡಾಟದ ವಿವರ ತಿಳಿಸಲು ಒಪ್ಪಿಕೊಂಡ ಒಬ್ಬಾತನನ್ನು ಹೊರತುಪಡಿಸಿ, ಉಳಿದವರನ್ನು ಚೆನ್ನಾಗಿ ದಂಡಿಸಲಾಯಿತು. ನಾಲ್ಕು ನಾಡಿನ ಸುಭೇದಾರನು ಈ ಬುದ್ಧಿಗೇಡಿ ವ್ಯವಹಾರಕ್ಕೆ ಎಳೆಯಲ್ಪಟ್ಟಿದ್ದನು. ಬೋಪು ಆತನಿಗೆ ಹೇಳಿ ಕಳುಹಿಸಿ ಆತನನ್ನು ಭೇಟಿಯಾಗಿ ಬಂಡಾಯಗಾರರಿಂದ ಅವನನ್ನು ಬೇರ್ಪಡಿಸಲು ಹಾಗೂ ಕಂಪೆನಿ ಸರಕಾರಕ್ಕೆ ನಿಷ್ಠೆಯಿಂದಿರಲು ಒಪ್ಪಿಸುವಂತೆ ತಾಕೀತು ಮಾಡಿದನು. ಅಂತಹ ಪ್ರಭಾವಶಾಲಿಯನ್ನು ಕಳೆದುಕೊಂಡ ದೊಡ್ಡ ಹೊಡೆತದಿಂದಾಗಿ ಈ ಚಿಲ್ಲರೆ ಬಂಡಾಯಗಾರರು ಕಂಗಾಲಾದರು. ಹೊಡೆತವನ್ನು ಹೊರತುಪಡಿಸಿ, ಒಂದಿಷ್ಟು ರಕ್ತಪಾತವಿಲ್ಲದೆ ಅವರನ್ನು ಹಿಮ್ಮೆಟ್ಟಿಸಿದ ನಂತರ ಇದುವರೆಗೆ ಕೊಡಗಿನಲ್ಲಿ ಶಾಂತಿ ಸ್ಥಾಪನೆಯಾಗಿದೆ.

ಕೊಡಗರು ಅವರ ನಿಷ್ಠೆಗಾಗಿ ಸರಕಾರದಿಂದ ಬಹಳ ಪ್ರಶಂಸೆ ಪಡೆದರು. ೨೦,೦೦೦ ರೂಪಾಯಿಯ ಖಜಾನೆಯನ್ನು ಪುನರ್‌ವಶಮಾಡಿಕೊಂಡ ಸೇವೆಯ ಸ್ಮರಣಾರ್ಥವಾಗಿ, ಅವರೊಳಗೆ ಹಂಚಿಕೊಳ್ಳಲು ಹೇಳಲಾಯಿತು. ಆದರೆ ಅವರು ಅದಕ್ಕೆ ಬದಲಾಗಿ ಇನ್ನೇನಾದರೂ ಗೌರವ ಕೊಡುವಂತೆ ಬೇಡಿಕೊಂಡರು. ಅವರಿಗೆ ಜಮೀನು ಜಹಗೀರು ಧಾರಾಳವಾಗಿ ಕೊಡಲಾಯಿತು. ಮೂರು ತಲೆಮಾರು ತನಕ ಪಿಂಚಣಿ ನೀಡಲಾಯಿತು. ಅವರವರ ಅರ್ಹತೆಗೆ ಸರಿಯಾಗಿ ಬಟ್ಟೆಬರೆ, ಕುದುರೆ, ಬೆಳ್ಳಿ ಮತ್ತು ಚಿನ್ನದ ಪದಕಗಳನ್ನು ಕೊಡಲಾಯಿತು. ಪ್ರಾಯಶಃ ದಿವಾನರೊಡನೆ ಎಷ್ಟು ಹತ್ತಿರದ ಸ್ನೇಹ ಸಂಬಂಧ ಅವರಿಗೆ ಇದ್ದಿತೆಂಬುದನ್ನು ಇದು ಅನುಸರಿಸಿದ್ದಿರಬೇಕು. "ಕೊಡಗು ಪದಕ"ದ ತೂಕ ೭ ತೊಲ, ಚೈನ್ ಸೇರಿದರೆ ೧೧.೫ ತೊಲ. ಇದರ ವ್ಯಾಸ ಎರಡು ಇಂಚು. ಒಂದು ಬದಿಯಲ್ಲಿ ಕೊಡವ ಯೋಧ ಹೋರಾಡುವ ಭಂಗಿಯ ಚಿತ್ರ, ಇನ್ನೊಂದು ಬದಿಯಲ್ಲಿ ಉರುಟು ಹೂಮಾಲೆಯೊಳಗೆ ಪೀಚೆಕತ್ತಿ ಮತ್ತು ಒಡಿಕತ್ತಿ ಚಿತ್ರದೊಡನೆ ಇಂಗ್ಲೀಷ್‌ನಲ್ಲಿ "For Distinguished conduct and Loyalty to the British Government, Coorg. April 1837" "ಕೊಡಗಿನ ಬ್ರಿಟಿಷ್ ಸರಕಾರಕ್ಕೆ ನಿಷ್ಠೆ ಮತ್ತು ಮೇಲ್ಮಟ್ಟದ ವರ್ತನೆಗೆ" ಎಂಬುದಾಗಿ ಕನ್ನಡದಲ್ಲಿ ಬರೆಯಲಾಗಿತ್ತು. ೧೮೫೭ರ ಸಿಪಾಯಿ ದಂಗೆಯಲ್ಲಿ ಕೊಡಗರು ಸ್ಥಳೀಯ ಸರಕಾರದ ನಂಬಿಕೆಯನ್ನು ಎಷ್ಟರಮಟ್ಟಿಗೆ ಹೊಂದಿದ್ದರೆಂದರೆ, ದಂಗೆಯನ್ನು ಅಡಗಿಸಿದ ಮೇಲೆ ಚೀಫ್ ಕಮಿಶನರ್

ಆಗಿದ್ದ ಜನರಲ್ ಕಬ್ಬನ್ ಈ ಕೆಳಗಿನ ಇಸ್ತಿಹಾರು ಇಂಗ್ಲೀಷ್ ಮತ್ತು ಕನ್ನಡದಲ್ಲಿ ಹೊರಡಿಸಿದನು. ಇದರ ಶಿರೋಭಾಗದಲ್ಲಿ ಯೋಧನ ಉಡುಪಿನಲ್ಲಿರುವ ಕೊಡಗನನ್ನು ಪ್ರತಿನಿಧಿಸುವ ಮುದ್ರಿಕೆ ಇದ್ದಿತು.

**ಇಸ್ತಿಹಾರು** ೨೬ನೇ ಫೆಬ್ರವರಿ ೧೮೬೧

ಬ್ರಿಟಿಷ್ ಸರ್ಕಾರಕ್ಕೆ ಉನ್ನತವಮಟ್ಟದ ಗೌರವ, ನಿಷ್ಠೆ ಮತ್ತು ಶೌರ್ಯ ಹೊಂದಿರುವ ಸೇನಾನಿಗಳ ಚಿಕ್ಕ ದೇಶವೆಂಬ ವ್ಯಕ್ತಿತ್ವದಿಂದಿರುವ ಮತ್ತು ಸರ್ಕಾರಕ್ಕೆ ನೀಡಿದ ಎದ್ದು ಕಾಣುವ ಸೇವೆಗಳನ್ನು ಸ್ಮರಿಸಿಕೊಂಡು, ಭಾರತ ಸರ್ಕಾರ ತನಗಿತ್ತಿರುವ ಅಧಿಕಾರದ ಮೇರೆಗೆ, ಕೊಡಗಿನ ಶೂರ ಜನರಿಗೆ "ಶಸ್ತ್ರ ನಿರ್ಬಂಧ ಕಾನೂನು" ಅನ್ವಯಿಸುವುದಿಲ್ಲವೆಂದು ಪ್ರಕಟಿಸುವುದು ನನ್ನ ಸಂತಸದ ಕರ್ತವ್ಯವಾಗಿದೆ.

ಸಹಿ : **ಎಂ. ಕಬ್ಬನ್**

ಕಮಿಷನರು



ಅನುಬಂಧ ೧

# ಕೊಡಗು ಮತ್ತು ಕೆನರಾ ಬಂಡಾಯ*

## (೧೮೩೬-೩೭)

ದಕ್ಷಿಣ ಕನ್ನಡ ಜಿಲ್ಲೆಯಲ್ಲೂ, ಕೊಡಗಿನಲ್ಲೂ, ೧೮೩೩ರಲ್ಲೇ ಬ್ರಿಟಿಷ್ ವಿರುದ್ಧ ಬಂಡಾಯ ಮೊದಲಾಯಿತು. ಆದರೆ ಅದಕ್ಕೆ ಹೆಚ್ಚಿನ ಬಲ ಮತ್ತು ವ್ಯಾಪ್ತಿಯುಂಟಾದದ್ದು ೧೮೩೬-೧೮೩೭ರಲ್ಲಿ[1]. ೧೮೩೭ರಲ್ಲೇ ಇಂಡಿಯಾ ಸರಕಾರದವರು ಕಮೀಷನರ್ ಕಾಟನ್ ಎಂಬಾತನನ್ನು ಈ ಬಂಡಾಯದ ಮೂಲ ಕಾರಣಗಳು, ಅದರ ವ್ಯಾಪ್ತಿ ಮತ್ತು ಇತರ ಅಂಶಗಳನ್ನು ಕುರಿತು ವಿಚಾರಣೆ ನಡೆಸತಕ್ಕದೆಂದು ನೇಮಿಸಿದ್ದು, ಆತ ವಿಚಾರಣೆ ಮಾಡಿ, ಬರೆದು ಒಪ್ಪಿಸಿದ ವರದಿಯೇ ಈ ಬಂಡಾಯದ ಚರಿತ್ರೆಗೆ ಮೂಲಾಧಾರ ಸಾಹಿತ್ಯ. ಚೀಫ್ ಕಮೀಷನರ್ ಕಬ್ಬನ್ ಸಹ ಕಾಟನ್ ವರದಿಯ ವಿಮರ್ಶೆ ಮಾಡಿ, ತಾನೂ ವಿಚಾರಣೆ ನಡೆಸಿ, ಒಂದು ವರದಿಯನ್ನು ಸಿದ್ಧ ಮಾಡಿದ. ಈ ಎರಡೂ ವರದಿಗಳ ಸಹಾಯದಿಂದ ಕೆನರಾ ಮತ್ತು ಕೊಡಗಿನ ಬಂಡಾಯದ ಕಥೆಗೆ ಒಂದು ರೂಪ ಕೊಡಲು ಸಾಧ್ಯ.

೧೮೩೧ರಲ್ಲಿ ಮೈಸೂರು ಮಹಾರಾಜ ಮುಮ್ಮಡಿ ಕೃಷ್ಣರಾಜ ಒಡೆಯರು ಪದಚ್ಯುತರಾದರು. ಕೊಡಗಿನ ವೀರರಾಜೇಂದ್ರ ಒಡೆಯರೂ ರಾಜ್ಯವನ್ನು ಕಳೆದುಕೊಂಡು ದೇಶಾಂತರವಾಸಿಗಳಾದರು. ಇವೆರಡೂ ಸಂಸ್ಥಾನಗಳ ಭವಿಷ್ಯ ನಿರ್ಧಾರ ಕಾರ್ಯದಲ್ಲಿ ಬ್ರಿಟಿಷ್ ಸರಕಾರದವರು ನಿಯುಕ್ತರಾಗಿದ್ದರು. ಆಗಲೆ, ಸುಮಾರು ೧೮೩೩ರಲ್ಲೇ, ಅಪರಂಪರನು ಕಾಣಿಸಿಕೊಂಡದ್ದು. ಇವೆರಡೂ ಸಂಸ್ಥಾನಗಳ ಸಿಂಹಾಸನಗಳ ಪುನರುದ್ಧಾರಕ್ಕಾಗಿ ಅಪರಂಪರನು ರಾಯಭಾರ ನಡೆಸಿದ ಹಾಗೂ ಬ್ರಿಟಿಷ್ ಸರಕಾರದ ಉದ್ದೇಶವನ್ನು ಭಂಗಗೊಳಿಸಲು ಸರ್ವ ಪ್ರಯತ್ನ ಮಾಡಿದ ಹಾಗೂ ಕಂಡುಬರುತ್ತದೆ. ಅಂದಿನಿಂದ ಅವನು ಬ್ರಿಟಿಷರ ಬದ್ಧ ವೈರಿಯಾದನೆಂದೂ, ಬಂಡಾಯ ಅವನಿಂದ

---

* ತಿ. ತಾ. ಶರ್ಮರ "ಕರ್ನಾಟಕದಲ್ಲಿ ಸ್ವಾತಂತ್ರ್ಯ ಸಂಗ್ರಾಮ ೧೮೦೦ರಿಂದ ೧೮೫೭ರ ವರೆಗೆ" ಎಂಬ ಕೃತಿಯಿಂದ.

1. The Government of India ordered on 12th September 1837 an enquiry into the Insurrection in Canara and Coorg.

ಮೊದಲಾಯಿತೆಂದೂ ಹೇಳಬಹುದು. ಅಪರಂಪರನು ತನ್ನ ಜೀವಾವಧಿ ಬ್ರಿಟಿಷರ ಪರಮ ವೈರಿಯಾಗಿದ್ದ.

೧೮೩೪ರಲ್ಲಿ ಕೊಡಗಿನಲ್ಲಿ ಯುದ್ಧವಾರಂಭವಾಯಿತಷ್ಟೆ. ಅದಕ್ಕೆ ಮೊದಲೇ ಅಪರಂಪರ ಕೊಡಗನ್ನು ಬಿಟ್ಟ. ಅದರ ಗಡಿಯ ಸಮೀಪದ ಕಾಜುಗೋಡು ಗ್ರಾಮ ಸೇರಿದ. ಪಟೇಲ ಮಲ್ಲಪ್ಪ ಗೌಡನ ಆಶ್ರಯ ಪಡೆದ. ಕಾಜುಗೋಡು ದಕ್ಷಿಣ ಕನ್ನಡ ಪ್ರದೇಶಕ್ಕೆ ಸೇರಿದ್ದು. ಉತ್ತರ ಕೊಡಗಿನ ಗೌಡರಿಗೂ, ಮಲ್ಲಪ್ಪ ಗೌಡನಿಗೂ ಕುಲಬಾಂಧವ್ಯ ನಿಕಟವಾಗಿತ್ತು. ಅಲ್ಲದೆ ಅಲ್ಲಿನ ರೈತರಲ್ಲೆಲ್ಲ ಮಲ್ಲಪ್ಪ ಹೆಸರುವಾಸಿಯಾಗಿದ್ದ. ಮೇಲಾಗಿ ಇವನು ಕೊಡಗಿನ ಅರಸರಾದ ಲಿಂಗರಾಜ, ವೀರರಾಜರ ಆಪ್ತ; ಅವರ ಅಂತರಂಗಕ್ಕೆ ಸೇರಿದವ. ಕಾಜುಗೋಡಿಗಿಂತ, ಮಲ್ಲಪ್ಪನ ಆಶ್ರಯಕ್ಕಿಂತ, ತನ್ನ ಉದ್ದೇಶ ಸಾಧನೆಗೆ ಅನುಕೂಲ ಕ್ಷೇತ್ರ, ಅವಕಾಶ ಬೇರೊಂದಿಲ್ಲವೆಂದು ಅಪರಂಪರ ಅರಿತ. ಜಂಗಮ ಸ್ವಾಮಿಯೆನಿಸಿ, ಅಂಧಶ್ರದ್ಧೆಯ ಸಾಮಾನ್ಯ ಜನರನ್ನಾಕರ್ಷಿಸಿದ. ಅನೇಕ ಪವಾಡಗಳನ್ನು ಮೆರೆಸಿ, ಜನರ ಮೇಲೆ ಗುರು ಪ್ರಭಾವ ಬೀರಿದ.

೧೮೩೫ರಲ್ಲಿ ತನ್ನ ಬಲಕ್ಕೆ ಸರಿಯಾದ ಬೆಲೆಕಟ್ಟಿ, ಕೊಡಗಿನ ಹಾಲೇರಿ ರಾಜಮನೆತನದ ಪ್ರತಿನಿಧಿಯೆಂದು ಸಾರಿದ; ಆ ರಾಜ್ಯದ ಮೇಲೆ ತನ್ನ ಹಕ್ಕುಂಟೆಂದೂ ಸ್ಥಾಪಿಸಲಾರಂಭಿಸಿದ. ಮಲ್ಲಪ್ಪ ಗೌಡನ ಸಹಾಯದಿಂದ ಕೊಡಗಿನ ಮುಖಂಡರ ಸ್ನೇಹ, ಸಹಾನುಭೂತಿ, ಸಹಾಯ ಸಂಪಾದನೆ ಮಾಡಿದ. ೧೮೩೬-೩೭ರ ವೇಳೆಗೆ ಅಪರಂಪರ ಸ್ವಾಮಿ ಪ್ರಬಲನಾದ; ಬ್ರಿಟಿಷ್ ಸರಕಾರದ ಪರಿಣಾಮಶೂಲವಾದ. ಅದೇ ಕಾಲದಲ್ಲೇ ಒಡೆಯರ ಮನೆತನದ ಪತನದ ಸಲುವಾಗಿ ಮೈಸೂರು ದೇಶದಲ್ಲಿ ಅಸಾಧ್ಯ ಅತೃಪ್ತಿ, ಅಶಾಂತಿ ತಲೆ ಹಾಕಿತು. ಮೈಸೂರು ಅರಮನೆಯ ಹತ್ತಿರದಲ್ಲೇ ಕೆನರಾ ಕೊಡಗಿನ ಪಿತೂರಿಗಾರರ ರಹಸ್ಯಾಲೋಚನೆಗಳ ಕಾರ್ಯಾಗಾರವೇರ್ಪಟ್ಟಿತು. ೧೮೩೬ರಲ್ಲಿ ಪಿತೂರಿಗಾರರಿಗೆ ಮೈಸೂರು ರಾಜ್ಯದಲ್ಲಿ, ಕೆನರಾ ಮತ್ತು ಕೊಡಗುಗಳಲ್ಲಿ ಬೆಂಬಲ ಸಿಕ್ಕಿತು. ಆದರೂ ಪಿತೂರಿಯು ಜಯಪ್ರದವೆನಿಸಲಿಲ್ಲ.

"ಮೈಸೂರಿನಲ್ಲಿ ಪಿತೂರಿಗಾರರಿಗೆ ಆಸ್ಥಾನಕ್ಕೆ ಸಂಬಂಧಪಟ್ಟವರಿಂದ ದೊರೆತ ಆಶ್ರಯ ಕುರಿತು ಕರ್ನಲ್ ಕಬ್ಬನ್‌ರವರು ಅನೇಕ ಅಂಶಗಳನ್ನು, ಆದರೆ ಪ್ರಬಲ ಸಂಶಯಾತ್ಮಕ ಅಂಶಗಳನ್ನು ಕುರಿತು ವಿವರಿಸಿದ್ದಾರೆ. ಆದರೆ ಅವುಗಳನ್ನು ಸ್ಥಾಪಿಸುವುದೂ ಕಷ್ಟ; ಸುಳ್ಳೆಂದು ಹೇಳುವುದೂ ಕಷ್ಟ. ಪಿತೂರಿಯನ್ನು ಕಾರ್ಯಕಾರಿಯಾಗಿ ಮಾಡಲು ಕೈಕೊಂಡ ಕ್ರಮಗಳ ಸನ್ನಿವೇಶಗಳನ್ನಾಗಲಿ, ನಾನು ಸಂಗ್ರಹಿಸಿರುವ ಹೆಚ್ಚಿನ ಸಮಾಚಾರದಿಂದಲಾಗಲಿ, ಇದಕ್ಕಿಂತ ಹೆಚ್ಚಾಗಿ ಹೇಳಲಾರೆ." ಎಂಬುದಾಗಿಯೂ, ಮತ್ತೆ

"ಮೈಸೂರಿನ ಪ್ರಭಾವಶಾಲಿ ಪಕ್ಷಕ್ಕೂ, ಪಿತೂರಿಗಾರರಿಗೂ ಇದ್ದ ಸಂಬಂಧವಾಗಿ ಕರ್ನಲ್ ಕಬ್ಬನ್‌ರವರು ಕೊಟ್ಟಿರುವ ವಿವರಗಳೇ ಅದಕ್ಕೆ ಸಾಕ್ಷಿಯಾಗಿವೆ. ಅವುಗಳನ್ನು ತಪ್ಪೆಂದು ಸಾಧಿಸಲಾಗದು. ಬಂಡಾಯದ ಕಾಲದಲ್ಲಿ ಮೈಸೂರಿನ ಪಕ್ಷದವರನ್ನು ಕುರಿತು ಪಾಲಿಸಿದ ಮೌನ, ಇತರ ಕಡೆಗಳಿಂದ ನಿರೀಕ್ಷಿಸಿದ ಸಹಾಯವನ್ನು ಕುರಿತು ಬಡಾಯಿ ಮಾತು, ಇವುಗಳನ್ನು ಲಕ್ಷ್ಯದಲ್ಲಿಟ್ಟುಕೊಂಡು ನೋಡಿದಾಗ, ಸಂಶಯವುಂಟಾಗುತ್ತದೆ." ಎಂದೂ ಕಾಟನ್‌ರವರು ಹೇಳಿದ್ದಾರೆ.

೧೮೩೭ನೆಯ ಪಿತೂರಿಯನ್ನು ಕುರಿತೊಂದು ವಿಶೇಷವೆಂದರೆ ಪಿತೂರಿಗಾರರೆಲ್ಲ ಕಾರ್ಯ ಸಾಧನೆಗಾಗಿ ಮೈಸೂರಿಂದ ಹೊರಟರು. ಹೀಗೆ ಇವರು ಹೊರಡುವರೆಂಬ ಸುದ್ದಿಯನ್ನು ಮಹಾರಾಜರೇ (ಕರ್ನಲ್ ಕಬ್ಬನ್‌ರವರು ವರ್ಣಿಸಿರುವಂತೆ) ಕೊಟ್ಟರು. ಹೀಗಾಗಿ ಪಿತೂರಿಗಾರರ ರಹಸ್ಯಾಲೋಚನೆಗಳೆಲ್ಲ ಮಣ್ಣುಗೂಡಿದುವು.

ಮೂರನೆಯ ಪ್ರಯತ್ನವು ಸಾಕಾದಷ್ಟು ಯಶಸ್ವಿಯೆನಿಸಿತು. ಈ ಪ್ರಸಂಗದ ನಾಯಕ ಮುಖ್ಯರೆಂದರೆ ಅಪರಂಪರ ಮತ್ತು ಕೊಡಗಿನ ಅಪ್ಪಾಜಿ ಅರಸ. ಮೊದಲೆರಡು ಪ್ರಯತ್ನಗಳ ಪ್ರೋತ್ಸಾಹಕರೆಲ್ಲ ಈ ನಾಯಕರ ಉದ್ದಿಶ್ಯ ಸಾಧನೆಗೆ ನೆರವಾದರು. ಮೊದಲೆರಡು ಪ್ರಯತ್ನಗಳ ವಿಫಲತೆಯಿಂದ ಪಿತೂರಿಗಾರರು ಪೂರ್ಣ ಲಾಭ ಹೊಂದಿದರು. ಪ್ರಯತ್ನಗಳನ್ನೆಲ್ಲ ಮಣ್ಣುಗೂಡಿಸಿದ ಬ್ರಿಟಿಷ್ ಸರಕಾರದ ಮೇಲವರ ವೈರ ವೃದ್ಧಿಯಾಯಿತು. ಕೊಡಗಿನ ಜನರ ಮನೋಧರ್ಮವನ್ನವರು ಚೆನ್ನಾಗಿ ಬಲ್ಲವರಾಗಿದ್ದ ಕಾರಣ ಕೊಡಗಿನ ರಾಜಮನೆತನದವರ ಪುನರುದ್ಧಾರ ಕಾರ್ಯವೇ ಪ್ರಧಾನವೆಂದು ಸಾಮಾನ್ಯ ಜನರ ಮನಸ್ಸಿಗೆ ತಂದು, ಅವರನ್ನೊಲಿಸಿಕೊಂಡರು. ಆದರೆ ಅವರ ಪರಮೋದ್ದಿಶ್ಯ ಬ್ರಿಟಿಷ್ ಪ್ರಭುತ್ವವನ್ನು ಧ್ವಂಸ ಮಾಡುವುದೇ ಆಗಿತ್ತು. ೧೮೩೭ನೆಯ ಕೆನರಾ ಬಂಡಾಯದ ಕಾರಣಗಳನ್ನು ಕುರಿತು ವಿಚಾರಮಾಡಿ ಕಮೀಷನರ್ ಕಾಟನ್ ಈ ರೀತಿಯಾಗಿ ಅಭಿಪ್ರಾಯಪಟ್ಟರು :

"ಪಿತೂರಿಗಾರರ ಅಂತಿಮ ಉದ್ದಿಶ್ಯವಾದರೂ ಏನಾಗಿತ್ತೆಂಬ ವಿಚಾರದಲ್ಲಿ, ಬ್ರಿಟಿಷ್ ಪ್ರಭುತ್ವವನ್ನು ಧ್ವಂಸಮಾಡುವುದೇ ಆಗಿತ್ತೆಂದು ಘೋಷಿಸುವುದಕ್ಕೆ ನಾನು ಹಿಂಜರಿಯುವುದಿಲ್ಲ. ಈ ಧ್ವಂಸಕಾರ್ಯವಾದರೂ ಏಕಕಾಲದಲ್ಲಾಗಿ, ಅದರ ಪರಿಣಾಮವಾಗಿ ಅನಾಯಕತ್ವ ವೇರ್ಪಡಬೇಕು. ಹೀಗೆ ಮಾಡಬೇಕೆಂಬುದೇ ಅವರ ಹಂಚಿಕೆ.

ಕಿಚ್ಚನ್ನು ಹಚ್ಚಿಬಿಟ್ಟರೆ ಜ್ವಾಲೆಗಳು ಹರಡಿ, ಧಗಧಗನೆ ಉರಿಯಲಾರಂಭವಾಗುತ್ತದೆ. ೧೮೩೫ರಲ್ಲಿ ಅಪರಂಪರನ ಪ್ರಯತ್ನ ಹೀಗೆ ಮಹಾ ವೇಗದಿಂದ ಮುಂದುವರಿಯಲಿಲ್ಲವೆಂದವರು ಭಾವಿಸಿದರು. ಅಂತಿಮ ಗುರಿಯಲ್ಲಿ 'ನಗರ ಸಿಂಹಾಸನ'ವೂ ಅವರ ಕಣ್ಮುಂದೆ ಪ್ರಧಾನವಾಗಿತ್ತೆಂದು ಬಹುಶಃ ಹೇಳಬಹುದು. ಆದರೆ

ಅದು ದೂರದ ಆಶೆ, ಸಂಭವಗಳೆಂದು ಕಾಣಬರುತ್ತದೆ. ಇದಕ್ಕಾಗಿ ಪೂರ್ವಭಾವಿ ಸಿದ್ಧತೆಯೇನೂ ನಡೆದಂತೆ ತೋರುವುದಿಲ್ಲ.

ಪಿತೂರಿಗಾರರ ತಕ್ಷಣದ ಉದ್ದಿಶ್ಯ ಕೊಡಗಿನಲ್ಲಿ ಬ್ರಿಟಿಷ್ ಪ್ರಭುತ್ವವನ್ನು ಕೊನೆಗಾಣಿಸುವುದು; ಆ ದೇಶದಲ್ಲಿ ಹಿಂದೂ ರಾಜಮನೆತನದ ಪ್ರಭುತ್ವವನ್ನು ಪುನಃ ಸ್ಥಾಪಿಸುವುದು. ಇದೇ ಅವರ ಉದ್ದಿಶ್ಯವೆಂದು ನಿಸ್ಸಂಶಯವಾಗಿ ಹೇಳಬೇಕು." [2]

ಬಂಡಾಯದ ನಾಯಕ ಅಪರಂಪರ ಸ್ವಾಮಿ ಅನೇಕ ನಿರೂಪಗಳನ್ನು ಹೊರಡಿಸಿ, ಅವುಗಳ ಮೂಲಕ ತಾನು ಸಾಧಿಸಬೇಕಾದುದನ್ನು, ಜನರ ಬೆಂಬಲದ ಮೂಲಕ ಗಳಿಸಿದ. ೧೮೩೭ನೇ ಮಾರ್ಚಿ ೩ನೇ ತಾರೀಖಿನಲ್ಲಿ ಕೊಡಗಿನ ಪ್ರಜೆಗಳನ್ನೆಲ್ಲ ಸಂಬೋಧಿಸಿ ಹೊರಡಿಸಿದ ನಿರೂಪವಿದು :

"ನಾವು ಬಳ್ಳಾರಿಯಲ್ಲಿ ವಾಸಮಾಡುತ್ತಿದ್ದೇವೆ. ಎಂದಿನಂತೆಯೇ ನಿಮ್ಮೆಲ್ಲರ ಸಂರಕ್ಷಣಾ ಕಾರ್ಯಕ್ಕೆ ಕೀರ್ತಿ ಪಡೆದಂತೆ ಈಗಲೂ ನಿಯುಕ್ತರಾಗಿದ್ದೇವೆ. ಆದ ಕಾರಣ ನೀವೆಲ್ಲ ನಮ್ಮ ಸನ್ನಿಧಾನಕ್ಕೆ ಬಂದು, ಪಾದದರ್ಶನ ಮಾಡಿ, ನಿಮ್ಮ ಸಕಲಾಭೀಷ್ಟಗಳನ್ನೂ ಪಡೆಯತಕ್ಕದ್ದು. ಹೀಗೆ ಮಾಡಲು ನೀವು ತಡಮಾಡಿದ್ದಾದರೆ ಶಿವಮಹಾದೇವನು ಉಚಿತವಾದ ಕಾರುಬಾರಿನ ವ್ಯವಸ್ಥೆ ಉದ್ದಿಶ್ಯ ಸಾಧನೆಗಾಗಿ ಕೈಕೊಳ್ಳುತ್ತಾನೆ. ಇದನ್ನೆಲ್ಲ ಪರ್ಯಾಲೋಚಿಸಿ, ಕೃತಜ್ಞರಾಗಿರಿ." [3]

---

2. "With respect to the ulterior objects of the conspirators, I have no hesitation in declaring them to have been the destruction of the British power to such extent and in such direction as concurrent and consequent circumstances might have rendered possible in the anarchy which they were about to set on foot, trusting that when the fire was once kindled the flames would spread with that rapidity which marked the first attempt of Apparampara in 1835. Amongst the ulterior objects the ``Throne of Nuggur" may perhaps be particularly specified, though it also appears to have rested on distant hopes and circumstances, rather than on any arrangements previously prepared.

   The immediate object of the conspirators was doubtlessly the subversion of the British power in Coorg and the re-establishment of a Hindu Dynasty in that Country."

   Cotton's Report on the Insurrection in Canara and Coorg, Para 15 : Mysore State Archives.

3. "I am living at Bellary renowned for affording you protection and continuing the reputation of this sanction as before. You will therefore proceed to my presence to have the visit of my feet and gain all your wishes; should any of you delay in so doing, the Sivamahadeva will make such arrangements as may be deemed expedient for that purpose; you will consider this and be grateful."

   - Cotton's Report, M. S. A.

ಅದೇ ದಿನ ಹಾಲೇರಿ ಸಂಸ್ಥಾನದ ಅಪರಂಪರ ಕೋಜುಗೋಡು ಅಪ್ಪಯ್ಯ ಮತ್ತು ಮಲ್ಲಪ್ಪ ಗೌಡರಿಗೆ ಕಳುಹಿಸಿದ ನಿರೂಪವಿದು :

"ನಾನು ಬಲ್ಲಾರಿ ಕಚೇರಿಗೆ ಬಂದಿದ್ದೇನೆ. ನೀವು ತಕ್ಷಣ ನಿಮ್ಮ ಕೈಕೆಳಗಿನ ಗ್ರಾಮಗಳ ಜನರನ್ನು ಕರೆದುಕೊಂಡು ಕೋಜಗೋಡಿಗೆ ಹೊರಡತಕ್ಕದ್ದು. ಅಲ್ಲಿ ೫೦ ಜನರನ್ನು ಹಾಕತಕ್ಕದ್ದು; ಕಂಪೆನಿಯ ವಾಹನಗಳೂ, ತಪಾಲುಗಳೂ ಹೋಗದಂತೆ ನಿರೋಧಿಸತಕ್ಕದ್ದು. ಆ ರಸ್ತೆಯಲ್ಲಿ ಯಾರೂ ಓಡಾಡದಂತೆ, ಈ ಸುದ್ದಿಯನ್ನೊಯ್ಯದಂತೆ, ನೋಡಿಕೊಳ್ಳತಕ್ಕದ್ದು. ದಾರಿಯಲ್ಲಿ ಯಾರೇ ಸುಳಿದಾಡಲಿ, ಅವರನ್ನು ಶಸ್ತ್ರಾಸ್ತ್ರಗಳಿಂದ ಎದುರಿಸತಕ್ಕದ್ದು. ನೀವು ಯಾರನ್ನಾದರೂ ಬಿಟ್ಟದ್ದೇ ಆದರೆ ಅದಕ್ಕಾಗಿ ನಿಮಗೆ ಶಿಕ್ಷೆಯಾದೀತು. ಆದ್ದರಿಂದ, ಆಜ್ಞೆಯನ್ನು ಪಾಲಿಸಿ, ಕರ್ತವ್ಯವನ್ನು ಪ್ರಾಮಾಣಿಕತೆಯಿಂದ ನೆರವೇರಿಸಿ." [4]

'ರಾಜಾ ವೀರವಸಂತ ಪ್ರತಾಪ ಅಪರಂಪರ ಸ್ವಾಮಿ'ಯ ಸರದಾರ ಸುಬ್ಬರಾಯನು ಮಂಗಳೂರಿನ ನಿವಾಸಿಗಳಿಗೂ, ಸಾಹುಕಾರರಿಗೂ ೧೮೩೭ನೇ ಏಪ್ರಿಲ್ ೫ನೆಯ ತಾರೀಖಿನ ದಿನ ಒಂದು ನಿರೂಪವನ್ನು ಬರೆದು ಕಳುಹಿಸಿದ. ಅದರ ಒಕ್ಕಣೆ ಹೀಗಿದೆ:

"ಆಂಗ್ಲರ ವಿರುದ್ಧ ಯುದ್ಧ ಮಾಡಲು ಸ್ವಾಮಿಗಳ ಸೈನಿಕರು ಬಂದಿಳಿದಿದ್ದಾರೆ. ನೀವೆಲ್ಲ ನಮ್ಮೊಂದಿಗೆ ಸೇರಬೇಕೆಂದು ನಿಮಗೆ ಅಪ್ಪಣೆ ಮಾಡಲು ನಾನು ಆಜ್ಞಪ್ತನಾಗಿದ್ದೇನೆ. ನೀವೆಲ್ಲ ನಿಮ್ಮಲ್ಲಿರುವ ಆಯುಧಗಳನ್ನು ಹಿಡಿದು ಬರತಕ್ಕದ್ದು. ನೀವೀ ಆಜ್ಞೆಗೆ ತಪ್ಪಿ ನಡೆದರೆ ನಿಮ್ಮ ಮನೆತನದವರೆಲ್ಲರ ತಲೆಗಳನ್ನೂ ಕತ್ತರಿಸಿ ಹಾಕಲಾದೀತು. ಹನ್ನೆರಡು ಲಕ್ಷ ಸೈನಿಕರ ದಂಡು ಸೇರಲಿದೆ.

ಆದಕಾರಣ ನೀವು ತಕ್ಷಣ ಸ್ವಾಮಿಗಳ ಸಹಾಯಕ್ಕೆ ಬಂದು, ಸೈನ್ಯ ಸೇರುವಿರೆಂದು ಸುದ್ದಿಯನ್ನು ಕಳುಹಿಸತಕ್ಕದ್ದು. ಇಲ್ಲವಾದರೆ ಇದರ ದುಷ್ಪರಿಣಾಮಕ್ಕೆ ನೀವು

---

4. "I have arrived at the Bellary Cutcheri and you are directed to proceed to Kotagoond immediately taking the men with you of the villages under your charge and place 50 men at that place, to prevent the conveyance of the Company's Tappal as well as to use arms against any persons who may pass through that road and communicate on the subject. If you allow any papers to be carried away you will suffer punishment for the same; you will observe this and continue to conduct the duties faithfully."

- Cotton's Report, M. S. A

ಗುರಿಯಾಗುವಿರಿ. ನೀವೆಲ್ಲ ಸ್ವಾಮಿಗಳ ಸೈನ್ಯ ಸೇರಿದಿರಾದರೆ, ನಿಮ್ಮನ್ನು ಕಾಪಾಡಲಾಗುತ್ತದೆ. ಈ ನಿರೂಪ ಮುಟ್ಟಿದ ಕೂಡಲೆ ಉತ್ತರ ಬರೆಯತಕ್ಕದ್ದು." [5]

೧೮೩೭ ಏಪ್ರಿಲ್ ೧೨ನೇ ತಾರೀಖಿನ ದಿನ ತಿಮ್ಮಯ್ಯ, ದೇವಪ್ಪರಾಯಿಗಳಿಬ್ಬರೂ ಕೊಡಿಯಾಲಬೈಲ ಮಾಗಣೆ ಬಾಮಾ ಸೆಟ್ಟಿ, ನಾರಾಯಣ ಸೆಟ್ಟಿ ಮೊದಲಾದ ಮುಖ್ಯರಿಗೆ ನಿರೂಪ ಬರೆದು

"ಇಲ್ಲಿಗೆ ಖಾಸ್ ಸವಾರಿ ಸೈನ್ಯಸಮೇತ ಬಂದು ಹದಿನೈದು ದಿನಗಳಾದುವು. ನಮ್ಮ ಭೇಟಿ ತೆಗೆದುಕೊಳ್ಳಲು ಬರಲು ನೀವು ಭಯಪಟ್ಟು ನಿಂತಂತಿದೆ. ಈ ಪತ್ರ ಬಂದ ಕೂಡಲೆ ನೀವು ಜನರಿಗೆಲ್ಲ ಬುದ್ಧಿ ಹೇಳಿ, ಅವರನ್ನು ಸಮಾಧಾನಪಡಿಸಿ, ತಕ್ಷಣ ನೀವು ಫಿರಂಗಿಪೇಟೆಗೆ ಬರತಕ್ಕದ್ದು. ಅಲ್ಲೆ ನಾವು ತಂಗಿರುವುದು. ಕಂಪೆನಿಯವರು ಬಂದು ಗಲಾಟೆಗಳನ್ನೆಬ್ಬಿಸಿರುವರಷ್ಟೆ. ಈ ಕೋಲಾಹಲವನ್ನೆಲ್ಲ ಕೊನೆಗಾಣಿಸಿ, ಶಾಂತಿಸಮಾಧಾನಗಳನ್ನು ನೆಲೆಗೊಳಿಸಿ, ಜನರಿಗೆ ತೃಪ್ತಿಯನ್ನುಂಟುಮಾಡುವುದೇ ನಮ್ಮ ಆಗಮನದ ಉದ್ದಿಶ್ಯ. ನೀವು ಇಲ್ಲಿಗೆ ಬಂದಮೇಲೆ ಸ್ವಾಮಿಗಳ ಆಜ್ಞೆಯ ವಿವರಗಳೆಲ್ಲ ನಿಮಗೆ ಅರ್ಥವಾಗುತ್ತದೆ. ಖಾಸಾ ಸ್ವಾಮಿಗಳೇ ಮಾಡಿರುವ ಆಜ್ಞೆ ಇದು. ಹೀಗೆ ಭಾವಿಸಿ ತಕ್ಷಣ ಬರತಕ್ಕದ್ದು. ಇಲ್ಲವಾದರೆ ಇದರ ಫಲವನ್ನುಣ್ಣುವಿರಿ." [6]

---

5. "The Troops of the Swamy having arrived to fight a battle against the English, you are directed to join us, taking up arms and other weapons which you may possess and if you act otherwise, the whole of your family will be beheaded. There is a force consisting of 12 lakhs of troops expected and consequently you will send messages instantly as to your joining the force of the Swamy, as if otherwise, you will suffer the consequences. If you will all join, you will be protected. You must write with all haste on the receipt of this Niroop."

-Cotton's Report, M. S. A.

6. "Although it is 15 days since the arrival of Khas Sawari (meaning the pretender's own party) and the force, it appears that you are prevented by fear from coming to pay a visit to us; you are therefore directed that on the receipt of this letter to satisfy the whole of the people and proceed without fear to Feeringheepet where our camp is halted, for the purpose of paying a visit to us considering fully that we have now arrived for the purpose of restoring the people to that tranquility which the Company have disrturbed and after your arrival here, you will understand the whole particulars of the commands of the Swami. You will consider that you will feel the consequences if you attend not instantly to this affair considering that it is one ordered by the Swami personally." - Cotton's Report, M. S. A.

ಈ ಬಗೆಯ ನಿರೂಪಗಳಿಂದ, ಸಂದೇಶಗಳಿಂದ, ಜನರನ್ನು ಹುರಿದುಂಬಿಸುತ್ತ, ಶತ್ರು ಪಕ್ಷಪಾತಿಗಳಾದರೆ ಸರ್ವನಾಶ ಸಿದ್ಧವೆಂದವರನ್ನು ಹೆದರಿಸುತ್ತ, ಅಪರಂಪರ ಸ್ವಾಮಿ ಸಮಯ ಕಾಯುತ್ತಿದ್ದ.

ಬ್ರಿಟಿಷ್ ಆಡಳಿತಗಾರರು ಪುತ್ತೂರು, ಅಮರಸೂಳ್ಯ ತಾಲೂಕುಗಳನ್ನು ಕೊಡಗು ರಾಜ್ಯದಿಂದ ಬೇರ್ಪಡಿಸಿ, ದಕ್ಷಿಣ ಕೆನರಾ ಜಿಲ್ಲೆಗೆ ಸೇರಿಸಿದರು. ಈ ವರ್ಗಾವಣೆಯಿಂದ ಕೊಡಗಿನ ಜನರಿಗೆ ಬಹಳ ಅಸಮಾಧಾನವಾಯಿತು. ಭೂಮಿಕಾಣಿ, ಕಂದಾಯಕವಳಿಗೆ, ಆಸ್ತಿಪಾಸ್ತಿ ಮುಂತಾದ ವಿಚಾರಗಳಲ್ಲಿ ತಮಗೆ ಅನ್ಯಾಯವಾಯಿತೆಂದು, ಆ ವ್ಯವಸ್ಥೆಯನ್ನು ಪ್ರತಿಭಟಿಸಿದರು. ಜನರ ಈ ಮನೋಧರ್ಮವು ತನ್ನ ಸದವಕಾಶವೆಂದರಿತು, ಅಪರಂಪರ ಅವರನ್ನೊಲಿಸಿಕೊಂಡ. ೧೮೩೪ರಲ್ಲಿ ಕಂಪೆನಿ ಸರಕಾರದವರು ವೀರರಾಜನನ್ನು ಪದಚ್ಯುತನನ್ನಾಗಿ ಮಾಡಿದರಷ್ಟೆ. ಅಪರಂಪರ ತಾನೇ ಕೊಡಗು ರಾಜಮನೆತನದ ಪ್ರತಿನಿಧಿಯೆಂದು ಸಾರಿ, ಬ್ರಿಟಿಷ್ ಆಡಳಿತವನ್ನು ಉರುಳಿಸಲು ಸಿದ್ಧನಾದ. ಬಳ್ಳಾರಿ, ಪುತ್ತೂರು, ಸುಳ್ಯ, ಮಂಗಳೂರು ಮೊದಲಾದ ಕಡೆಗಳಲ್ಲಿ ಬಂಡಾಯದ ಕಿಡಿಗಳನ್ನು ಹಾರಿಸಿದ. ಅಧಿಕಾರಿಗಳು, ವರ್ತಕರು, ರೈತರು - ಹೆಚ್ಚೇನು ಜನತೆಯ ಬೆಂಬಲ ಪಡೆದ. ೧೮೪೧ರಲ್ಲಿ ಕೆನರಾ ಗಲಾಟೆಗಳ ಸಂಬಂಧವಾದ ವರದಿಯನ್ನು ಕೆನರಾ ಜಿಲ್ಲಾಧಿಕಾರಿ ಬ್ಲೇರ್ ಮತ್ತು ೧೮೩೭ರಲ್ಲಿ ವಿಚಾರಣೆ ಮಾಡಿ ವರದಿಯನ್ನೊಪ್ಪಿಸಿದ ಕಾಟನ್ ಇಬ್ಬರೂ ಅಪರಂಪರನು ಸಂಪಾದಿಸಿದ್ದ ಜನರ ಪ್ರೀತಿ ವಿಶ್ವಾಸಗಳನ್ನು ಕಂಡು ಆಶ್ಚರ್ಯ ಪಟ್ಟಿದ್ದಾರೆ.

"ಈ ರೈತರು ಬ್ರಿಟಿಷ್ ಸರಕಾರಕ್ಕೆ ತಾವು ಸಲ್ಲಿಸಬೇಕಾದ ರಾಜಭಕ್ತಿಯನ್ನು ತೊರೆಯಲು ಇದ್ದ ಉದ್ದಿಶ್ಯಗಳಲ್ಲಿ ಹಲವರು ಭಯದ ಪ್ರೇರಣೆಗಳಿಗೆ ಗುರಿಯಾಗಿ ಹಾಗೆ ಮಾಡಿರಬಹುದು. ಆದರೆ ಬಹು ಮಂದಿ ತಾವಾಗಿ ತಾವೇ ಮನಃಪೂರ್ವಕವಾಗಿ ಬಂಡಾಯದ ನಾಯಕರನ್ನು ಸೇರಿದರೆಂದು ಹೇಳುವುದರಲ್ಲಿ ಸಂಶಯವೇ ಇಲ್ಲ. ಬಂಡಾಯದ ನಾಯಕರು ತಮ್ಮ ಪ್ರಕಟಣೆಗಳಲ್ಲಿ ಮಹದಾಶೆಗಳನ್ನು ತೋರಿಸಿದರು. ಇವುಗಳಿಂದ ಜನರ್‍ರು ಆಕರ್ಷಿತರಾದರು. ನಮ್ಮ ಪ್ರಭುತ್ವವು ತಲೆಕೆಳಗಾಗುವುದೆಂದು ನಂಬಿದರು." [7]

---

7. Of the motives which led these ryots to desert their allegiance to the British Government, some it is probable were induced by intimidation, but the greater number there is no doubt voluntarily joined the rebel chiefs attracted by the liberal promises, held out in their proclamations and believing that our authority in the country was about to be overturned." Blair's Report to the Chief Secretary dated 14th March 1842. - Madras Records Office.

ಕಾಟನ್ ಹೇಳುವಂತೆ ಬಂಡಾಯಗಾರರಿಗೆ ಮೈಸೂರು ರಾಜ್ಯದಿಂದ ಅಷ್ಟೇನೂ ಸಹಾಯ ಒದಗಲಿಲ್ಲ. ಮಲಬಾರಿನಿಂದ ಅಲ್ಪಸ್ವಲ್ಪ ಸಹಾಯ ಸಿಕ್ಕಿತು. ಮೇಲಿನ ಕೊಡಗಿನಲ್ಲಿ ಬ್ರಿಟಿಷ್ ಪ್ರಭುತ್ವಕ್ಕೆ ಪ್ರಬಲ ವಿರೋಧ ಕಂಡುಬಂತು. ಕೆಳಕೊಡಗಿನಲ್ಲಿ ಅಷ್ಟಿರಲಿಲ್ಲ. ಅಂತೂ ಅಪರಂಪರಸ್ವಾಮಿ ೧೮೩೭ರ ಮಾರ್ಚಿ ತಿಂಗಳಲ್ಲಿ ತನ್ನ ಉಗ್ರ ಕಾರ್ಯಕ್ರಮವನ್ನಾರಂಭಿಸಿದ.

ಹುಜೂರು ಶಿರಸ್ತೇದಾರ ಬಳ್ಳಾರಿ ಪೇಟೆಗೆ ಜಮಾಬಂದಿಗಾಗಿ ಹೋಗಿದ್ದ. ಅವನೊಂದಿಗೆ ಹಲವರು ಉದ್ಯೋಗಿಗಳೂ ಇದ್ದರು. ಬಂಡಾಯಗಾರರು ಅಪರಂಪರನ ನಾಯಕತ್ವದಲ್ಲಿ ಶಿರಸ್ತೇದಾರ ಮೊದಲಾದವರನ್ನೆಲ್ಲ ಬಂಧಿಸಿದರು.

ಈ ಸುದ್ದಿ ೩೧-೩-೧೮೩೭ನೆಯ ದಿನ ಕೆನರಾ ಮ್ಯಾಜಿಸ್ಟ್ರೇಟ್ ಲೂವೆನ್‌ಗೆ ಬಂತು. ಅವನೀ ಸುದ್ದಿಯನ್ನು ನಂಬಲೇ ಇಲ್ಲ. ಆದರೂ ೧೬೦ ಸಿಪಾಯಿಗಳೊಂದಿಗೆ ತಕ್ಷಣ ಬಳ್ಳಾರಿ ಪೇಟೆ ಕಡೆ ಧಾವಿಸಿದ. ಅವನು ಪುತ್ತೂರು ಬಳಿ ಬರುತ್ತಲೇ ಅಪರಂಪರನು ತನ್ನ ಗೂಢಚಾರರನ್ನು ದಾರಿಯುದ್ದಕ್ಕೂ ನಿಲ್ಲಿಸಿದ್ದನೆಂದೂ, ಮಂಗಳೂರಿನಲ್ಲಿ ಬ್ರಿಟಿಷರ ಬಲವೇನೆಂಬುದನ್ನರಿಯಲು ಪ್ರಯತ್ನ ಮಾಡುತ್ತಿದ್ದನೆಂದೂ ಗೊತ್ತಾಯಿತು. ಲೂವೆನ್ ಮತ್ತು ಅವನ ಪರಿವಾರದವರ ತಂಟೆಗೆ ಒಂದೆರಡು ದಿನ ಯಾರೂ ಹೋಗಲಿಲ್ಲ. ಶಸ್ತ್ರಧಾರಿಗಳೂ, ಬರಿಗಯ್ಯವರೂ, ಅನೇಕರು ನಾನಾ ಕಡೆಗಳಿಂದ ಬಂದು ಸೇರಿದರು; ಲೂವೆನ್ ಬಂಗಲೆಯನ್ನು ಸುತ್ತುವರಿದರು. ಜನರ ಗುಂಪನ್ನು ತಡೆಗಟ್ಟಲು ಸರಕಾರಿ ಅಧಿಕಾರಿಗಳು, ನೌಕರರೊಬ್ಬರಾದರೂ ಸಹಕಾರ ಕೊಡಲಿಲ್ಲ. ಇದನ್ನು ಕಂಡು ಲೂವೆನ್‌ಗೆ ಕೈಕಾಲುಡುಗಿತು. ತಾನೆದುರಿಸಬೇಕಾದ ಪ್ರಬಲ ಶಕ್ತಿಯನ್ನರಿತ; ಮಂಗಳೂರನ್ನು ಕೈಬಿಡಬಾರದು; ಅದರ ಸಂರಕ್ಷಣೆಯವಶ್ಯಕ ಎಂದಾಲೋಚನೆ ಮಾಡಿದ. ಮಂಗಳೂರು ಕಡೆ ಮುಖಮಾಡಿ ೧೮ ಘಂಟೆಗಳಲ್ಲಿ ಮಂಗಳೂರು ಮುಟ್ಟಿದ. ದಾರಿಯೇನು ಸುಗಮವಾಗಿ ಸಾಗಲಿಲ್ಲ; ಹೊಡೆದಾಡುತ್ತಲೇ ಮುಂದೆ ಸಾಗಿದ. ಈ ಹೊಡೆದಾಟದಲ್ಲಿ ೬೦ ಮಂದಿ ಸತ್ತರು; ಉಳಿದವರು ಮಹಾ ಪ್ರಯಾಸಪಟ್ಟು ಮಂಗಳೂರು ಸೇರಿದರು.

ಲೂವೆನ್ ಮಂಗಳೂರು ಸೇರಿದ ಕೂಡಲೆ "ಬಂಟ್ವಾಳ, ಕಾಸರಗೋಡು ಖಜಾನೆಗಳ ಲೂಟಿಯಾಗಿ ಹೋಯಿತು. ೧೫೦೦೦ ರೂ.ಗಳವರೆಗೆ ಭಂಡಾರ ಬರಿದಾಯಿತು." ಎಂಬ ಸುದ್ದಿ ಬಂತು. ಕೂಡಲೆ "ಮಂಗಳೂರಿನ ಮುತ್ತಿಗೆಗಾಗಿ ಅಪರಂಪರನ ಸೈನ್ಯಗಳು ಮೂರೂ ಕಡೆಯಿಂದಲೂ ಬರುತ್ತಿವೆ" ಎಂಬ ಸಮಾಚಾರ ಬಂತು. ಶತ್ರು ಸೈನ್ಯ ಬಲ ಸುಮಾರು ೧೨೦೦೦ವೆಂದು ತಿಳಿದುಬಂತು. ಬಂಡಾಯವು ಜಿಲ್ಲೆಯಲ್ಲೆಲ್ಲ ಹರಡಿದೆಯೆಂದೂ, ಮಂಗಳೂರಿನ ಉತ್ತರದ ಹಲವು ಭಾಗಗಳನ್ನು ಬಿಟ್ಟರೆ ಉಳಿದ ಕ್ಷೇತ್ರವೆಲ್ಲ ದಂಗೆಗಾರರ ವಶವಾಗಿದೆಯೆಂದೂ ಲೂವೆನ್‌ಗೆ ಖಚಿತವಾಯಿತು.

ಮದರಾಸು, ಕಣ್ಣಾನೂರುಗಳ ಸಂಪರ್ಕವೂ ಇಲ್ಲದಂತಾಗಿ, ತನ್ನ ಸಹಾಯಕ್ಕೆ ಆ ಕಡೆಗಳಿಂದ ಸೈನ್ಯ ಬರುವುದೂ ಅಸಂಭವವೆನಿಸಿತು. ಮಂಗಳೂರಿನ ಸಂರಕ್ಷಣೆಗಾಗಿ ಕೇವಲ ೨೮೦ ಸಿಪಾಯಿಗಳು ಮಾತ್ರ ಇದ್ದರು. ಮೇಲಾಗಿ ಮಂಗಳೂರು ಪ್ರಜೆಗಳಲ್ಲಿ ಬಹಳ ಮಂದಿ ಮಾನ, ಪ್ರಾಣ ಸಂರಕ್ಷಣೆಯ ಸಲುವಾಗಿ ಊರು ಬಿಟ್ಟೋಡಿದರು.

ಹೀಗೆ ಬಿಕ್ಕಟ್ಟಿಗೆ ಸಿಕ್ಕಿ. ಲೂವೆನ್ ಅಧಿಕಾರಿಗಳನ್ನೆಲ್ಲ ಕರೆದು, ಮುಂದೇನು ಮಾಡಬೇಕೆಂಬ ವಿಚಾರ ವಿನಿಮಯ ಮಾಡಿದ. ಮಂಗಳೂರನ್ನು ಬಿಟ್ಟುಬಿಡಬೇಕು. ಅದಕ್ಕೆ ಮೊದಲು ಭಂಡಾರವನ್ನೂ, ಸರಕಾರದ ಉದ್ಯೋಗಿಗಳನ್ನೂ, ಸಿಪಾಯಿಗಳನ್ನೂ, ಅವರ ಸಂಸಾರಗಳನ್ನೂ, ದೋಣಿಗಳ ಮೂಲಕ ಕಣ್ಣಾನೂರಿಗೆ ಸಾಗಿಸಬೇಕು; ಹೀಗೆಂದು ನಿರ್ಧಾರವಾಯಿತು. ನಿರ್ಧಾರವಾದ ಮಾತ್ರಕ್ಕೇನಾಯಿತು? ಸಾಕಾದಷ್ಟು ದೋಣಿಗಳು ಬೇಕಲ್ಲ? ಈ ದುರಂತ ಸನ್ನಿವೇಶದಲ್ಲಿ ಲೂವೆನ್‌ಗೆ ಬೇರೆ ದಾರಿಯೇ ತೋರಲಿಲ್ಲ. ಮುಂಬಯಿ ಪ್ರಾಂತ್ಯದ ನೆರೆಹೊರೆ ಜಿಲ್ಲೆಗಳ ಕಡೆ ಮುಖಮಾಡಿ, ಸಹಾಯಕ್ಕಾಗಿ ಮೊರೆಯಿಟ್ಟ. ೪-೪-೧೮೩೭ನೇ ದಿನ ಧಾರವಾಡದ ಜಿಲ್ಲಾಧಿಕಾರಿಗೆ ಪತ್ರ ಬರೆದು ಮಂಗಳೂರಿನ, ಕೆನರಾ ಜಿಲ್ಲೆಯ, ಶೋಚನೀಯ ಪರಿಸ್ಥಿತಿಯನ್ನು ಕಣ್ಣುಕಟ್ಟುವಂತೆ ವರ್ಣಿಸಿದ. ತಕ್ಷಣ ಸೈನಿಕರನ್ನು ಕಳುಹಿಸಿ, ಕಾಪಾಡಿರೆಂದು ಬೇಡಿದ. ಜಿಲ್ಲಾಧಿಕಾರಿ ಬೇಬರ್ ತಕ್ಷಣ ಮುಂಬಯಿ, ಬೆಳಗಾಂ, ಹರಿಹರಗಳಿಗೆ ಸುದ್ದಿ ಕಳುಹಿಸಿದ; ಮಂಗಳೂರಿನ ಸಂರಕ್ಷಣೆಗಾಗಿ ಸಿದ್ಧರಾಗಿರೆಂದು ಸಂಬಂಧಪಟ್ಟ ಅಧಿಕಾರಿಗಳನ್ನೆಚ್ಚರಿಸಿದ.

ಒಂದು ವಾರದೊಳಗಾಗಿ ಮಂಗಳೂರಿನ ಸಹಾಯಕ್ಕೆ ಮುಂಬಯಿಯಿಂದ ಸೈನ್ಯ, ಮದ್ದು, ಗುಂಡು, ಸಕಲ ಸಂಗ್ರಾಮ ಸಾಧನಗಳೂ ಬರುವ ವ್ಯವಸ್ಥೆಯಾಯಿತು. ಸೈನಿಕರನ್ನೂ, ಸಾಮಾನು ಸರಂಜಾಮನ್ನೂ, ಒಯ್ಯಲು ಜಹಜುಗಳು ಸಿದ್ಧವಾದುವು. ಧಾರವಾಡ, ಬೆಳಗಾಂಗಳಿಂದ ಸೈನ್ಯಗಳು ವೆಂಗುರ್ಲಾಕ್ಕೆ ಹೊರಟವು. ಅಲ್ಲಿ ಜಹಜುಗಳನ್ನು ಹತ್ತಲಿಕ್ಕೆ ಶಿರಸಿ, ಸಿದ್ದಾಪುರ, ಬಾಲಾಘಾಟ್ ಕ್ಷೇತ್ರಗಳ ರಕ್ಷಣೆಗಾಗಿ ಕಣ್ಣಿಡಲು ಹರಿಹರದಿಂದ ಒಂದು ಪಡೆ ಸಾಗಿತು. ಇದಕ್ಕೆ ಮೊದಲು ಹೊನ್ನಾವರದ ಸಬ್-ಕಲೆಕ್ಟರು ಮಂಗಳೂರಿನ ಸಹಾಯಕ್ಕೆ ೬೦ ಮಂದಿಯನ್ನು ಕಳುಹಿಸಿದ್ದ.

ಈ ಮಧ್ಯೆ ಮಂಗಳೂರಿನ ಗತಿಯೇನಾಯಿತು ನೋಡೋಣ. ೫-೪-೧೮೩೭ನೆಯ ದಿನ ಬಂಡಾಯಗಾರರು ಮಂಗಳೂರು ಪ್ರವೇಶ ಮಾಡಿದರು. ಅನೇಕ ಸರಕಾರಿ ಕಟ್ಟಡಗಳಿಗೆ ಬೆಂಕಿ ಹಚ್ಚಿ, ಬೂದಿ ಮಾಡಿದರು. ಸಾರ್ವಜನಿಕ ಆಸ್ತಿ ಪಾಸ್ತಿ ಸರ್ವಸ್ವವನ್ನೂ ಧ್ವಂಸ ಮಾಡಿದರು. ಮಾಪಿಳ್ಳಾಗಳಲ್ಲಿ ಕೆಲವು ಗುಂಪಿನವರೂ ದಂಗೆಕೋರರೊಂದಿಗೆ ಸೇರಿ, ಊರಿಗೆ ಬೆಂಕಿ ಹಚ್ಚಿದರು. ಮಂಗಳೂರು ವಶವಾದ ಕೂಡಲೇ ಅದರ ಮೇಲೆ ಅಪರಂಪರ ತನ್ನ ಬಾವುಟವನ್ನು ಹಾರಿಸಿದ. ಇಲ್ಲಿ ಅಪರಂಪರ ಪುಟ್ಟಬಸಪ್ಪನೆಂಬ ಹೆಸರಿನಿಂದ

ಕಾಣಿಸಿಕೊಂಡನೆಂದೂ, ಮಂಗಳೂರಿನ ಜನರನ್ನು ಪ್ರೀತಿ, ವಿಶ್ವಾಸಗಳಿಂದ ಕಂಡು ಅವರನ್ನು ಪ್ರೋತ್ಸಾಹಿಸಿದನೆಂದೂ ಕಬ್ಬನ್‌ರವರು ಮಾಡಿರುವ ಟಿಪ್ಪಣಿಗಳಿಂದ ಕಂಡುಬರುತ್ತದೆ.

ಮಂಗಳೂರಿನ ಆಂಗ್ಲ ಸೈನಿಕರು ಬಂಡಾಯಗಾರರನ್ನು ಎದುರಿಸಲಾರದೆ ಅಲ್ಲಿನ ಖಜಾನೆಯನ್ನು ದಂಡಿನ ಕ್ಷೇತ್ರಕ್ಕೆ (ಕಂಟೋನ್‌ಮೆಂಟ್) ಸಾಗಿಸಿ ರಕ್ಷಿಸಿದರು. ಸಿಪಾಯಿಗಳೂ, ಸೇವಕರೂ ಎಲ್ಲರೂ ಪ್ರಾಣ ರಕ್ಷಣೆಗಾಗಿ ಆ ಕ್ಷೇತ್ರವನ್ನೇ ಸೇರಿದರು. ಧ್ವಜಸ್ತಂಭದ ಮೇಲೆ 'ಕಷ್ಟಕ್ಕೆ ಸಿಕ್ಕಿದ್ದೇವೆ' ಎಂದು ಸೂಚಿಸುವ ಬಾವುಟವನ್ನು ಹಾರಿಸಿದರು. ಮುಂಬಯಿಂದ ಮದರಾಸು ಕಡೆ ಹೋಗುತ್ತಿದ್ದ ಹಡಗಿನ ನೌಕಾ ದಂಡನಾಯಕ, ಅದೃಷ್ಟವಶಾತ್ ಈ 'ಸಂಕಟಸೂಚಕ ಧ್ವಜ' ಕಂಡ. ಹಡಗನ್ನು ನಿಲ್ಲಿಸಿದ; ವೇಗ ವೇಗವಾಗಿ ಬಂದು, ಸರ್ವನಾಶಕ್ಕೆ ಗುರಿಯಾಗಿದ್ದ ಹೆಂಗಸರು, ಮಕ್ಕಳನ್ನೆಲ್ಲ ಕಾಪಾಡಿದ. ಅಲ್ಲಿಂದ ಆ ಹಡಗು ಕಣ್ಣಾನೂರಿಗೆ ಓಡಿತು. ಮಲಬಾರ್, ಕೆನರಾ ಸೈನ್ಯಗಳ ನಾಯಕ ಬ್ರಿಗೇಡಿಯರ್ ಆಲನ್ ಅಲ್ಲಿದ್ದ; ಅವನಿಗೆ ಮಂಗಳೂರಿನ ಸಮಾಚಾರ ಹೋಯಿತು. ಕುಂಬಳದ ರಾಜಾ ರವಿವರ್ಮನೂ ಈ ದುರಂತ ವಾರ್ತೆಯನ್ನು ತಿಳಿಸಿದ್ದ. ಕೂಡಲೆ ಕರ್ನಲ್ ಗ್ರೀನನ ನಾಯಕತ್ವದಲ್ಲಿ ಸ್ವಲ್ಪ ಸೈನ್ಯವನ್ನು ಮಂಗಳೂರಿಗೆ ಕಳುಹಿಸಲಾಯಿತು. ಮುಂಬಯಿ ಕಡೆಯಿಂದಲೂ ಸೈನ್ಯ ಬಂತು. ಏಪ್ರಿಲ್ ೧೬ರ ವೇಳೆಗೆ ಬ್ರಿಟಿಷ್ ಅಧಿಕಾರಿಗಳೆಲ್ಲ ಕಲೆತು ವಿಚಾರ ಮಾಡಿ, ಬಂಡಾಯಗಾರರನ್ನೆದುರಿಸುವ ನಿಶ್ಚಯ ಮಾಡಿದರು. ೧,೨೦೦ ಮಂದಿ ಐರೋಪ್ಯರು, ಸಿಪಾಯಿಗಳ, ನಾಯಕತ್ವವನ್ನು ಕರ್ನಲ್ ಗ್ರೀನ್ ವಹಿಸಿದ; ಬಂಟ್ವಾಳದ ಹತ್ತಿರ ಬೀಡುಬಿಟ್ಟ. ಅಲ್ಲಿಗೆ ಮೇಜರ್ ಎವರೆಸ್ಟನೂ ಮುಂಬಯಿ ಸೈನ್ಯದೊಂದಿಗೆ ಬಂದು ಸೇರಿದ. ಏಪ್ರಿಲ್ ೨೯ನೆಯ ದಿನ ಗ್ರೀನನು ಅಡ್ಡಿ ಆತಂಕವೇನೂ ಇಲ್ಲದ ಸೈನ್ಯ ಸಮೇತವಾಗಿ ಬಳ್ಳಾರಿ ಪೇಟೆಗೆ ಬಂದ. ಆ ವೇಳೆಗೆ ಬ್ರಿಟಿಷರಿಗೆ ಮತ್ತೊಂದು ಅನುಕೂಲವೊದಗಿತು. ಈ ಬಂಡಾಯದಲ್ಲಿ ಕೊಡಗಿನಲ್ಲಿ ಹಲವರು ಭಾಗವಹಿಸಲಿಲ್ಲ ಮಾತ್ರವಲ್ಲ; ಬ್ರಿಟಿಷರಿಗೆ ಸಹಾಯ ಮಾಡಿದರು. ಕೊಡಗಿನ ದಿವಾನ ಬೋಪನ್ ಸುಳ್ಯವನ್ನು ವಶಪಡಿಸಿಕೊಂಡ. ಅಪರಂಪರ ಸ್ವಾಮಿ ವಶಪಡಿಸಿಕೊಂಡಿದ್ದ ಹುಜೂರು ಶಿರಸ್ತೇದಾರ ದೇವಪ್ಪನನ್ನೂ, ಡಾ| ಪಾಮರ್ ಮತ್ತು ಅವನ ಸಂಸಾರವನ್ನೂ ಬಂಧನದಿಂದ ಬಿಡುಗಡೆ ಮಾಡಿಸಿದ.

ಕೊಡಗಿನವರ ನೆರವಿದ್ದರೂ ಅಪರಂಪರನನ್ನು ಮೊದಲು ಹಿಡಿಯದೆ ಹೋದರೆ ಬ್ರಿಟಿಷರಿಗೆ ಜಯವಿಲ್ಲವೆಂದರಿತು ಲೂವೆನ್ ಒಂದು ಪ್ರಕಟಣೆ ಹೊರಡಿಸಿದ. ಅಪರಂಪರನನ್ನೂ, ಅವನ ಸಹಾಯಕರನ್ನೂ ಹಿಡಿದುಕೊಟ್ಟವರಿಗೆ ೧೦,೦೦೦ ರೂಪಾಯಿಗಳ ಬಹುಮಾನ ಕೊಡುವುದಾಗಿ ಸಾರಿದ. ೧೩-೫-೧೮೩೭ನೇ ದಿನ ಅಪರಂಪರ ಮತ್ತು ಅವನ ಸಹಾಯಕರನ್ನು ಬಂಧಿಸಿದ್ದಾಯಿತು.

"ಈ ಕಾರ್ಯಸಿದ್ಧಿಗೂ, ಬಂಡಾಯವನ್ನು ಸಂಪೂರ್ಣವಾಗಿ ಮಟ್ಟಹಾಕಲಿಕ್ಕೂ ಮುಖ್ಯವಾಗಿ ಕೊಡಗಿನ ದಿವಾನ ಬೋಪನ್ ಕಾರಣ; ಕೊಡಗಿನ ಸೈನ್ಯ ಕಾರಣ. ಕೆನರಾ ಜಿಲ್ಲೆಯಲ್ಲೆಲ್ಲ ಹರಡಿ, ನೆರೆಹೊರೆ ಪ್ರಾಂತ್ಯಗಳಿಗೂ ಹರಡುತ್ತಿದ್ದ ಈ ಬಂಡಾಯವನ್ನು ಆರು ವಾರಗಳಲ್ಲಿ ತಣ್ಣಗೆ ಮಾಡಲಾಯಿತು. ಈ ಮಹತ್ಕಾರ್ಯ ಸಾಧನೆಯಲ್ಲಿ ವಿಶೇಷ ಸೇವೆ ಸಲ್ಲಿಸಿದ ದಿವಾನ್ ಬೋಪನ್ ಮತ್ತು ಅವನ ಪಕ್ಷದವರಿಗೆ ಬಂಡಾಯಗಾರರಿಂದ ವಶಪಡಿಸಿಕೊಂಡ ಭಂಡಾರವನ್ನೆಲ್ಲಾ ಬಹುಮಾನವಾಗಿ ಕೊಡಲಾಯಿತು." [8]

"ಅಪರಂಪರ ಮತ್ತು ಅವನ ಅನುಯಾಯಿಗಳ ಕೃತ್ಯಗಳು, ಅವರು ಜನರಿಗೆ ಕೊಟ್ಟ ಭರವಸೆಗಳೇ ಮೊದಲಾದ ಸನ್ನಿವೇಶಗಳಿಂದ ಅವರ ಹಂಚಿಕೆಗಳು ಚೆನ್ನಾಗಿ ಸ್ಥಾಪಿತವಾಗುತ್ತವೆ. ಪ್ರಜೆಗಳನ್ನು ಲೂಟಿ ಮಾಡುವುದು ಅವರ ಉದ್ದಿಶ್ಯವಲ್ಲ. ಬ್ರಿಟಿಷ್ ಪ್ರಭುತ್ವವನ್ನು ಬುಡಮೇಲೆ ಮಾಡಿ, ತಮ್ಮ ಪ್ರಭುತ್ವ ಸ್ಥಾಪನೆ ಮಾಡುವುದೇ ಅವರ ಉದ್ದಿಶ್ಯವಾಗಿತ್ತು. ನಗರಗಳ, ಹಳ್ಳಿಗಳ ಲೂಟಿಲಬಾಡು ಅವರ ಇಚ್ಛೆಯಲ್ಲ; ಸರಕಾರದ ಖಜಾನೆಗಳನ್ನು ಲೂಟಿ ಮಾಡುವುದೊಂದೇ ಅವರ ಉದ್ದಿಶ್ಯ. ಪುತ್ತೂರು, ಅಮರ ಸುಳ್ಯಗಳ ಉದಾಹರಣೆಗಳಿಂದಿದು ಸ್ಪಷ್ಟವಾಗದಿರದು. ಬಂಡಾಯ ಬೆಳೆಸಿದವರಾದರೂ ಇಲ್ಲಿನ ನಿವಾಸಿಗಳೇ. ಜಿಲ್ಲೆಯ ಇತರ ಕಡೆಗಳಲ್ಲೂ ಬಂಡಾಯ ತಲೆ ಹಾಕಿತಷ್ಟೆ. ಎಲ್ಲೂ ಊರುಕೇರಿಗಳಲ್ಲಿ ಲೂಟಿಯಾಗಲಿಲ್ಲ. ಬಂಡಾಯುಗಾರರು ದೇಶದಲ್ಲೆಲ್ಲ ಲೂಟಿ ನಡೆಸಿದ್ದರೆ ಅದರ ಫಲವನ್ನು ಅವರೇ ಉಣಬೇಕಾಗುತ್ತಿತ್ತು." [9] ಎಂಬುದಾಗಿ ಕಬ್ಬನ್ ಅಭಿಪ್ರಾಯ ಪಡುತ್ತಾನೆ. ಅಪರಂಪರ ಸ್ವಾಮಿಗೆ ಜನರು ಕೊಟ್ಟ ಸಹಾಯ, ನೀಡಿದ ಬೆಂಬಲ ಕಂಡು ಬ್ರಿಟಿಷ್ ಅಧಿಕಾರಿಗಳಿಗೆ ಪರಮಾಶ್ಚರ್ಯವನ್ನುಂಟು ಮಾಡಿತು.

---

8. "The Insurrection was so broad-based and powerful and which threatened at the outset to extend to the whole of Canara and neighbouring provinces was crushed in about six weeks. In consideration of the vital and valuable services rendered by Dewan Bopan of Coorg and Party, the entire treasure found with the insurgents was given as reward to them." -Bombay Committee, History of Freedom Movement.

9. ``It is well established both from the instructions and promises of the Pretender and the acts of his followers that their design was to overthrow British authority and substitute their own - not to plunder the inhabitants. It was only, the Government treasuries that they plundered, not the towns and villages. Indeed it could not have been otherwise at least in Pootoor and Umrsodea, unless the rebels had plundered each other. For the people who swelled the insurgent ranks were the very residents and none other of the district in which the rebellion broke out - and if they had plundered the country, they themselves must necessarily have been the sufferers!" - Cubbon's Note on Cotton's Report - p. 164, para 44. M. S. A.

"ಈ ಪಿತೂರಿಗಳ ಆಲೋಚನೆ ಮಾಡಿದವರು ಯಾರು, ಹೇಗೆ? ಕೆನರಾ ಜಿಲ್ಲೆಯ ಪ್ರಮುಖ ಪ್ರಜೆಗಳೆಲ್ಲ ಸೇರಿ ಬ್ರಿಟಿಷ್ ಪ್ರಭುತ್ವವನ್ನೆದುರಿಸಿದರಲ್ಲ. ವಿಶಾಲ ಭಾರತದಲ್ಲಾದರೋ ದುಷ್ಟ ಜನರಿದ್ದರು; ಯಾವುದೇ ಸಂದರ್ಭದಲ್ಲಾಗಲಿ ಜನರನ್ನು ದಂಗೆಗೆಬ್ಬಿಸಲು ಸಿದ್ಧರಾಗಿದ್ದರೆಂಬುದನ್ನು ಸ್ಥಾಪಿಸಲಾಗಿದೆ. ಆದರೆ ಅತ್ಯಪೂರ್ವ ಶಾಂತಿಯು ನೆಲೆಸಿದ್ದಾಗ, ಮಾನ್ಯ ಕಂಪೆನಿಯ ನೇರವಾದ ಆಡಳಿತಕ್ಕೊಳಗಾಗಿದ್ದ ಪ್ರದೇಶದಲ್ಲಿ, ರೈತಾಪಿ ಜನರಲ್ಲಿ ಸಾವಿರಾರು ಮಂದಿ, ಕೇವಲ ಹಲವು ದಿನಗಳಲ್ಲಿ, ಶಸ್ತ್ರಪಾಣಿಗಳಾಗಿ ಮುಂದೆ ಬಂದು, ಗುಂಪುಕೂಡಿ, ಬ್ರಿಟಿಷ್ ಸರಕಾರವನ್ನೆದುರಿಸಿ, ಭಯಂಕರ ಬದ್ಧ ವೈರವನ್ನೂ, ಮನಸ್ಥೈರ್ಯವನ್ನೂ ತೋರಿಸಿದರಲ್ಲಾ! ಈ ಸಮಸ್ಯೆಯನ್ನು ಬಗೆಹರಿಸಬೇಕಾಗಿದೆ." [10] ಎಂಬುದಾಗಿ ಕಬ್ಬನ್ ಹೇಳುತ್ತಾನೆ. ೧೮೪೧ರಲ್ಲಿ ಈ ಬಂಡಾಯ ಕುರಿತು ಮತ್ತೊಂದು ವರದಿಯನ್ನು ಸಿದ್ಧಮಾಡಿದ ಕೆನರಾ ಜಿಲ್ಲಾಧಿಕಾರಿ ಬ್ಲೇರನೂ ಸಹ ಅಪರಂಪರ ಸ್ವಾಮಿಗೆ ಜನತೆಯ ಬೆಂಬಲ ಅಪಾರವಾಗಿತ್ತೆಂದೂ, ಜನರು ತಾವಾಗಿಯೇ ಅಪರಂಪರನ ಬಂಡಾಯ ಧ್ವಜದಡಿ ಕೂಡುತ್ತಿದ್ದರೆಂದೂ ಹೇಳಿದ್ದಾನೆ.

" ನಿಜವಾಗಿಯೂ ಇದು ಜನರ ಬಂಡಾಯ; ಜನರು ಸರಕಾರವನ್ನು ಪ್ರತಿಭಟಿಸಿ ನಿಂತ ದಂಗೆ. ಜನರೊಂದಿಗೆ ಸರಕಾರದ ಅಧಿಕಾರಿಗಳೂ, ಗ್ರಾಮಾಧಿಕಾರಿಗಳೂ ಸೇರಿದ್ದರೆಂದುನಂಬಲಾಗಿದೆ. ಈ ಬಂಡಾಯ ಕಾಲಪೂರ್ತ ಕೊಡಗಿನ ಜನರು ಸರಕಾರದ ಭಕ್ತರಾಗಿ ವರ್ತಿಸಿದರೆಂಬುದೊಂದು ಮಾತ್ರ ನಿರಾಶೆಯನ್ನುಂಟು ಮಾಡತಕ್ಕ ವಿಷಯ. ಈ ಕಾರಣದಿಂದಲೆ ದಿವಾನ್ ಬೋಪಣ್ ಬಂಡಾಯದ ನಾಯಕರನ್ನು ಹುಡುಕಿ ಹಿಡಿದು, ಅವರ ದ್ರೋಹ ಕೃತ್ಯಗಳ ಹುಟ್ಟಡಗಿಸಲು ಸಮರ್ಥನಾದ. ಈ ಬಂಡಾಯದ

---

10. "Nor at this time is it perhaps of so much consequence to ascertain how or by whom the plot was framed as to know how it occurred that so large a portion of influential population of the Collectorate of Canara was ready to take part in a movement against the British Government for the fact of the existence of ill disposed persons throughout all India ready to seize an opportunity to excite revolt has been often proved; but it remains to be solved how in a time of profound peace and in a territory for sometime subject to the immediate control of the Honourable company such persons could find among the resident agricultural population, many thousands of individuals eager to assemble in arms against Government at a few day's warning and actuated by such determined and bitter spirit of hostility." -Cubbon's Note on Cotton's Report - p. 122. M. S. A.

ನಾಯಕರನ್ನೆಲ್ಲ ಬಂಧಿಸಿ, ವಿಚಾರಣೆಗೆ ಗುರಿಪಡಿಸಿ, ಮರಣ ಶಿಕ್ಷೆ ವಿಧಿಸಿದ್ದಾಯಿತು." [11] ಈ ಬಂಡಾಯದ ಪ್ರಮುಖ ಪಾತ್ರಗಳ ಸೂಕ್ಷ್ಮ ಪರಿಚಯ ಆವಶ್ಯಕ.

ಪುಟ್ಟಬಸವಪ್ಪ: ಇವನೊಬ್ಬ ಜಂಗಮ; ಕೊಡಗಿನ ಏಳು ಸಾವಿರ ಸೀಮೆಯವ. ಮಡಿಕೇರಿಯಲ್ಲಿ ಅರಮನೆಯನ್ನು ಕಟ್ಟುವಾಗ ಇವನು ಸಾಮಾನುಗಳನ್ನು ಹೊತ್ತು ಹೊಟ್ಟೆ ಹೊರೆದುಕೊಳ್ಳುತ್ತಿದ್ದ. ಆ ಮೇಲೆ ತಿರುಕನಾಗಿ ತಿರುಗಾಡುತ್ತಿದ್ದ. ಹೋಬಳಿ ಕಚೇರಿಯ ಕಾವಲುಗಾರನಾಗಿಯೂ ಇದ್ದ. ಅವನ ಹೆಂಡತಿ ಅವನನ್ನು ಬಿಟ್ಟುಬಿಟ್ಟಳು. ಅವಳ ಅಭಿಪ್ರಾಯದಲ್ಲಿ ಅವನು ಹುಂಬ, ಅವಿವೇಕಿ.

ಮಂಗಳೂರಿಂದ ಹಿಂತಿರುಗಿದ ಮೇಲೆ ಅಪರಂಪರನ ಜತೆಗೂಡಿ, ಅವನೊಂದಿಗೆ ಮೈಸೂರಿನ ಹೊಸಕೋಟೆಗೆ ಹೋದ. ಸುಮಾರು ೧೮೩೪ರಿಂದ ಮೊದಲಾಯಿತು ಇವರಿಬ್ಬರ ಸ್ನೇಹ. ೧೮೩೭ರಲ್ಲಿ ಇವನಿಗೂ ಹುಲಿಕಡಿದ ನಂಜಯ್ಯನಿಗೂ ಸ್ನೇಹವುಂಟಾಯಿತು. ನಂಜಯ್ಯ ಮಹಾ ಸಂಚುಗಾರ. ಅಪ್ಪಾಜಿ ಅರಸನ ಮಗನೊಬ್ಬನಂತೆ ಹೇಳಿಕೊಂಡು ವರ್ತಿಸೆಂದು ಪುಟ್ಟಬಸಪ್ಪನಿಗೆ ಉಪದೇಶ ಮಾಡಿದವನಿವನೆ. ಪುಟ್ಟಬಸವ ಬಂಡಾಯದ ನಾಯಕನಾದ.

ಅವನನ್ನು ಬಂಧಿಸಿ, ಮಂಗಳೂರಲ್ಲಿ ಗಲ್ಲಿಗೇರಿಸಿದರು.

**ಹುಲಿಕಡಿದ ನಂಜಯ್ಯ:** ಮೈಸೂರು ದೇಶದ, ಹಾಸನದ ಜಿಲ್ಲೆಯ ಅರಕಲಗೂಡಿನವ. ಬಹಳ ಕಾಲದಿಂದ ಕೊಡಗಿನ ನಿವಾಸಿ. ಕೊಡಗಿನಿಂದ ಮೈಸೂರಿಗೆ ಅಕ್ಕಿ ಕಳುಹಿಸುವುದವನ ವ್ಯಾಪಾರ. ದ್ರವ್ಯಾಪಹಾರ ದೂರೊಂದು ಬರಲು ನಂಜಯ್ಯ ನಗರ ಪ್ರಾಂತ್ಯಕ್ಕೋಡಿ, ತಲೆ ತಪ್ಪಿಸಿಕೊಂಡ. ಕೊಂಚ ಕಾಲದ ಮೇಲೆ ಹಲವು ಜಂಗಮರನ್ನು ಕಟ್ಟಿಕೊಂಡು ಮತ್ತೆ ಕೊಡಗಿಗೆ ಹಿಂತಿರುಗಿದ. ಮೈಸೂರಿಗೆ ಅಕ್ಕಿ ಕಳುಹಿಸುವ ವ್ಯಾಪಾರದಲ್ಲಿ ತೊಡಗಿದ. ಐದು ತಿಂಗಳ ಕಾಲ ಆಗಾಗ್ಗೆ ಅರಪುರ ಬಸವಪ್ಪಾಜಿ ಮನೆಗೆ ಬಂದು ಹೋಗುತ್ತಿದ್ದ. ಆಮೇಲೆ ಏಳೆಂಟು ವರ್ಷಗಳ ಕಾಲ ಅವನೆಲ್ಲೂ ಕಾಣಬರಲಿಲ್ಲ.

---

11. "....... It was really a people's revolt against the Government because along with the people the whole of the Headmen and Government officers were believed to have been included in it. The disappointing feature, however, of this rising was that the people of Coorg had remained loyal to the Government throughout and it was due to this factor that Dewan Bopan was able to trace the leaders of the insurgents and deal a crushing blow to their treasonable operations. The arrested leaders of this serious rising were afterwards tried and given condign punishment." -Bombay Committee, History of Freedom Movement.

ಅವನು ಹೈದರಾಬಾದ್, ದೆಹಲಿ, ಲಾಹೋರ್ ಮೊದಲಾದ ದೂರ ಪ್ರದೇಶಗಳಲ್ಲೆಲ್ಲ ಸಂಚಾರಮಾಡಿ, ಹಿಂತಿರುಗಿ, ಅಪರಂಪರನನ್ನು ಸೇರಿದಂತೆ ಕಂಡುಬರುತ್ತದೆ. ೧೮೩೪ ಸುಮಾರಿನಲ್ಲಿ ಅಪರಂಪರನನ್ನು ಬ್ರಿಟಿಷರು ಮೈಸೂರಲ್ಲಿ ಹಿಡಿಯಲು, ನಂಜಯ್ಯ ಕೆಳಕೊಡಗು, ಮೈಸೂರುಗಳಿಂದ ತಿರುಚನಾಪಳ್ಳಿಗೆ ಅಪರಂಪರ, ಕಲ್ಯಾಣಪ್ಪ, ರಾಮಯ್ಯ ಗೌಡರ ಸಂದೇಶಗಳನ್ನೊಯ್ಯುತ್ತಿದ್ದ. ಒಮ್ಮೆ ಇವನು ಸಂಚಾರ ಮಾಡುತ್ತಿದ್ದಾಗ, ಅವನ ಮೇಲೆ ಹುಲಿ ಹಾರಿ, ಕಚ್ಚಿತು. ಅಂದಿನಿಂದ ಅವನಿಗೆ ಹುಲಿ ಕಡಿದ ನಂಜಯ್ಯನೆಂದು ಹೆಸರಾಯಿತು. ೧೮೩೬ರಲ್ಲಿ ಇವನು ಸುಬ್ರಹ್ಮಣ್ಯ ಜಾತ್ರೆಗೆ ಹೋದ. ಅಲ್ಲಿಂದ ೧೮೩೭ರಲ್ಲಿ ಸುಳ್ಯದ ರಾಮಯ್ಯ ಗೌಡನ ಮನೆಗೆ ಹೋದ. ಕಬ್ಬಿಣದ ಹೂಜಿಯೊಂದನ್ನು ತೆಗೆದುಕೊಂಡು ತಿರುಚನಾಪಳ್ಳಿಗೆ ಹೊರಟ. ಅಪರಂಪರನ ಭೇಟಿಗಾಗಿ ಹೋಗುವುದು ಪ್ರಮಾದವೆಂದು ಮೈಸೂರಿನಲ್ಲರಿತ. ಕೊಡಗಿಗೆ ಬಂದು ಪುಟ್ಟಬಸವಯ್ಯನ ಮನೆಸೇರಿ, ಅವನನ್ನು ನಾಯಕನನ್ನಾಗಿ ಆರಿಸಿ, ಅವನನ್ನು ರಾಮಯ್ಯ ಗೌಡನ ಬಳಿಗೊಯ್ದ. ಅವನು ಪುಟ್ಟಬಸಪ್ಪನನ್ನು ಕೆಳಕೊಡಗಿನ ಕಾಡಿನಲ್ಲಿ ಬಿಟ್ಟು, ತಲೆಮರೆಸಿಕೊಂಡಿರುವಂತೆ ಹೇಳಿದ. ದಂಗೆ ಆರಂಭಕ್ಕೆ ಮೊದಲು ಎರಡು ತಿಂಗಳ ಕಾಲ ಪುಟ್ಟಬಸವಯ್ಯ ಕಾಡಿನಲ್ಲೇ ಅವಿತುಕೊಂಡಿದ್ದ. ಅನಂತರ ಯಾರ ಕೈಗೂ ಸಿಗದೆ ತನ್ನ ಸಾಹಸ ಕಾರ್ಯ ಮುಂದುವರಿಸಿದ.

**ರಾಮಯ್ಯ ಗೌಡ:** ಕೆಳಕೊಡಗಿನ ಕಡಂಪಾಡಿ ಗ್ರಾಮದವ. ಅಲ್ಲಿ ಅವನ ಮನೆಯೊಂದಿತ್ತು. ಮೇಲಣ ಕೊಡಗಿನ ಸೇತ್ವನೆಯಲ್ಲೂ ಅವನ ಮನೆಯೊಂದಿತ್ತು. ಸಾಮಾನ್ಯವಾಗಿ ಅವನ ಸಂಸಾರವಲ್ಲೇ ಇರುತ್ತಿತ್ತು. ಅವನ ಸಮೀಪ ಬಂಧುಗಳು ಮೂವರು ಹಿಂದಿನ ಕೊಡಗು ರಾಜರ ಸೇವೆ ಮಾಡುತ್ತ, ಅಧಿಕಾರ ಸ್ಥಾನಗಳಲ್ಲಿದ್ದರು. ವೀರಣಬಂಟ, ಹುಲಿ ಕಡಿದ ನಂಜಯ್ಯ, ಷೇಕ್, ಸರಕಾಜೆ ಮಲ್ಲಯ್ಯ ಮುಂತಾದವರ ಮೂಲಕ ಸಂದೇಶಗಳನ್ನು ಕಳುಹಿಸಿ ತಿರುಚನಾಪಳ್ಳಿ, ಮೈಸೂರು, ಕೊಡಗುಗಳೊಂದಿಗೆ ನಿಕಟ ಸಂಪರ್ಕವನ್ನಿಟ್ಟುಕೊಂಡಿದ್ದ. ಹಿಂದೊಮ್ಮೆ ಕಬ್ಬಿಣದ ಹೂಜಿಯನ್ನು ಕಳುಹಿಸಿದ್ದನೆಂದು ತಿಳಿಸಲಾಯಿತಷ್ಟೆ. ಬಂಡಾಯಗಾರರ ಸಂಕೇತವಿದು. 'ಒಳಸಂಚುಗಳ ವ್ಯವಸ್ಥೆ ಪೂರ್ಣವಾಯಿತು' ಎಂಬ ಅರ್ಥವನ್ನೀ ಹೂಜಿ ಸೂಚಿಸುತ್ತಿದ್ದಂತೆ ಕಂಡುಬರುತ್ತದೆ. ೧೮೫೮ರಲ್ಲಿ ದಂಗೆಯ ಪ್ರಚಾರಕರು ಭಾರತದಲ್ಲೆಲ್ಲ ಚಪಾತಿಗಳನ್ನು ಹಂಚುತ್ತಿದ್ದುದು ಈ ಸಂದರ್ಭದಲ್ಲಿ ನೆನಪಿಗೆ ಬರುತ್ತದೆ. ಮೊದಲಿನ ಸಂಚು ವಿಫಲವಾಗಲು ಅಪರಂಪರನ ಹೆಸರಿನಲ್ಲಿ ಪುಟ್ಟಬಸವಯ್ಯನನ್ನು ಮುಂದಿಟ್ಟು ಪ್ರಕಟಣೆ ಹೊರಡಿಸಿದ.

**ರಾಮಪ್ಪ:** ಕೊಡಗಿನ ದಿವಾನ ಲಕ್ಷ್ಮೀನಾರಾಯಣನ ಸಹೋದರ. ಕೆಳಕೊಡಗಿನ ಸೂಳ್ಯದ ನಿವಾಸಿ. ರಾಮಯ್ಯ ಗೌಡನ ರಹಸ್ಯ ವ್ಯವಹಾರಗಳಲ್ಲೆಲ್ಲ ಇವನು ಭಾಗವಹಿಸಿದ. ತನ್ನ ಸಹೋದರನನ್ನೂ, ಈ ಬಂಡಾಯಕ್ಕೆ ತಂದು, ಅವರು ನೆರವಾಗುವಂತೆ ಮಾಡುವುದಾಗಿ ಭರವಸೆ ಕೊಟ್ಟ. ಆದರೆ ಮಾತು ಕೊಟ್ಟಂತೆ ಅವನು ನಡೆಯಲಿಲ್ಲ. ಬಳ್ಳಾರಿ ಪೇಟೆಯಿಂದ ಬಂಡಾಯಗಾರರು ಮುಂದುವರಿದಾಗ, ರಾಮಯ್ಯ ಗೌಡನ ಪ್ರಾರ್ಥನೆಯಂತೆ ದಂಗೆಗಾರರು ರಾಮಪ್ಪನನ್ನು ಹಿಡಿದು ಕೊಂದು ಹಾಕಿದರು.

**ಲಕ್ಷ್ಮಣ ಬಂಗ:** ಇವನೊಬ್ಬ ರಾಜವಂಶೀಯ. ಇವನ ಪೂರ್ವಿಕರು ಕೆನರಾ ಜಿಲ್ಲೆಯ ಮಂಗಳೂರು ಮತ್ತು ಘಟ್ಟಗಳ ಮಧ್ಯದ ಕ್ಷೇತ್ರವೊಂದರಲ್ಲಿ ಅರಸರಾಗಿದ್ದರು. ಬಂಗ ರಾಜನೆಂದೂ ಇವನ ಹೆಸರು.

ಹೈದರ್, ಟಿಪ್ಪುಗಳ ಕಾಲದಲ್ಲೇ ರಾಜ್ಯ ಇವರ ಕೈಬಿಟ್ಟು ಹೋಗಿತ್ತು. ಕೆಳಕೊಡಗಿನ ಬಂಟ್ವಾಳದ ಬಳಿ, ಮುಂಡವಾರದಲ್ಲಿ, ಅಲ್ಪ ರಾಜವೇತನ ಪಡೆದು ಕಾಲ ಹಾಕುತ್ತಿದ್ದ. ಬಂಡಾಯಗಾರರು ಮಂಗಳೂರು ಮುಟ್ಟುತ್ತಲೇ ಲಕ್ಷ್ಮಣ ಬಂಗ ಬಂಡಾಯಗಾರರನ್ನು ಸೇರಿದ. ಬಂಡಾಯದ ನಾಯಕರು "ನಿನ್ನನ್ನು ಮತ್ತೆ ನಿನ್ನ ಸಿಂಹಾಸನದ ಮೇಲೆ ಕೂಡಿಸುತ್ತೇವೆ" ಎಂದು ಭರವಸೆ ಕೊಟ್ಟಿರಬಹುದು. "ಅಲ್ಪ ವೇತನ ಪಡೆದು ನಾನು ಜೀವಿಸುವುದಾದರೂ ಹೇಗೆ" ಎಂದವನು ಹೇಳಿದ ಮಾತು ಈ ಅನುಮಾನಕ್ಕೆ ಪುಷ್ಟಿ ಕೊಡುತ್ತದೆ. ಮಂಗಳೂರಲ್ಲಿ ಇವನನ್ನು ಶತ್ರುಗಳು ಕೈಸೆರೆ ಹಿಡಿದು, ಗಲ್ಲಿಗೇರಿಸಿದರು.

**ಗೂಡೆ ಅಪ್ಪಯ್ಯ:** ಗೂಡೆ ತಮ್ಮಯ್ಯ, ಗೂಡೆ ಅಪ್ಪಯ್ಯ ಇಬ್ಬರೂ ಅಣ್ಣತಮ್ಮಂದಿರು; ಇಬ್ಬರೂ ಬಂಡಾಯದ ನಾಯಕರು. ಇವರಿಬ್ಬರೂ ಮೇಲಣ ಕೊಡಗಿನವರು. ಕೊಡಗಿನ ರಾಜರಲ್ಲಿ ಅಪ್ಪಯ್ಯ ಜಮಾದಾರನಾಗಿದ್ದ. ದಂಗೆಯ ಕಾಲದಲ್ಲಿ ಅಮರದಲ್ಲಿದ್ದ. ಅವನನ್ನು ಸುಬಾದಾರನನ್ನಾಗಿ ಮಾಡಿದರು. ಎರಡನೆಯ ಮುತ್ತಿಗೆಯಲ್ಲಿವನು ಭಾಗವಹಿಸಿದ್ದ. ಆ ಪ್ರಯತ್ನದಲ್ಲಿ ವಿಫಲನಾಗಿ ಅಪರಂಪರನ ಬಳಿ ಬಂದು 'ನಿಮ್ಮ ಸಹಾಯಕ್ಕೆ ಕೊಡಗಿನವರನ್ನೆಲ್ಲಾ ತರುತ್ತೇನೆ' ಎಂದು ಹೇಳಿ, ಘಟ್ಟ ಹತ್ತಿ, ಸುಬಾದಾರ ಮಾದಯ್ಯನ ಅನುಯಾಯಿಗಳನ್ನು ಕಂಡು, 'ಹಿಂದಿನ ಕೊಡಗು ರಾಜರು ಓಡಿ ಹೋದರು. ಅಪರಂಪರ ಸ್ವಾಮಿಗಳು ಸುಬಾದಾರ ಮಾದಯ್ಯನನ್ನು ಹಿಡಿದು ತರುವಂತೆ ನನಗೆ ಆಜ್ಞೆ ಮಾಡಿದ್ದಾರೆ". ಮುಂತಾಗಿ ಅವರಿಗೆ ಹೇಳಿದ. ಅಲ್ಲಿಂದ ಬಿಸಲೆ ಘಾಟಿನಿಂದ ಸೈನ್ಯ ಸಮೇತ ಬರುತ್ತಿದ್ದ ಕೂಜಗೋಡೆ ಮಲ್ಲಯ್ಯ, ಅಪ್ಪಯ್ಯಗಳನ್ನು ಸೇರಿದ. ಎಲ್ಲರೂ ಮಡಿಕೇರಿಯ ಮೇಲೆ ಧಾಳಿ ಹೊರಟರು. ಕೊಡಗು ಸುಬೇದಾರ ಅಪ್ಪಾಚುವನ್ನು ಹಿಡಿದರು. ಉತ್ತರ ಕೊಡಗಿನವರೆಲ್ಲ ಬಂಡಾಯಗಾರರನ್ನು ಸೇರಿದರು. ಕೂಜಗೋಡೆ

ಮಲ್ಲಯ್ಯ, ಸುಬೇದಾರ ಮಾದಯ್ಯ ಇವರೆಲ್ಲರ ಸೈನ್ಯದೊಂದಿಗೆ ಮಡಿಕೇರಿಯನ್ನು ಮುತ್ತಲು ಒಂದು ದಿನ ನಿಶ್ಚಯ ಮಾಡಿದ. ಆ ವೇಳೆಗೆ ಒಂದು ಕಡೆಯಿಂದ ದಿವಾನ್ ಬೋಪನ್, ಇನ್ನೊಂದು ಕಡೆಯಿಂದ ದಿವಾನ್ ಪೂಣಪ್ಪ ಇಬ್ಬರೂ ಸೈನ್ಯ ಸಮೇತ ಬಂದು ಬಂಡಾಯಗಾರರನ್ನೆಲ್ಲ ಚದರಿಸಿದರು. ಗೂಡೆ ಅಪ್ಪಯ್ಯ ತಪ್ಪಿಸಿಕೊಂಡು, ಓಡಿದ. ಆದರೆ ಅವನನ್ನು ಹಿಡಿದು, ಮಡಿಕೇರಿಯಲ್ಲಿ ಅವನನ್ನು ಗಲ್ಲಿಗೆ ಹಾಕಿದರು.

**ಗೂಡೆ ತಮ್ಮಯ್ಯ:** ಅಪ್ಪಯ್ಯನ ಸಹೋದರ. ಹಿಂದೆ ರಾಜರ ಕಾಲದಲ್ಲಿ ಅಮರದ ಪಾರುಪತ್ಯಗಾರನಾಗಿದ್ದ. ಕೆಳಗಣ ಕೊಡಗನ್ನು ಕೆನರಾ ಜಿಲ್ಲೆಗೆ ಸೇರಿಸಿದ ಮೇಲೆ, ೧೮೩೪ರಿಂದ ಅಪರಂಪರನೊಂದಿಗೆ ಸೇರಿ ಪಿತೂರಿಗಳಲ್ಲಿ ಆಸಕ್ತನಾಗಿದ್ದ.

**ಕೂಜಗೋಡೆ ಅಪ್ಪಯ್ಯ, ಮಲ್ಲಪ್ಪ ಗೌಡ:** ಸುಬ್ರಹ್ಮಣ್ಯದ ಬಳಿಯ ಕೂಜಗೋಡದವರು. ದೊಡ್ಡ ಮನೆತನದವರು. ಸುಬ್ರಹ್ಮಣ್ಯ ಜಾತ್ರೆಯ ಕಾಲದಲ್ಲಿ ಮೇಲ್ವಿಚಾರಣೆ ನಡೆಸುತ್ತಿದ್ದರು. ಆ ಸೋದರವರ್ಗಕ್ಕೆ ಸೇರಿದವನೇ ಕುಂಬು ಗೌಡ. ಲಿಂಗರಾಜ, ವೀರರಾಜ ಒಡೆಯರ ಮಹಾ ವಿಶ್ವಾಸಕ್ಕೆ ಪಾತ್ರನಾಗಿದ್ದ. ಇವನ ಸಹೋದರ ಹಾವೇರಿ ಅರಮನೆಯ ರಕ್ಷಕನೆನಿಸಿದ್ದ.

ಕೂಜಗೋಡಿನಲ್ಲಿದ್ದಾಗ ಅಪರಂಪರ, ಅಪ್ಪಾಜಿ ಅರಸನ ಮಗನೆಂದು ಹೇಳಿ ಅಪ್ಪಯ್ಯನ ಮನೆಯಲ್ಲೇ ಇದ್ದ. ಅನೇಕರವನ ಸೇವೆಗೆ ಸಿದ್ಧರಾದರು; ಅವನಿಗೆ ಬೇಕುಬೇಕಾದದ್ದನ್ನೆಲ್ಲ ಒದಗಿಸಿದರು. ಮಂಗಳೂರಲ್ಲಿ ಇವನ ಬಂಧನವಾಗಿ, ಆ ಮೇಲೆ ಬಿಡುಗಡೆಯಾಯಿತಷ್ಟೆ. ಅನಂತರ ಇವನು ಬಂದು ಕುಂಬು ಗೌಡನ ಮನೆಯಲ್ಲಿಳಿದ. ಅಲ್ಲಿಂದ ಮಲ್ಲಪ್ಪನೊಂದಿಗೆ (೧೮೩೫) ಮೈಸೂರಿಗೆ ಹೊರಟ.

ಬಂಡಾಯಗಾರರು ಬಳ್ಳಾರಿ ಪೇಟೆಯನ್ನು ಮುತ್ತಿದಾಗ ಕೂಜಗೋಡೆ ಸೋದರರು ೨೦೦ ಮಂದಿಯನ್ನು ಸೇರಿಸಿ, ಮುತ್ತಿಗೆಗೆ ಸಹಾಯ ಮಾಡಿದರು; ದಾರಿಗಳನ್ನೆಲ್ಲ ಅಡ್ಡಕಟ್ಟಿದರು. ಅಪರಂಪರನ ಆಜ್ಞಾನುಸಾರವಾಗಿ ಚೌಕಿಗಳನ್ನೆಲ್ಲ ಲೂಟಿಮಾಡಿದರು. ಸಾಗೂರು ಕಂದಾಚಾರದವರನ್ನೆಲ್ಲ ಹಿಡಿದರು. ತಲನೇರ್, ಸಿಸಿಲಿ ಘಾಟಿಗಳ ಮಾರ್ಗಗಳನ್ನು ಮುಚ್ಚಿದರು. ಯಡ್ಡು ನಾಡು, ಗುಡ್ಡಿ ನಾಡಿನ ಕೊಡಗಿನವರೆಲ್ಲ ಈ ಸೋದರರನ್ನು ಸೇರಿದರು. ಕೊಡಗು ಸುಬೇದಾರ ಅಪ್ಪಾಚುವನ್ನು ಹಿಡಿದರು. ಕೂಂದಳದ ದಾರಿ ಹಿಡಿದು ಮಡಿಕೇರಿಯ ಮೇಲೆ ಧಾಳಿ ಹೊರಟರು. ಇವರ ಮೇಲೆ ದಿವಾನ್ ಪೂಣಪ್ಪ ದಂಡೆತ್ತಿ ಬಂದ; ಉಭಯ ಪಕ್ಷದವರಿಗೂ ಹೊಡೆದಾಟಗಳಾದುವು. ಕಡೆಗೆ ಬಂಡಾಯಗಾರರು ಶರಣಾಗತರಾದರು; ತಮ್ಮ ನಾಯಕರನ್ನು ಬಿಟ್ಟು ಕೊಟ್ಟರು.

**ಚೆರಿಂಜಿ ಸುಬ್ಬಯ್ಯ:** ಕೆಳಗಿನ ಕೊಡಗಿನ ಗಡಿಯಲ್ಲಿ, ಕೆನರಾ ಜಿಲ್ಲೆಯಲ್ಲಿರುವ ಕುಂಬಳ ಗ್ರಾಮದವ. ಧೈರ್ಯದಲ್ಲಿ, ಸ್ಥೈರ್ಯದಲ್ಲಿ, ಪರಾಕ್ರಮದಲ್ಲಿ ಇವನನ್ನು ಮೀರಿಸಿದ

ಬಂಡಾಯಗಾರ ಇನ್ನೊಬ್ಬನಿಲ್ಲ. ಹಿಂದೆ ಬೇಕಲ್ ತಾಲೂಕಿನಲ್ಲಿ ಸೇವಕನಾಗಿದ್ದ. ೧೮೩೪ರಿಂದ ಅಪರಂಪರನ ಪಿತೂರಿಗಳಲ್ಲಿ ಭಾಗಿಯಾಗಿದ್ದ. ೧೮೩೬ರಿಂದ ಕೂಜಗೋಡೆಯಲ್ಲಿ ಇವನು ಅಪರಂಪರ, ತಮ್ಮಯ್ಯ, ಮಲ್ಲಯ್ಯ ಇವರನ್ನು ಭೇಟಿ ಮಾಡಿದಂದಿನಿಂದ, ಬಂಡಾಯದಲ್ಲಿ ಪ್ರಧಾನ ಪಾತ್ರ ವಹಿಸಿದ. ಸೈನ್ಯ ಸಮೇತನಾಗಿ ಬಳ್ಳಾರಿ ಪೇಟೆಯಿಂದ ಕೂಜಗೋಡಿನ ಕಡೆಗೂ, ಅನಂತರ ಮಂಗಳೂರಿನ ಕಡೆಗೂ, ಹೊರಟ. ಮಂಗಳೂರಿನ ಯುದ್ಧದಲ್ಲಿ ಪರಾಕ್ರಮದಿಂದ ಹೋರಾಡಿದ. ಕಡೆಗೆ ಶತ್ರುಗಳ ವಶನಾದ. ಬಂದಿಯಾಗಿ, ಮೈಗಾಯಗಳಿಂದ ನೊಂದು, ನರಳಿ, ಪ್ರಾಣಬಿಟ್ಟ. ಗಾಯಗೊಂಡು, ಬಂದಿಯಾಗಿದ್ದಾಗಲೂ ಈ ಪರಾಕ್ರಮಿಯು ತನ್ನವರನ್ನು ಸಂಬೋಧಿಸಿ "ಶತ್ರು ಸಿಪಾಯಿಗಳು ಬಹಳ ಮಂದಿ ಇಲ್ಲ. ಸೈನಿಕರ ವಸತಿಗಳನ್ನು ಕಾಪಾಡಲು ಅವರಿಗೆ ಸಾಕಾದಷ್ಟು ಬಲವಿಲ್ಲ. ಮುತ್ತಿ; ಹೊಡೆದಾಟ ನಿಲ್ಲಿಸಬೇಡಿ, ಹೋರಾಡಿ" ಎಂಬುದಾಗಿ ಸಾರುತ್ತ, ಚೀರುತ್ತ, ಪ್ರಾಣಬಿಟ್ಟ!

**ವೀರಣ ಬಂಟ:** ಬಂಟ್ವಾಳ ತಾಲೂಕಿನ ರೈತ. ಉತ್ತರ ಕೊಡಗಿನಲ್ಲಿ ೧೮ ವರ್ಷ ಕಾಲ ಬೇಸಾಯ ಮಾಡುತ್ತಿದ್ದ. ಆಮೇಲೆ ತನ್ನ ಹುಟ್ಟಿದೂರು ನರೀಕಕ್ಕೆ ಹೋಗಿ ನೆಲೆಸಿದ. ರಾಜರು ದೇಶಾಂತರ ವಾಸಿಗಳಾದ ಮೇಲೆ ದಿವಾನ್ ಲಕ್ಷ್ಮೀನಾರಾಯಣನ ಮನೆಗೆ ಹೋದ. ಕೂಜಗೋಡಿನಲ್ಲಿ ಅಪರಂಪರನ ಪರಿಚಯವಾಯಿತು. ಅವನನ್ನು ಹಿಂಬಾಲಿಸಿ, ಘಟ್ಟಗಳನ್ನು ದಾಟಿ ಮೈಸೂರಿಗೂ, ಅನಂತರ ತಿರುಚನಾಪಳ್ಳಿಗೂ (೧೮೩೬) ಹೋದ. ಕಲ್ಯಾಣಪ್ಪನ ಕೊಡಗಿನ ಪಿತೂರಿಯಲ್ಲಿ ಭಾಗವಹಿಸಿದ ಹಾಗೂ ಕಂಡುಬರುತ್ತದೆ. ಸುಳ್ಯದ ರಾಮಯ್ಯ ಗೌಡನಿಗೂ ಇವನಿಗೂ ಸಹ ಸಾಕಾದಷ್ಟು ಸಂಬಂಧವಿತ್ತು. ಪುಟ್ಟಬಸವಪ್ಪನು ಕಾಡಿನಲ್ಲಿ ತಲೆಮರೆಸಿಕೊಂಡಿದ್ದಾಗ ಏನೇನಾಯಿತೆಂಬುದೆಲ್ಲ ಇವನಿಗೆ ಗೊತ್ತಿತ್ತು. ಅಪರಂಪರನ ಸಹವಾಸಿಗಳೂ ಸಹ ಇವನನ್ನು ಚೆನ್ನಾಗಿ ಬಲ್ಲರು. ನಾಯಕರು, ಅವರ ಹಿಂಬಾಲಕರ ಮಧ್ಯೆ ವೀರಣ ಬಂಟ ಓಡಾಡುತ್ತಲಿದ್ದ. ಇವನು ರಾಮಯ್ಯ ಗೌಡ ಮೊದಲಾದ ನಾಯಕರಿಗೆಲ್ಲ ವಿಶ್ವಾಸಯೋಗ್ಯನಾದ ಮಂತ್ರಾಲೋಚಕನಾಗಿದ್ದ. ತನ್ನದೇ ಆದ ಪ್ರಭಾವದಿಂದ ಅನೇಕರನ್ನು ಬಂಡಾಯಕ್ಕೆ ಸಿದ್ಧಗೊಳಿಸಿ, ಅವರ ನಾಯಕನಾದ. ಕಡೆಗೆ ಶತ್ರುಗಳ ಕೈಗೆ ಬಿದ್ದ; ಅವರು ವಿಚಾರಣೆ ನಡೆಸಿ, ಅವನಿಗೆ ಮರಣಾಂತ ಶಿಕ್ಷೆಯನ್ನು ವಿಧಿಸಿದರು.

**ಕಂಕನೂರು ಚೆನ್ನಯ್ಯ:** ಸತ್ಕುಲದಲ್ಲಿ ಹುಟ್ಟಿ, ವೀರರಾಜೇಂದ್ರನ ಕೃಪಾಪೋಷಣೆಗೆ ಪಾತ್ರನಾಗಿದ್ದ. ಕೆಳಕೊಡಗಿನಿಂದ, ರಾಜಾಶ್ರಯಕ್ಕಾಗಿ ಮೇಲಣ ಕೊಡಗಿಗೆ ಹೋಗಿ ನೆಲೆಸಬೇಕಾಯಿತು. ಹಿರಿಯರ ಆಸ್ತಿಯನ್ನು ಉಳಿಸಿಕೊಂಡು ನೆಮ್ಮದಿಯಾಗಿದ್ದ. ರಾಮಯ್ಯ ಗೌಡನ ಬಂಧು. ರಾಮಯ್ಯ ಗೌಡನ ಪ್ರಭಾವದಿಂದ ಮೇಲಣ ಕೊಡಗಿನ

ಪಾರುಪತ್ಯಗಾರನನ್ನಾಗಿ ನೇಮಿಸಿದರು. ಚೆನ್ನಯ್ಯ ಅಪರಂಪರನ ಮುನ್‌ಶಿಯಾದ; ಅವನ ನಿರೂಪಗಳನ್ನೆಲ್ಲ ಬರೆಯುತ್ತಿದ್ದವನಿವನೆ. ಅಲ್ಲದೆ ಅಪರಂಪರನ ಹಣಕಾಸಿನ ವ್ಯವಹಾರವೆಲ್ಲ ಅವನ ಕೈಯ್ಯಲ್ಲಿತ್ತು. ವಿವೇಕಿ. ದುಡುಕುವ ಪ್ರಕೃತಿಯಲ್ಲ. ಕಡೆಯುವರೆಗೂ ಅಪರಂಪರನ ಪಕ್ಷದ ಪರವಾಗಿಯೇ ಕೆಲಸ ಮಾಡುತ್ತಿದ್ದನಾದರೂ ಭಯಗ್ರಸ್ತನಾಗಿದ್ದ. ಕಡೆ ಕಡೆಗೆ ಪಕ್ಷದ ಪರಾಜಯದ ದಿನಗಳು ಸಮೀಪಿಸಿದುವು. ಕಡೆಗೊಮ್ಮೆ ಇವನು ಶತ್ರುಗಳ ಕೈಗೆ ಬಿದ್ದ. ವಿಚಾರಣೆಯಾಗಿ, ಮರಣದಂಡನೆಯನ್ನೂ ವಿಧಿಸಲಾಯಿತು. ಹೇಗೋ ಅವನ ಜೀವ ಉಳಿದು, ಅವನಿಗೆ ಅಜೀವ ಶಿಕ್ಷೆಯಾಯಿತು.

**ಕಾರಬಾರ ಸುಬೇದಾರ ಕೃಷ್ಣ :** ತನ್ನನಾಡಿನ ಪರಜೀ ನಿವಾಸಿ. ಮೇಲಣ ಕೊಡಗಿನ ದೇವಾಲಯದ ಪೂಜಾರಿ; ಪಟೇಲ, ಪಾರುಪತ್ಯೆಗಾರ. ಇವನ ಸಹೋದರಿ ದಿವಾನ್ ಲಕ್ಷ್ಮೀನಾರಾಯಣನ ಹೆಂಡತಿ. ದಿವಾನ್ ಲಕ್ಷ್ಮೀನಾರಾಯಣನು ಹೇಳಿದ ಮಾತನ್ನು ಗೆರೆದಾಟದೆ ಪಾಲಿಸುತ್ತಿದ್ದ. ದಿವಾನನ ತಮ್ಮ ರಾಮಪ್ಪನಿಗಂತೂ ಪರಮ ಮಿತ್ರ. ಅಪರಂಪರನನ್ನು ಕೃಷ್ಣ ಬಳ್ಳಾರಿ ಪೇಟೆಯಲ್ಲಿ ಸೇರಿದ. ತನ್ನ ಹಳ್ಳಿಯ ಜನರನ್ನೆಲ್ಲ ಕಟ್ಟಿಕೊಂಡು ಹೋದ. ಬಂಡಾಯಗಾರರಲ್ಲಿ ಕೃಷ್ಣ ನಾಯಕ ಮುಖ್ಯನೆನಿಸಿದ. ಕಾರಬಾರ ಸುಬೇದಾರನಾಗಿ ಬಂಡಾಯದ ಕಾಲದಲ್ಲಿ ಎಲ್ಲ ವ್ಯವಸ್ಥೆಗೂ, ಎಲ್ಲ ಆಡಳಿತಕ್ಕೂ, ಇವನೇ ಕಾರಣನಾದ.

ಹೋರಾಟವೊಂದರಲ್ಲಿ, ಸುಳ್ಯದ ಬಳಿ ದಿವಾನ್ ಬೋಪನ್ ಕೈಗೆ ಸಿಕ್ಕಿದ. ಅವನನ್ನು ವಿಚಾರಣೆಗೆ ಗುರಿಪಡಿಸಿ, ಅಜೀವ ಶಿಕ್ಷೆ ವಿಧಿಸಲಾಯಿತು.

**ಕರಣಿಕ ಸುಬ್ಬಯ್ಯ:** ಕೆಳಕೊಡಗಿನ ಸೂಳ್ಯದ ನಿವಾಸಿ; ಸುಬೇದಾರ ಕೃಷ್ಣನ ಸಹೋದರ; ತೀರ ಬಡವ; ದಿವಾನ್ ಲಕ್ಷ್ಮೀನಾರಾಯಣನ ಮನೆಯಲ್ಲಿ ಅಡಿಗೆಯವನಾಗಿದ್ದು, ಅವನ ಸಹಾಯದಿಂದ ಸೂಳ್ಯದ ಶಾನುಭೋಗನಾದ. ಅವನ ಅದೃಷ್ಟದಿಂದ ಲಕ್ಷ್ಮೀನಾರಾಯಣನ ಅಳಿಯನೂ ಆದ. ದಿವಾನನ ಸಹೋದರ ರಾಮಪ್ಪನ ಪರಮಸ್ನೇಹಿತನೂ ಆದ. ಬಂಡಾಯ ಸೇರಿದ; ಬಂಡಾಯಗಾರರ ಕರಣಿಕನಾಗಿ, ದೇಶದಲ್ಲೆಲ್ಲ ಬರಹದ ಮೂಲಕ ಬಂಡಾಯ ಪ್ರಚಾರ ನಡೆಸಿದ. ಕಡೆಯುವರೆಗೂ ಅಪರಂಪರನೊಂದಿಗೇ ಇದ್ದು, ಕಡೆಗೆ ದಿವಾನ್ ಬೋಪನ್ ಕೈಗೆ ಬಿದ್ದ. ಅವನನ್ನೂ ಮಂಗಳೂರಿಗೆ ಕಳುಹಿಸಿ, ವಿಚಾರಣೆಗೆ ಗುರಿಪಡಿಸಿದರು.

**ಇತರ ಮುಖ್ಯರು:** ಸರಕಾಜಿ ಮಲ್ಲಯ್ಯ, ಮಾನದ ರಂಗಪ್ಪ - ಇಬ್ಬರೂ ಕೆಳಗಣ ಕೊಡಗಿನವರು. ಇವರನ್ನು ರಾಮಯ್ಯ ಗೌಡನು ತನ್ನ ಪ್ರತಿನಿಧಿಗಳನ್ನಾಗಿ ಮಾಡಿಕ್ಕೊಂಡು, ಅವರ ಮೂಲಕ ತಿರುಚನಾಪಳ್ಳಿಯುಲ್ಲಿದ್ದ ಅಪರಂಪರನೊಂದಿಗೆ ಸಂಪರ್ಕ ಪನ್ನಿಟ್ಟುಕೊಂಡಿದ್ದ. ಇವರ ಮೂಲಕವಾಗಿಯೇ ಅಪರಂಪರ ಕೆಳಗಣ ಕೊಡಗಿಗೆ

ಬಂದದ್ದು. ಪರಜಯು ಊಕಣ್ಣ ಬಂಟ, ಪಟೇಲ ಶಂಕರನಾರಾಯಣ, (ಅಮರದ ಶಾನುಭೋಗ), ಅಮರಸೂಳ್ಯದ ಮಣೇಗಾರ ಪುತ್ತೂರು ನಾರಣಪ್ಪ, ಅಮೀನ್ ವೆಂಕಟ, ಇವರೆಲ್ಲ ಕೆಳಗಣ ಕೊಡಗಿನವರು. ಬಂಡಾಯಗಾರರಲ್ಲಿ ಹೆಸರಾದವರು, ಪ್ರಭಾವಶಾಲಿಗಳು. ಇವರಲ್ಲನೇಕರು ಸರಕಾರ ಉದ್ಯೋಗದಲ್ಲಿದ್ದವರು; ರೈತರೊಂದಿಗೆ ಹತ್ತಿರ ಸಂಬಂಧವನ್ನಿಟ್ಟುಕೊಂಡಿದ್ದವರು. ಇವರೆಲ್ಲ ರೈತರನ್ನು ವಶಪಡಿಸಿಕೊಂಡು, ಅವರೆಲ್ಲ ಅಪರಂಪರನ ಧ್ವಜದಡಿ ಸೇರುವಂತೆ ಮಾಡಿದರು.

ಮೈಸೂರು ಮುಮ್ಮಡಿ ಕೃಷ್ಣರಾಜ ಒಡೆಯರ ಬಂಧುವಾದ ಅರಪುರ ಬಸವಪ್ಪಾಜಿ ಅರಸಿನವರು ಸಹ ಬಂಡಾಯಗಾರರ ಪ್ರಯತ್ನಗಳಲ್ಲಿ ಸಹಾನುಭೂತಿ ತೋರಿಸುತ್ತಿದ್ದರೆಂಬ ಅನುಮಾನಕ್ಕೆ ಆಸ್ಪದವಾದ ಸಾಕ್ಷ್ಯ ಸಾಹಿತ್ಯವು ಅಷ್ಟಗ್ರಾಮದ `ಸುಪರಿನ್‌ಟೆಂಡೆಂಟ್'ರ ವಿಚಾರಣೆಯಲ್ಲಿ ಸಿಕ್ಕಿದೆ.[12]



12. Extracts from the Mysore Trails Showing the grounds upon which suspicion is attached to Arapoor Basappajee Urs a relative of His Highness the Rajah of Mysore.

- Mr. Cotton's Report on the Insurrection in Canara and Coorg: Appendix A, No. 4 : M. S. A.

ಅನುಬಂಧ ೨

# ಬ್ರಿಟಿಷರ ಪರವಹಿಸಿದವರ ವಿವರ

೧೯೨೪ರಲ್ಲಿ ಪ್ರಕಟವಾದ ನಡಿಕೇರಿಯಂಡ ಚಿಣ್ಣಪ್ಪನವರು ಬರೆದ ``ಪಟ್ಟೋಲೆ ಪಳಮೆ"ಯಲ್ಲಿ ಕಾಣಿಸಿಕೊಂಡಿರುವ ಚರಿತ್ರೆಯ ಭಾಗ ಅವರದೇ ವಾಕ್ಯಗಳಲ್ಲಿ ಹೀಗಿದೆ:

ಕೊಡಗು ರಾಜನು ರಾಜ್ಯಭ್ರಷ್ಟನಾಗಿ ಹೋಗುವುದಕ್ಕಿಂತ ಮೊದಲು, ಕಲ್ಯಾಣಪ್ಪ ಅಪರಂಪರನೆಂಬ ಸನ್ಯಾಸಿ ವೇಷದಾರಿಯು, ಕೊಡಗಿನಲ್ಲಿ ಅಲ್ಲಲ್ಲಿ ಸಂಚರಿಸುತ್ತಿದ್ದನು. ಇಂಗ್ಲೀಷರು ಕೊಡಗನ್ನು ಮುತ್ತಿದಾಗ ಇವನು ಇಂಗ್ಲೀಷರೊಡನೆ ಇದ್ದನೆಂತಲೂ, ಇವನು ದೊಡ್ಡ ವೀರರಾಜೇಂದ್ರ ಒಡೆಯನ ತಮ್ಮ ಅಪ್ಪಾಜಿಯ ಮಗನಾದ ವೀರಪ್ಪನೆಂತಲೂ ವರ್ತಮಾನವು ಹುಟ್ಟಿತು. ಇವನು ಪುನಃ ೧೮೩೫ರಲ್ಲಿ ಕೆಲವು ಶಿಷ್ಯರೊಡನೆ ಕೊಡಗು ದೇಶವನ್ನು ಸಂಚರಿಸುತ್ತಿದ್ದನು. ಈ ಶಿಷ್ಯರು ಅಪರಂಪರನೇ ವೀರಪ್ಪನೆಂತಲೂ, ಇವನು ಕೊಡಗು ದೇಶದ ಪಟ್ಟಕ್ಕೆ ಅರ್ಹನೆಂತಲೂ ಬಹಿರಂಗಪಡಿಸಿದರು. ಇವನನ್ನು ದಿವಾನ ಲಕ್ಷ್ಮೀನಾರಾಯಣಯ್ಯನು ಪ್ರೋತ್ಸಾಹಗೊಳಿಸಿದನೆಂದು ತಿಳಿದುಬಂದುದರಿಂದ, ಇಂಗ್ಲೀಷರು ಲಕ್ಷ್ಮೀನಾರಾಯಣಯ್ಯ ನನ್ನು ಹಿಡಿದು ಬೆಂಗಳೂರಿಗೆ ಕಳುಹಿಸಿ ಅಲ್ಲಿ ಬಂದಿಖಾನೆಯಲ್ಲಿಟ್ಟರು.

ದಿವಾನ ಲಕ್ಷ್ಮೀನಾರಾಯಣಯ್ಯನ ತಮ್ಮನು ಮತ್ತು ಅಪರಂಪರನು ಸುಳ್ಯದಲ್ಲಿ ದಂಗೆ ಎದ್ದು ಮಂಗಳೂರಿಗೆ ಹೋಗಿ ಅಲ್ಲಿ ಖಜಾನೆಯನ್ನು ಲೂಟಿ ಮಾಡಿದರು. ಈ ಸಮಯದಲ್ಲಿ ಕೊಡಗು ದೇಶದ ಗೌಡುಗಳು ಮತ್ತು ಶಿವಾಚಾರದವರು, ಅಪರಂಪರನ ಹೆಸರಿನಲ್ಲಿ ದಂಗೆ ಏಳಲು ಏರ್ಪಡಿಸಿದರು. ಕೊಡಗರು ಏನು ಮಾಡಬೇಕೆಂದು ಗೊತ್ತಿಲ್ಲದೆ ಗಾಬರಿಯಲ್ಲಿದ್ದರು. ಎಲ್ಲವೂ ಇಂಗ್ಲೀಷರ ತಿಳುವಳಿಕೆಗೆ ಬಂದು ಅಪ್ಪಾರಂಡ ಬೋಪಣ್ಣ ದಿವಾನನು ಈ ಕಾಟಕಾಯಿಯನ್ನು ಅಡಗಿಸಿಬಿಟ್ಟನು.

ಇದಕ್ಕೆ ಇಂಗ್ಲೀಷ್ ಸರಕಾರವು ಸಂತೋಷಪಟ್ಟು, ಮಂಗಳೂರು ಖಜಾನೆ ಲೂಟಿಯಲ್ಲಿ ದಂಗೆಕೋರರಿಗೆ ಸಿಕ್ಕಿದ ೨೦,೦೦೦ ರೂಪಾಯಿಯನ್ನು ಕಾಟಕಾಯಿಯನ್ನು

ಅಡಗಿಸಿದವರಿಗೆ ಬಟವಾಡೆ ಮಾಡಲು ಅಪ್ಪಣೆ ಮಾಡಿದರು. ಕೊಡಗರು ಹಣವನ್ನು ತೆಗೆದುಕೊಳ್ಳಲು ಸಮ್ಮತಿಸದ್ದರಿಂದ, ಜಹಗೀರು, ಉಂಬಳಿ, ಪೆನ್‌ಷನ್, ಪದಕ ಸಹ ಕೊಡಲ್ಪಟ್ಟವು.

ಈ ಕಾಟಕಾಯಿಯಲ್ಲಿ ಈ ಕೆಳಗಿನವರು ವಿಶೇಷವಾದ ಧೀರತ್ವವನ್ನು ತೋರಿಸಿದರೆಂದು, ಆಗ ಬೆಂಗಳೂರಿನಲ್ಲಿ ಕಮಿಶನರಾಗಿದ್ದ ಕರ್ನಲ್ ಮಾರ್ಕ್ ಕಬ್ಬನ್ ಸಾಹೇಬರು ಇಂಡ್ಯಾ ಸರಕಾರಕ್ಕೆ ಸನ್ ೧೮೩೭ನೇ ಇಸವಿ ಮೇ ತಾರೀಕು ೯ರಲ್ಲಿ ಕಳುಹಿಸಿದ ಕಾಗದದಲ್ಲಿ ನಮೂದಿಸಿದೆ:

ಸುಬೇದಾರ ಕೊರವನ ಬಿದ್ದೈಯ್ಯ
ಮಾಜಿ ಸುಬೇದಾರ ಮಂಡೇಪಂಡ ಮೋಣ್ಣೈಯ್ಯ, ಚೆಂಬೆಬೆಳಿಯೂರು
ಸುಬೇದಾರ ಮಾತಂಡ ಅಪ್ಪಚ್ಚು
ಮಾಜಿ ಸುಬೇದಾರ ಕೊಲ್ಲಿರ ಅಚ್ಚೈಯ್ಯ
ಮಾಜಿ ಸುಬೇದಾರ ಪೊರಿಕೆರ ಅಯ್ಯಪ್ಪ
ಮಾಜಿ ಸುಬೇದಾರ ಕರಿನೆರವನ ಮುದ್ದೈಯ್ಯ
ಮಾಜಿ ಸುಬೇದಾರ ಚಟ್ಟೋಳಿ ಅಪ್ಪೈಯ್ಯ
ಜಹಗೀರ್‌ದಾರ ಚಾಬೂಮಿಯ
ಹಜೂರ್ ಮುನಿಷಿ ಮಂಡೇಪಂಡ ತಿಮ್ಮಯ್ಯ, ಚೆಂಬೆಬೆಳಿಯೂರು
ಹಜೂರ್ ಮುನಿಷಿ ಬಿಟ್ಟಿಯಂಡ ನಂಜಪ್ಪ
ದಿವಾನ್ ಕಚೇರಿ ಮುನಿಷಿ ಲೈಚೆಟ್ಟಿ ಅಯ್ಯಣ್ಣ
ಮಾಜಿ ಪಾರುಪತ್ಯಗಾರ ಮಡೆಯನ ದೇವೈಯ್ಯ
ಮಾಜಿ ಪಾರುಪತ್ಯಗಾರ ಕೊಳುವನ ದೇವಯ್ಯ
ಪಾರುಪತ್ಯಗಾರ ತಾತಪಂಡ ಸುಬ್ಬಯ್ಯ
ಮಾಜಿ ಪಾರುಪತ್ಯಗಾರ ಮಂಡೇಟಿ ಸುಬ್ಬೈಯ್ಯ
ಪಾರುಪತ್ಯಗಾರ ಕೋಚನ ದೊಡ್ಡೈಯ್ಯ
ಮಾಜಿ ಪಾರುಪತ್ಯಗಾರ ಮುಕ್ಕಾಟ ನಂಜಪ್ಪ, ಕುಂಜಲಗೇರಿ
ಪಾರುಪತ್ಯಗಾರ ಅಜ್ಜಿಕುಟ್ಟಿ ಕಾಳೈಯ್ಯ
ಪಾರುಪತ್ಯಗಾರ ಕಾರಿ ಸುಬ್ಬೈಯ್ಯ
ಮಾಜಿ ಪಾರುಪತ್ಯಗಾರ ಗುಡ್ಡಾಂಡ ಚಿಟ್ಟಿ, ನಾಂಗಾಲ
ಮಾಜಿ ಪಾರುಪತ್ಯಗಾರ ನಾಟೋಳನ ನಂಜಪ್ಪ, ಕಡಿಯತ್ತೂರು
ಮಾಜಿ ಪಾರುಪತ್ಯಗಾರ ಕಲ್ಲುಮಾಡ ಸುಬ್ಬಯ್ಯ
ಮಾಜಿ ಪಾರುಪತ್ಯಗಾರ ಮುಕ್ಕಾಟಿರ ಅಚ್ಚಯ್ಯ, ಮೂರ್ನಾಡು, ಬಾಡಗ

ಮಾಜಿ ಜಮೇದಾರ ಚಾರಿಮಂಡ ಉತ್ತೈಯ್ಯ
ಬಳ್ಳಾರಪಂಡ ಮುತ್ತಣ್ಣ
ತೋಟೆರ ಮಾದು
ಇಟ್ಟಿರ ಮಂದಪ್ಪು, ಅಂಜಿಗೇರಿನಾಡು
ಕಂಜಿತಂಡ ಅಪ್ಪೈಯ್ಯ
ಪಟ್ಟಮಾಡ ಸೋಮಯ್ಯ
ಅಣ್ಣಾಡಿ ತಿಮ್ಮಯ್ಯ
ಮಾಳೆಂಡ ಮಾಣಿಚ್ಚ
ಚುವಚಾಳಿ ಭೀಮು
ಪಕ್ರೆ ಆಲಿ
ಬಲ್ಲಚಂಡ ಪೊನ್ನಪ್ಪ

ಕಾಟಕಾಯಿಯನ್ನು ಅಡಗಿಸಿದ ಮೇಲೆ ಅಪರಂಪರನನ್ನು ಬೆಂಗಳೂರಿನಲ್ಲಿ ಶೆರೆಯಲ್ಲಿಟ್ಟು, ಮೂವತ್ತು ವರುಷದ ನಂತರ ಖೈದಿಯಿಂದ ಬಿಟ್ಟರು. ಇವನು ೧೮೭೦ರಲ್ಲಿ ಸತ್ತುಹೋದನು.

೧೮೫೭ರಲ್ಲಿ ಹಿಂದು ದೇಶದಲ್ಲಿ ಎದ್ದು ದೊಡ್ಡ ದಂಗೆಯಲ್ಲಿ, ಕೊಡಗರು ಇಂಗ್ಲೀಷ್ ಸರಕಾರಕ್ಕೆ ರಾಜ ಭಕ್ತಿಯನ್ನು ತೋರಿಸಿ, ಕತ್ತಿ ಕೋವಿ ಸಮೇತ ೫೦೦ ಮಂದಿ ಕೊಡಗರು ಪೆರ್ಯಾಪಟ್ಟಣದಲ್ಲಿ ಕಾದಿದ್ದರು. ದಂಗೆಯು ಅಡಗಿದ ಮೇಲೆ ಹಿಂತಿರುಗಿ ಬಂದರು.

ತದನಂತರ ಕೊಡಗು ಕಮೀಶನರಾಗಿದ್ದ ಜನರಲ್ ಕಬ್ಬನ್ ಸಾಹೇಬರು ಯುದ್ಧ ಸನ್ನದ್ಧನಾಗಿರುವಂಥ ಕೊಡಗ ವೀರನೊಬ್ಬನ ನಕ್ಷೆ ಸಮೇತವಿದ್ದ, ದೊಡ್ಡ ಬಿರುದಿನ ಮುದ್ರೆಯೊಡನೆ ಈ ಕೆಳಗಿನ ಇಸ್ತಿಹಾರನ್ನು ಇಂಗ್ಲೀಷ್ ಮತ್ತು ಕನ್ನಡದಲ್ಲಿ ಪ್ರಸಿದ್ಧಿಗೊಳಿಸಿದರು.

---

ಟಿಪ್ಪಣಿ : ಐ. ಮಾ. ಮುತ್ತಣ್ಣನವರ "ಕೂರ್ಗ್ ಮೆಮೊಯರ್ಸ್"ನ ಪ್ರಕಾರ ಈ ಕೆಳಗಿನವರು ಕೂಡಾ ಬ್ರಿಟಿಷರಿಂದ ದಂಗೆಯನ್ನು ವಿರೋಧಿಸಿದ್ದಕ್ಕಾಗಿ ಬಹುಮಾನ ಪಡೆದಿದ್ದಾರೆ:

ಕೊಂಗಂಡ ಅಪ್ಪಯ್ಯ, ಮೇರಿಯಂಡ ಚೆಟ್ಟಿಚ್ಚ, ಅಪ್ಪನೆರವಂಡ ಬೆಳ್ಳಿಯಪ್ಪ
ಕೊಳವಂಡ ದೇವಯ್ಯ, ನೆರಪಂಡ ಮಾದಯ್ಯ (ನಾಲ್ಕುನಾಡು ಸುಬೇದಾರ)
ಕರನೆರವಂಡ ಮುದ್ದಯ್ಯ, ಮಂಡೀರ ಉತ್ತಯ್ಯ

ಡಿ. ಎನ್. ಕೃಷ್ಣಯ್ಯವರ ಪ್ರಕಾರ ಬಂಡಾಯಗಾರ ಮಂಡಿರ ಉತ್ತಯ್ಯನಿಗೆ ಏಳರಿಂದ ಹದಿನಾಲ್ಕು ವರ್ಷ ಸಜೆಯಾಗಿದೆ. ಬಂಟವಾಳದ ರಂಗ ಬಾಳಿಗನಿಗೆ ಅವನು ಸೇರಿ ಮೂರು ತಲೆಮಾರಿನ ತನಕ ಭೂಕಂದಾಯ ವಿನಾಯಿತಿ ಸಿಕ್ಕಿದೆ.

ಮಂಡಿರ ಉತ್ತಯ್ಯ ಪಡೆದದ್ದು ಸಜೆಯೊ? ಬಹುಮಾನವೊ? ಎಂಬ ಬಗ್ಗೆ ಡಿ. ಎನ್. ಕೃಷ್ಣಯ್ಯ ಮತ್ತು ಐ. ಮಾ. ಮುತ್ತಣ್ಣ ಭಿನ್ನಾಭಿಪ್ರಾಯ ಇದೆ.

"ಈ ಚಿಕ್ಕ ವೀರ ಜನಾಂಗದವರ ಉನ್ನತ ಲಕ್ಷಣವಾದ ಘನವನ್ನೂ, ರಾಜ ಭಕ್ತಿಯನ್ನೂ, ಧೀರತ್ವವನ್ನೂ ನೆನಸಿಕೊಂಡು ಮತ್ತು ಬ್ರಿಟಿಷ್ ಸರಕಾರದ ಸಹಾಯದಲ್ಲಿ ವಿಶೇಷವಾದ ರಾಜಕಾರ್ಯಗಳನ್ನು ಮಾಡಿರುವುದನ್ನು ಆಲೋಚಿಸಿಕೊಂಡು ಇಂಡ್ಯಾ ಸರಕಾರವು ನನ್ನಲ್ಲಿಟ್ಟ ಅಧಿಕಾರ ಶಕ್ತಿಯಿಂದ, ಆಯುಧಗಳನ್ನು ಹಿಡಿಯಬಾರದೆಂಬ ಕಾನೂನು ಈ ಪ್ರತಾಪವುಳ್ಳ ಕೊಡಗು ಜನರಿಗೆ ಲಗಾವು ಆಗುವುದಿಲ್ಲವೆಂದು ಎಲ್ಲರೂ ಅರಿಯುವಂತೆ ಪ್ರಸಿದ್ಧಗೊಳಿಸುವುದು ನನಗೆ ಸಂತೋಷಕರವಾದ ಕೆಲಸವಾಗಿರುತ್ತದೆ."

26th February 1861 (Sd.) M. Cubbon
Commissioner

೧೯೨೦ನೇ ಇಸವಿಯಲ್ಲಿ ಆಯುಧದ ಕಾನೂನುಗಳನ್ನು ಪುನಃ ಬದಲಾಯಿಸಿದಾಗ ಆಯುಧಗಳನ್ನು ಹಿಡಿಯಬಾರದೆಂಬ ಕಾನೂನು ಪೂರ್ವದಂತೆಯೇ ಕೊಡಗು ಜನರಿಗೆ ಲಗಾವು ಆಗಬಾರದೆಂದು, ಆಗ ಕೊಡಗಿನ ಡಿಸ್ಟ್ರಿಕ್ಟ್ ಮ್ಯಾಜಿಸ್ಟ್ರೇಟರಾಗಿದ್ದ ಎಫ್. ಎಲ್. ಬ್ರಿಗ್‌ಸ್ಟಾಕ್ ಸಾಹೇಬರು ಹಟಾತ್ತಾಗಿ ಬರೆದ ಮೇರೆ ಆಗ ಚೀಫ್ ಕಮೀಶನರಾಗಿದ್ದ ಎಚ್. ವಿ. ಕಾಬ್ ಸಾಹೇಬರು ಮಂಜೂರು ಮಾಡಿಸಿದರು.

• • •

ಅನುಬಂಧ ೩

## ಸಮರದಲ್ಲಿ ಭಾಗವಹಿಸಿದ ಕೆಲವರು

**ಗಲ್ಲಿಗೇರಿಸಲ್ಪಟ್ಟವರು :**

**ಮಡಿಕೇರಿಯಲ್ಲಿ**

೧. ಸುಭೇದಾರ ಗುಡ್ಡೆಮನೆ ಅಪ್ಪಯ್ಯ ಗೌಡ

**ಮಂಗಳೂರು ಬಿಕ್ರನಕಟ್ಟೆಯಲ್ಲಿ**

೨. ಪುಟ್ಟ ಬಸವ

೩. ಲಕ್ಷ್ಮಪ್ಪ ಬಂಗರಸ

**ಬಂಟ (ಮರಣಾಂತ ಶಿಕ್ಷೆ ಅಂದರೆ ಆಜೀವ ಶಿಕ್ಷೆ ಎಂದಾದರೆ ೬ನೇ ಹೆಸರಾಗಬೇಕು.)**

೩/೪ ಉಪ್ಪಿನಂಗಡಿಯ ಮಂಜ

**ಹೋರಾಡುತ್ತಾ ಮಡಿದ ವೀರರಲ್ಲಿ ಪ್ರಮುಖ :**

೫/೬ ಚಿರಂಜಿ ಸುಬ್ಬಯ್ಯ

**ಆಜೀವ ಶಿಕ್ಷೆ :**

೬. ವೀರಣ್ಣ ಬಂಟ

೭. ಕುಕ್ಕನೂರು ಚಿನ್ನಯ್ಯ

೮. ಪೆರಾಜೆ ಕೃಷ್ಣಯ್ಯ

ಇತರ ಪ್ರಮುಖರು:

೯. ಹುಲಿಕಡಿದ ನಂಜಯ್ಯ

೧೦. ಕೆದಂಬಾಡಿ ರಾಮಯ್ಯ ಗೌಡ

೧೧. ಕೂಜುಗೋಡು ಅಪ್ಪಯ್ಯ

೧೨. ಕೂಜುಗೋಡು ಮಲ್ಲಪ್ಪ

೧೩. ಗುಡ್ಡೆಮನೆ ತಮ್ಮಯ್ಯ

೧೪. ಕರಣಿಕ ಸುಬ್ಬಯ್ಯ

೧೫. ಸಿರಕಜೆ ಮಲ್ಲಯ್ಯ

೧೬. ಮಣಿಯನ ರಂಗಪ್ಪ

೧೭. ಪೆರಾಜೆಯ ಊಕ್ಕಣ್ಣ ಬಂಟ

೧೮. ಪಟೇಲ ಶಂಕರನಾರಾಯಣ

೧೯. ಮಣೇಗಾರ ನಾರ್ಣಪ್ಪ
೨೦. ಅಮೀನ್ ವೆಂಕಟ
೨೧. ಷೇಕ್
೨೨. ಕುಂಚಡ್ಕ ತಿಮ್ಮ
೨೩. ಕುಡೆಕಲ್ಲು ಪುಟ್ಟ
೨೪. ದೇರಾಜೆ ಬಚ್ಚ
೨೫. ಗುಡ್ಲದ ಸುಬ್ಬಪ್ಪ
೨೬. ಮಡಿಯಾಲ ತಿಮ್ಮ
೨೭. ತಿಮ್ಮ (ಹೋಮಯ)
೨೮. ಮಾದಯ್ಯ
೨೯. ಕರ್ತುಕುಡಿಯ
೩೦. ಚೆಟ್ಟಿಕುಡಿಯ
೩೧. ಮಂಡಿರ ಉತ್ತು
೩೨. ಪುಂಡ ಶೆಟ್ಟಿ
೩೩. ಅಣ್ಣಪ್ಪ
೩೪. ತ್ಯಾಂಪ ಗೌಡ

**ಜೈಲಿನಲ್ಲಿ ಸತ್ತವರು**

೩೫. ಬಂಗಾರಿ ಖೈದಿ ನಂಬ್ರ ೩
೩೬. ಮುಂಗಣ್ಣ / ಮುನಿಯಪ್ಪ
೩೭. ಪುಟ್ಟಯ್ಯ ಖೈದಿ ನಂಬ್ರ ೧
೩೮. ಖೈದಿ ನಂಬ್ರ ೨
೩೯. ಖೈದಿ ನಂಬ್ರ ೪

• • •

ಅನುಬಂಧ ೪

# ಐಗೂರು ವೆಂಕಟಾದ್ರಿ ನಾಯಕನ ಲಾವಣಿ

ಕೋಲು ಕೋಲಣ್ಣ ಕೋಲೆ | ಶ್ರೀಗಂಧದ ಕೋಲು ಕೋಲಣ್ಣ ಕೋಲೆ ||ಪ ||
ಕಾಗಿನೆರೆ ಬಾಗಲಿಗೆ ಒಳ್ಳೆ ಕತ್ತಿ ಮುಟ್ಟಿತಲ್ಲೊ |
ಸುದ್ದಿ ಮುಟ್ಟಿತಲ್ಲೊ ಶ್ರೀ ವೆಂಕಟಾದ್ರಿ ಭೂಪ ||
ಕಾವೇರಿ ಹೊಳೆತನಕ ಹೋಗಿಬಿಟ್ಟಿತಲ್ಲೊ |
ವಿಲಾಯಿತಿ ಬಾಗಿಲಿಗೆ ಓಲೆ ಮುಟ್ಟಿತಲ್ಲೊ || ೧ ||

ಬೆಂಗಳೂರು ಬೂದಿ ಚಾವಡಿ ದಂಡು ಬಂದು ಬಿಟ್ಟಿತಲ್ಲೊ |
ಕಟ್ಟೇ ಹೊಳೆಗಾಗಿ ದಂಡು ಬಂದು ಬಿಟ್ಟಿತಲ್ಲೊ ||
ಹಳೇ ಮಹಿಶೂರಿಗೆ ದಂಡು ಬಂದು ಬಿಟ್ಟಿತಲ್ಲೊ |
ನರಸೀಪುರಕೆ ದಂಡು ಬಂದು ಬಿಟ್ಟಿತಲ್ಲೊ || ೨ ||

ರಂಗನಾ ಕೋಟೆಗೆ ದಂಡು ಬಂದು ಬಿಟ್ಟಿತಲ್ಲೊ |
ಜಗದರೇ ಕಲ್ಲಿಗೆ ದಂಡು ಬಂದು ಬಿಟ್ಟಿತಲ್ಲೊ ||
ವಡೂರ ಹೂರಗದ ಕಟ್ಟೆಗೆ ದಂಡು ಬಿಟ್ಟಿತಲ್ಲೊ |
ಶ್ರೀ ವೆಂಕಟಾದ್ರಿ ಭೂಪ ಬಂದು ಬಿಟ್ಟಿತಲ್ಲೊ || ೩ ||

ಬೋರೆ ಕೃಷ್ಣಪ್ಪನಾಯಕ ಬಾಳಾಜಿರಾಯರ ಮುಂದೆ ಏರಿ ಬಂದೀತಲ್ಲ |
ಆನಂದಚಲ್ಲಾರ ಮುಂದೆ ಗೋವಿಂದರಾಯರ ಮುಂದೆ ಏರಿ ಬಂದೀತಲ್ಲ ||
ಪೂರ್ಣಯ್ಯನ ಮುಂದೆ ದಂಡು ಏರಿ ಬಂದಿತಲ್ಲ |
ಮುದ್ದುಕೃಷ್ಣಪ್ಪನ ದೊರೆಗೆ ಸುದ್ದಿ ಹೋಯಿತಲ್ಲ || ೪ ||

ಚಿನ್ನದ ಕಾಗದ ಬರೆದಾತನ್ಯಾರೋ ಚಂದಾಗಿ ಓದಿನೋಡಿ |
ಕೂಡಿ ಬಂದರಲ್ಲಿ ತರಗೆಲೆ ಗೋಟಡಕೆ ಹಾಕಿ ನೋಡ್ಯಾರಲ್ಲ ||
ಎಂಥೆಂಥ ಮಾನ್ಯರು ಕೂಡಿ ಬಂದರಲ್ಲ |
ಶ್ರೀ ವೆಂಕಟಾದ್ರಿ ಭೂಪ ನೋಡಿ ಬಂದನಲ್ಲ || ೫ ||

ಬಾರೋ ಬಾರೋ ನನ್ನ ಕಂದ ಬಲಗೈ ಭಂಡಾರಿ |
ಉಗ್ಗಳ್ಳಿ ಸೋಮಣ್ಣ ಪರಂಗಿ ದಂಡು ಬಂದು ತಲೆಮೇಲೆ ಕೂತೈತೆ ||
ಬೇಗ ಬಾರೋ ಮಗನೇ ಬುದ್ಧಿಯ ಹೇಳೋ |
ಆರು ಸಾವಿರ ದಂಡು ತಾರಾಡಿಕೊಂಡು ಬರುವಾಗ ಕೆಟ್ಟೆನೆಂದು
ಬಾಯ ಬಿಡಬೇಡ || ೬ ||

ಹತ್ತು ಸಾವಿರ ದಂಡು ಮುತ್ತಿಗೆ ಬಿದ್ದಾಗ |
ಹಂಬಕ್ಕಿ ಬಾಯಂತೆ ಬಿಡಬೇಡ ಸೋಮಣ್ಣ ||
ಎಂದರೆ ಹದಮೀರಿದ ಕಾರ್ಯ ಒಳ್ಳೆವೈನ ತಪ್ಪಿತೆಂದು |
ಅದಕೊಂದು ಪಾವಣಗಾರಿಕೆ ಕಟ್ಟಿದ ಸೋಮಣ್ಣ || ೭ ||

ಆರು ಸಾವಿರ ದಂಡು ನಮ್ಮ ಆರಾಳಿಗಾಯಿತು |
ಹತ್ತು ಸಾವಿರ ದಂಡು ನಮ್ಮ ಹತ್ತಾಳಿಗಾಯಿತು ||
ಮಿಕ್ಕಾದವರಿಗೆಲ್ಲೋ ವೆಂಕಟಾದ್ರಿ ದೊರೆಯೇ |
ಐಗೂರ ಭಂಗಾರ ವಜ್ರದ ಸಿರಿಯೇ || ೮ ||

ಬರೆಸುವಂಥ ಜೋಯಿಸರ ಬೇಗನೇ ಕರೆಸೋ |
ಮಂದೆ ಮಂದೆಗೆಲ್ಲ ಓಲೆಯ ಬರೆಸೋ ||
ಹಾ! ನಾಡ ಗುರುಮನೆ ಸುಬ್ಬಯ್ಯ ಭಟ್ಟರೇ |
ನೀವು ಬಂದು ಬುದ್ಧಿಯ ನೀಡಿರಯ್ಯಾ || ೯ ||

ಅರೆಕೇರಿ ಸುಬ್ಬಯ್ಯ ನೀರುಗುಂದದ ನವಿಲೇಗೌಡ |
ಹೆನ್ನಲೀ ಉರಿಗೌಡ ನೀವೂ ಬನ್ನಿರಯ್ಯ ||
ಹೆಬ್ಬಾಲೆ ಪುಟ್ಟೇಗೌಡ ದೋಣಿಗಾಲು ರುದ್ರೇಗೌಡ |
ಗೋಣಿಬೀಡು ನರಸಯ್ಯ ನೀವು ಕೂಡಿ ಬನ್ನಿರಯ್ಯಾ || ೧೦||

ಗೊದ್ದು ಗೊದ್ದು ಎಂಬೋದು ನಮ್ಮ ಮುದ್ದಿನ ಅರಮನೆ |
ಗೊದ್ದುಬೀಡಿಗೆ ಮೊದಲು ಓಲೆಯ ಕಳಿಸೋ ||
ಕೊಟ್ಟೂರ ಕೊಟ್ಟಾರು ನಮ್ಮ ಹೆತ್ತೂರ ಕೊಡಲೊಲ್ಲೆ |
ಹೆತ್ತೂರಿಗೆ ಬರೆಸಿ ಓಲೆಯ ಕಳಿಸೋ ||೧೧||

ಹಿರೂರು ಲಕ್ಷ್ಮೇಗೌಡ ವಳಲ್ಹಳ್ಳಿ ಶಿದ್ದೇ ಗೌಡ |
ಬೊಮ್ಮನಕೇರಿ ಪರ್ವೆಗೌಡ ನೀವು ಕೂಡಿ ಬನ್ನಿರಣ್ಣ ||
ದೊಡ್ಡ ಮಾತಿನೋನೆ ಗಡ್ಡದ ಹುಲಿ ಕಾಣೋ |
ಉಮ್ಮತ್ತೂರು ಬಸ್ವೇಗೌಡ ಬೇಗ ಬಾರಯ್ಯ || ೧೨ ||

ಉದ್ದಿ ಕತ್ತಿಯವನೆ ತಿದ್ದಿದ ಮೀಸೆಯವನೆ |
ಕೆರೋಡಿ ಹನುಮೇಗೌಡ ಕೂಡಿ ಬನ್ನಿರಯ್ಯ ||
ಉಚ್ಚಂಗಿ ಕಾಳಪ್ಪ ಉಚ್ಚಂಗಿ ರಾಮಪ್ಪ |
ಉಚ್ಚಂಗಿ ಉರಿಯಪ್ಪ ಕುರುವಿತ್ತೂರ ಬೈರಣ್ಣ ಕೂಡಿ ಬನ್ನಿರಯ್ಯ || ೧೩ ||

ಕುಮ್ತಳ್ಳಿ ನಂಜೇಗೌಡ ಮರ್ಕಳ್ಳಿ ಮಾಲಿಂಗೇಗೌಡ |
ಅರೇಕೇರಿ ಹುಚ್ಚೇಗೌಡ ಜಾನೇಕೇರಿ ಬುಕ್ಕೇಗೌಡ ||
ಹೆತ್ತೂರ ಬಸವೇಗೌಡ ಹೆತ್ತೂರ ಸುಬ್ಬೇಗೌಡ |
ನಡಳ್ಳಿ ದೊಡ್ಡೇಗೌಡ ನೀವು ಬನ್ನಿರಯ್ಯ ||೧೪||

ಮಾತಿಗೆ ಮಳಲಿಯು ಕೂಟಕ್ಕೆ ಸಕಲೇಶಪುರ |
ಬಟವಾಡೆ ತಿದ್ದೋದು ನನ್ನ ಬಲ್ಲದರಮನೆ ||
ಸಣ್ಣ ಮಾತಿನೋನೇ ಬಣ್ಣದ ಹಚ್ಚಡದವನೆ |
ಮಾತ ಬಾರಿ ಬಾರೋ ಮಳಲಿ ಚನ್ನೇಗೌಡ ||೧೫||

ಉದ್ದಿ ಜಗಲಿ ವೀರೇಗೌಡ ಸುಳ್ಳಕ್ಕಿ ನಂಜೇಗೌಡ |
ಹಿರೇಮಂದೇ ಚನ್ನೇಗೌಡ ಬ್ಯಾಕರವಳ್ಳಿ ಶಿದ್ದೇಗೌಡ ||
ಬಣಕಲ್ಲು ಸುಬ್ಬಣ್ಣ ಬಿದರೂರು ಸಬ್ಬಣ್ಣ |
ಕೋಳೂರು ಸಬ್ಬಣ್ಣ ನೀವು ಕೂಡಿ ಬನ್ನಿರಯ್ಯ || ೧೬ ||

ಆರನಾಡ ಹದಿನೆಂಟು ಸಾವಿರ ಸೀಮೆಯ |
ಗೌಡಗಳೆಲ್ಲರು ಅರೇಕೇರಿ ಮಿಟ್ಟಿಕಟ್ಟೆ ಒಳಗೆ ಕೂಡಿದರಲ್ಲ ||
ನೀರಿಗೆ ಹುಟ್ಟೋನು ನೀರಿಗೇ ಬೆಳೆಯೋನು |
ಧೀರ ಸರದಾರನು ನಮ್ಮಾ ಸೀಮೆಗೆ ಬರುತಾನೆಂದ ||೧೭||

ಕಿಚ್ಚಿಗೇ ಹುಟ್ಟೋನು ಕಿಚ್ಚಿಗೇ ಬೆಳೆಯೋನು |
ಮೆಚ್ಚಿನ ಪರಂಗಿ ನಮ್ಮ ಸೀಮೆಗೆ ಬರುತಾನೇ ||
ಸೀಮೆಯ ಉಳಿಸಿರಿ ಸುಖವಾಗಿ ಬಾಳಿರಿ |
ಬುದ್ಧಿವಂತಿಕೆ ಹೇಳಿ ಬದುಕಿಸಿರಯ್ಯ ||೧೮||

ದೊಡ್ಡಪ್ಪನಿದ್ದರೆ ಮೊದಲೇ ಸತ್ತು ಹೋದ |
ಚಿಕ್ಕಪ್ಪ ಪರಂಗಿದಂಡಿಗೋಲಾದ ||
ನಾ ಹುಟ್ಟಿ ಇಪ್ಪತ್ತು ನಾಲ್ಕೇ ವರ್ಷವು |
ಈ ಸಾರಿ ಕರೆಕರೆ ಉಳಿಸಿ ನೀವೆಲ್ಲಾ ||೧೯||

ಹಿಟ್ಟಿಕ್ಕಬೇಡಿ ಬಿಟ್ಟಿಗೈಯ್ಯಬೇಡಿ |
ಉತ್ತಗದ್ದೆಗೆ ನೀವು ಸಿದ್ಧಾಯ ತೆರಬೇಡಿ ||
ತಡಕೊಂಡರೆ ತಡಕೊಳ್ಳಿ ತಡಕೊಳ್ಳದಿದ್ದರೆ |
ಜಾಗೇರಿ ಸೀಮೆಗೆ ಸಾಗಿಸಿರಯ್ಯ ||೨೦||

ಎಂದರೆ ಅಂದನು ದಿಕ್ಕುದಿಕ್ಕಿನ ಕೋಟೆ ಚಕ್ರ ಉರಿದಂತೆ |
ರಾಕ್ಷಸೀಕೋಟೆ ರಣಕೋಟೆ ಅರೇಕೇರಿ ಹೊಕ್ಕುತೊಕ್ಕೊಂಬೋನ ||
ಹೆಸರೇನೊ ರಾಜ ಗಿಡ ಕೊಂದು ತಲೆಯನ್ನು ಕಟ್ಟದೆ ಹೋದರೆ |
ಉಗ್ಗಳ್ಳಿ ಸೋಮಣ್ಣನ ಹೆಸರು ಕರೇಬೇಡೆಂದ ||೨೧||

ನಂಬಲಾರೆನು ನಾನು ದಿಟ್ಟ ಭಾಷೆಯ ಕೊಡಿರಯ್ಯ |
ಮಲಶೀಮೆ ಜನರೆಲ್ಲ ಮೂರು ಹೊತ್ತಿನೋರು ||
ಮರ ಬಿದ್ದ ಕಡೆಗೇನೇ ಓಡೋರಯ್ಯ |
ನನಗೊಂದು ಭರವಸೆಯ ಕೊಡಿಸಿರೆಂದ ||೨೨||

ದೇವರ ಶಿದ್ದಯ್ಯನ ಕರೆಸೋರಲ್ಲ ರಾಜಾ |
ದೇವದೇವರಿಗೆಲ್ಲ ಘಟ್ಟಿ ಹರಕೆಯ ಮಾಡುತಾರೆ ||
ಅರೆಕೇರಿ ಸುಗ್ಗಿಯಮ್ಮ ಏಳು ಮುಖವ ಎರಿಸಿ ಕೊಟ್ಟೇವಲ್ಲ |
ಕುದುರಂಗಿ ವೀರಭದ್ರ ಕಾಯಲಿ ಚಿನ್ನದ ನಂದಿ ಕೊಟ್ಟೇವಲ್ಲ ||೨೩||

ಮಾಗನಾಡ ಕೆಂಚಮ್ಮಗೆ ಮುತ್ತಿನ ಹರಳೋಲೆ |
ಸುಬ್ರಹ್ಮಣ್ಯಗೆ ಚಿನ್ನದ ಹೆಡೆಗಳು ||
ಮಂಜುನಾಥ ಸ್ವಾಮಿಗೆ ಮಂಡೆ ಚೋಳಂಗಿಯೂ |
ಚಲ್ವ ಚನ್ನಿಗರಾಯಗೆ ದಾವಣೀ ಕುರಿಮಂದೆ ನಿರ್ವಾಣಶಿದ್ದಗೆ
ಕೊಟ್ಟೇವು ಕಾಯಲಿ ಕಷ್ಟವ ಬಿಡಿಸಲೆಂದ ||೨೪||

ನಂಬಿದ ರಾಯಗೆ ಎರಡು ಬಗೆಯೋದಿಲ್ಲ |
ಎಂದು ಪ್ರಸಾದದ ಗಂಧವ ಮುಟ್ಟಿರೆನೆ ||
ಸೀಮೆಯ ಗೌಡಗಳಾಣೆಯ ಕೊಟ್ಟರೆ ಸೋಮಣ್ಣನೆಡಗೈಯ್ಯ ತಿಕದ ಮೇಲಿಟ್ಟ |
ಬಲಗೈಯ ಗಂಧಕೆ ಮಡಗಲು ಒಪ್ಪದೆ ಹಾಲಲ್ಲಿ ಕೊಡಿರೆಂದನು ||೨೫||

ಕರೆದ್ಹಾಲಕರೆದ್ಹಂಗೆ ಯಾರೂ ತರೋದಿಲ್ಲ ನಾನೇ ತರುವೆನೆಂದು
ಚಂಬು ತಕ್ಕೊಂಡ |
ಸುಗ್ಗಿ ಕಟ್ಟೆಗೆ ಓಡಿ ಬಂದಾ ಕಳ್ಳಿ ಕಣೆಗಲು ಹಾಲ ತುಂಬಿಕೊಂಡ ||
ಆಣೆನಂಬ ನಂಬೋರೆಂದು ನಂಬಿಯಾರು ದೊರೆಗಳು ಬೆಟ್ಟಿಟ್ಟು ತೋರಿಸಿದ |
ಬಲಗೈ ಚಂಬಿಗೆ ಎಡಗೈ ಬೆನ್ನಿಗೆ ಭಾಷೆಯ ಕೂಡಿಸಿದ ||೨೬||

ಊರಿಗೊಬ್ಬ ಗೌಡ ಕೇರಿಗೆ ಕುಳವಾಡಿ ತೆಗೆದ ಬಾಗಿಲಿಗೊಂದು ಜನ |
ಗುದ್ಲಿಮಂಕರಿಗಳ ಸಹಿತ ಬರಬೇಕೆಂದು ಕಟ್ಟಾಗಿ ಸಾರಿಸಿದ ||
ಅಗಳು ಬಂದು ಮಾಡಿ ಕೋಟೆಯ ಸಾಧಿಸೆ ದಾರಿಲಿ ಮೊಲನುಗ್ಗಿ
ಆಲದ ಕೊನೆ ಮುರಿದಿತಲ್ಲ |
ಅಪಶಕುನವಾಯ್ತೆಂದು ರಾಜನು ಕುಗ್ಗಲು ಸೋಮಣ್ಣ
ಕಾಡಿನ ಮೃಗ ಮರಕೆ ಚಿಂತೆಬೇಡೆಂದ ||೨೭||

ಏಳು ವರುಷದ ಮಗುವಿನ ಮೇಲೆ ಗಣಬಂದು ಕುದುರಂಗಿ
ವೀರಭದ್ರ ರಾಯನೇ ಸೋಮಣ್ಣ |
ಎರಡು ಬಗೆಯು ತಾನೇ ಘಟ್ಟವಿಳಿದು ಹೋಗಿ ಬದುಕೆಂದನು ||
ಮೂರು ಮಾತನು ಹೇಳಿ ಮಾಯವಾದರೆ ದೈವವದಕೊಂದು ಕಲಿಗಟ್ಟಿದ |
ಕಲಿ ಕಲಿ ಕಣೆವಾಗ ಕಲ್ಲೆದ್ದು ಕುಣಿದಾವೆ ಕಾಡುಗಲ್ಲಿನ ಮಾತು ನೆಲೆಯಲ್ಲೆಂದ
|| ೨೮||

ಸುರೆಯ ಕುಡಿದೋನು ಗ್ರಹವು ಹಿಡಿದೋನು ನರಮರಕಂಟಕ ನಿಜವೆಂಬನು |
ಎಂದ ಸೋಮಣ್ಣನು ಈಚೇಲಿ ಹೋದರೆ ಆಚೇಲಿ ಬಂದನು ಗುಡಿಯೊಳಗೆ ||
ಇಂದೆ ಹೊರತು ಮುಂದೆ ಮೈದುಂಬಲು ಕುದುರಂಗಿ ವೀರಭದ್ರ |
ಬಿಳಿ ಹುಲ್ಲ ಸುತ್ತಿಸಿ ಬೆಂಕಿಯ ಹತ್ತಿಸಿ ಸುಡುವೆನೆಂದ ||೨೯ ||

ಜನಬಂದು ನಿಲ್ಲಲು ವೈಶಾಖ ಮಾಸದಿ |
ಅಗಳಾಪು ಮಾಡಲು ಗೇಣುದ್ದ ಇಳಿಯಲಿಲ್ಲ ||
ಹಾರೇ ಗುದ್ಲಿ ಹಾಕಲು ಭುಕ್ಕನೆ |
ಧೂಳೆದ್ದು ಅಕ್ರಾಗಿ ಸತ್ತಾರಲ್ಲಾ || ೩೦ ||

ಶಾರೇ ವರಹಾ ಮಡ್ಡಿಗೆ ಕಟ್ಟಿ ರಾಜರು ಬಂದರಲ್ಲಾ |
ಕಡಬನ್ನಳ್ಳಿ ತಾನದ ಕಡುವಿಲಿ ಕುತ್ತಿಗೆ ನೀರಲ್ಲಿ ನಿಂತರಲ್ಲಾ ||
ಜಪವನ್ನು ಮಾಡುತ ವರಹಾವ ಮೇಲುಗ್ಗಿ ದಿಡ್ಡಕೆ ಹತ್ತಿರಲು |
ಗರುಡನು ಚಕ್ರವ ಸುತ್ತಿತಲ್ಲಾ ಗಾಳಿಯು ಬಿರಬಿರನೆ ಬೀಸಿತಲ್ಲ ||೩೧||

ಆಕಾಶ ಮುಗಿಲೆಲ್ಲ ತಾರಕವಾಯಿತು ಮುಂಗಾರದ ಶಿಡ್ಲು ಮೊರೆದಿದ್ದಿತು |
ದಿನವೂ ಒಪ್ಪತ್ತು ಮಳೆಕಟ್ಟಿ ಕರದೀತು ಕೆಳ್ಳಮೇಗಳ ಹದ ಹರಿಗೂಡಿತು ||
ಕುದುರಂಗಿವಡ್ಡಿಗೆ ಅಗಳಾಪು ತೆಗೆದರು ಶಾಂತಪುರ ಇಬ್ಬಡಿ ನಾಯಳ್ಳಿ ತಗ್ಗಿನಲಿ |
ವಡ್ಡನು ಬಲ ಮಾಡಿ ಕಲ್ಲನ ಕೋಡಿ ತಪ್ಪಲು ಗಿಂಡಿ ಕುರಾವು ತುಂಬೇ ತೋಟದಲಿ
|| ೩೨||

ಮಳಲೋಣಿ ಬಾಗಿಲು ಉದ್ದಿಕೇರಿ ವಡ್ಡುಶಡಗುಡುಗಿನ ಬಟ್ಟಾಳ |
ಐಯಳ್ಳಿ ಸಾಲಗಟ್ಟೆ ಕುರುವಿತ್ತೂರುನಲ್ಲುಲ್ಲಿ ಹೊಂಬೆಟ್ಟ ಕೊಡ್ಡಿದರು ||
ವಡ್ಡು ಕಟ್ಟಿದೋರೆ ಅಗಳಾಪ ಮಾಡುತ್ತ ಧೊರೆಯಿದ್ದ ಬಳಿಯೊಳಗೆ |
ಬಂದಾಗಿ ಆಯಿತೆಂದು ಬಂದದ್ದೇ ಹೇಳಿದರು ||೩೩||

ವಡ್ಡುವಡ್ಡಿಗೆಲ್ಲ ನಮ್ಮ ದಂಡ ನಿಲ್ಲಿಶಿ ಬುದ್ಧಿಯ ಹೇಳೋ ಸೋಮಣ್ಣ |
ಎಂದರೆ ಕತ್ತಿಯ ಹೊತ್ತೇನು ಬುತ್ತಿಯ ಉಂಡೇನು ಉದ್ದಿಕೇರಿ
ವಡ್ಡಸುದ್ದಾಗಿ ಕಾಯ್ತೇನೆಂದ ||
ವಡ್ಡು ಕಾಯಬೇಡ ಜನ ಬಂದ ನಿಲ್ಲಿಸಿ ಬುದ್ಧಿಯ ಹೇಳಪ್ಪ ಸಾಕೆಂದರೆ |
ಬಂದು ಉದ್ದಿಜಗಲಿಯೋನಸುಳ್ಳಕ್ಕಿಯೋನ ಕರಕೊಂಡು ದಂಡಿಗೆಲ್ಲ ||೩೪||

ಬರಿಮದ್ದ ಹಾಕೋದು ಹುಶಿಗೋವಿ ಹೊಡೆಯೋದು ಗುಂಡನು ಹಾಕಬೇಡಿ |
ಹಾಕಿದರೇಳ್ವರ್ಷ ಕಂದಾಯ ಕೀಳ್ತೀನಿ ಬಡ್ತಾವ ಮಾಡ್ತೀನೆಂದ ||
ದೊರೆಯ ಬಳಿಗೆ ಬಂದು ಬಾಲ ಅರಸಿ ಮಗ ಬಹಳ
ಚನ್ನಾಗಿಲ್ಲ ಊರಿಗೆ ಹೋಗ್ತೇನೆಂದ |
ಸೋಮಣ್ಣ ಬೇಡ ವೈದ್ಯಕಾರನ ಕಳಿಸಿ ವಾಶಿಮಾಡಿಸುತ್ತೇನೆ
ಹೋಗಲೇ ಬೇಡೆಂದನು ||೩೫||

ನನ್ನ ಮಗನ ಮುಖ ನೋಡದೇ ಆಗದು ಹೋಗಲೇಬೇಕೆನ್ನಲು |
ಈ ಕಲ್ಲರೆ ಮೇಲೆ ಉಗುಳಿ ನೀ ಹೋಗಯ್ಯಾ ಆರೋದರೊಳಗೇ ಬಾರೆಂದನು ||
ಉಗಿದು ಹಿಂದಣಿನೋರ ಕರಕೊಂಡು ಹೊರಗದ ಕಟ್ಟೆಗೆ ಓಡಿ ಬಂದ |
ಪೂರ್ಣಯ್ಯನ ಮುಂದೆ ಪರಂಗಿ ದಂಡನು ನೋಡಿದ್ದ ನಿಂತುಕೊಂಡ ||೩೬||

ಇಚ್ಕೋಡಿ ಅಂಗಿಯೋರು ಕೋಪೀನ ದಟ್ಟಿಯೋರು ಯಾವ ಸೀಮೆ ಗೌಡಗಳು |
ಯಾತಕ್ಕೆ ಬಂದಿರಿ ಹೇಳಿ ನೀವೆಂದರೆ ಮಲೆಯರಸನ ಶೆರೆಹಿಡಿದುಕೊಡುವುದಕೆಂದರೂ||
ಕೇಳಿದ ಪರಂಗಿ ಈವತ್ತು ಅವನಾ ನಾಳೇ ನನ್ನಾ ಯಾರಿಗೆ ಹಿಡಿದು ಕೊಡುತೀ |
ಅಂದರೆ ಪೂರ್ಣಯ್ಯ ಪೊಗದಿಗೆ ಬಂದವನಿಗಾಡಳಿತವೇಕೆಂದನು ||೩೭||

ಎತ್ತಿದ ಫಿರಂಗಿ ತುಪಾಕಿ ಇಳಿಶಿದ ಹಾಲಿನಂಥ ಮಾತನು ಲಾಲಿಶಿದ |
ಉಗ್ಗಳ್ಳಿ ಸೋಮಣ್ಣನ ಬಾಚಿ ತಬ್ಬಿಕೊಂಡು ಗಲ್ಲವ ಹಿಡಿದಿದ್ದನು ||
ಯಾವತ್ತು ಹಿಡುಕೊಡುತೀ ಎಂದರೆ ಈವತ್ತಿಗೆಂಟನೆ ಶನಿವಾರವು |
ಹಿಡಿದುಕೊಟ್ಟರೆ ನನಗೇನು ಉಲುಪೆ ಮಾಡುತೀ ಎಂದು ಕೈಯೆತ್ತಿದನು ||೩೮||

ಬಸವಿಯ ಇರಿಯಲು ಬಸವನ ಕೊಲ್ಲಲು ಮಾಫಿಯು ಉಂಬಳಿ ಸರ್ವದಲಿ |
ರಾಜ್ಯದ ಗೌಡಿಕೆ ನಿನಗಾಯ್ತು ಹೋಗೆನೆ ಹಿಂದಕ್ಕೆ ತಿರುಗಿದನೂ ||
ಕುದುರಂಗಿ ವಡ್ಡಿನ ಮಾವಿನ ಮರದಲ್ಲಿ ವಸ್ತ್ರವ ಬೀಸುವೆನು |
ಆಗ ಬರಬೇಕೆಂದು ಗುರ್ತಿಶಿ ಧೊರೆಯಿದ್ದ ಬಳಿಗೆ ಬಂದ || ೩೯||

ಏನಪ್ಪ ಮಗನಿಗೆ ಗುಣವಾಯ್ತೆ ಎಂದರೆ ಇನ್ನೊಮ್ಮೆ ಹೋಗಬೇಕೆಂದು |
ಬಂದು ಸುಳ್ಳಕ್ಕಿ ಕುಳವಾಡಿ ಬೈರನ ವಸ್ತ್ರವ ಬೀಸಲು ಕಳುಹಿಸಿದ ||
ಬೀಸಲು ಜೀಯಂದು ದಂಡು ಬಂತು ಸುಳ್ಳಕ್ಕಿ ಕೆಂಚೆ ಗೌಡನು |
ಒಂದು ಹೊತ್ತಿನೋನು ಒಂದು ತುತ್ತು ಬಾಯಿಗಿಕ್ಕಿದ್ದ || ೪೦ ||

ಕುದುರಂಗಿ ಕೆಂಚೇಗೌಡ ಕೇಳಿದ್ದೆ ಎದ್ದೋನು ದೇವರನ್ನ ಬಾಚುತಾರೆಂದು |
ಜಾವಿಗೆ ಬತ್ತಿಯ ಕೋವಿಯ ತಕ್ಕೊಂಡನು ||
ಓಡಿ ಬಂದು ಇಬ್ಬರು ವಡ್ಡಲಿ ನಿಂತೋರು ಸೇನೆಯನೆಲ್ಲವನು |
ಹಿಂದಕ್ಕೆ ಅಟ್ಟುತ ಬಂದದ್ದ ನೋಡಿದ ಸೋಮಣ್ಣನು ||೪೧||

ಉದ್ದಿ ಜಗಲಿಯೋನ ಇಡು ನೋಡಿ ಇಡು ಎಂದರೆ |
ಕುದುರಂಗಿ ಕೆಂಚನ ಇಡಲು ಕಂಕುಳಲ್ಲಿ ಗುಂಡು ಹೊಕ್ಕು ಹೊರಟ್ಹೋಯಿತು ||
ಎರಡು ಗಾಯಕ್ಕು ಬೆಟ್ಟೆಟ್ಟು ಊರಹಿತ್ಲು ತೋಟಕೆ ಓಡಿಬಂದು |
ಬಳಗವನೆಲ್ಲವ ಕರಸಿ ಸಂಕಟವೆಂದು ಉಸ್ಸೆಂದನು ||೪೨||

ಪ್ರಾಣ ಹೋಗುತ್ತಿದೆ ಬಾಯಾರಿ ಬತ್ತಿದೆ ನೀರನ್ನು ಕೊಡಿರೆನ್ನಲು |
ನೀರು ಸಿಕ್ಕದೆ ಸುತ್ತ ಅರಸಿ ಮಲ್ಲೇಬೀಳ ಕಡಿದೋರೆ ಊದಿದರು ||
ಊದಿದ ನೀರ ಕುಡಿದು ಪ್ರಾಣವ ಬಿಟ್ಟರಿತ್ತ ಪರಂಗಿ ದಂಡು ಉದ್ದಿಕೇರಿವಡ್ಡಿನಲಿ |
ಬಂದು ಬಿದಿರಹಿಂಡ್ಳವಟ್ಟನುವಟ್ಟಿರೆ ಕೋಣಪರಂಗಿಯೋನು |
ನಾ ಕುಮಾರೆಳೆದರೆ ನಾಯಕ ಚನ್ನೇಗೌಡ ಗುರಿಯಿಟ್ಟು, ನೋಡಿಯಿಟ್ಟ ||೪೩||

ಗುಂಡುಕೆಬಟಿ ಬಿಸಾಟು ಗಾಯಕ ವಸ್ತ್ರವಿಟ್ಕೋನೆ ಓಡಿದೋನು |
ಕೆಂಪುಸಾರಾಯ ಕುಡಿದು ಬಂದು ಬಿದಿರು ಹಿಂಡ್ಳ ಮತ್ತೆ ಎಳೆಯುತ್ತಿದ್ದನು ||
ನೋಡುತಿದ್ದ ನಾಯಕ ನಡುಹಣೆಗಿಟ್ಟರೆ ದೊಂಬ ಕರ್ಣ
ಹೊಡೆದ್ಹಂಗೆ ಬಿದ್ದ ಪರಂಗಿ |
ಕ್ರಾಸನ ತಲೆಯ ಪರಂಗಿಯೋರೆ ತಕ್ಕೊಂಡ್ರು ಚನ್ನೇಗೌಡಗೆ ಸಿಕ್ಕಲಿಲ್ಲ ||೪೪||

ಕೈಕಾಲ ಕಡಿದು ಧೊರೆಗೆ ತಂದು ತೋರಲು ಇವನ್ಯಾಕೆ ಹೊಡೆದ ಎಂದ |
ದಂಡು ಹಿಂದಕೆ ಹೋಯ್ತು ಹಿರಿಮಂದೆ ಚನ್ನಗೌಡನು ||
ರಾಜಾ ಇಲ್ಲಿರಬೇಡ ಎರಡು ಬಗೇತಾರೆ ಹೊರಡೆಂದೋನು |
ನೀ ಕೊಟ್ಟ ಕತ್ತಿಯ ಮಾರಿ ಅನ್ನವ ಆರು ತಿಂಗಳು ಕೊಡುತೇನೆಂದ ||೪೫||

ಹೇಳಿದ್ದೆ ಎದ್ದರು ಕೆಂಪಿಗೆ ಕೆಂಪಲ್ಲ ಕಪ್ಪಿಗೆ ಕಪ್ಪಲ್ಲವು |
ನೀಲವರ್ಣದ ಧೊರೆ ಕುರುವಿತ್ತೂರಿನ ಅದುರುಗುಡ್ಡದಲಿ ||
ದೊಡ್ಡರೆ ಧರ್ಮದ ಬಸವಗೆ ಅಡ್ಡಬಿದ್ದು ಹತ್ತಿ ಅತ್ತಳ್ಳಿಯ ಬೋರೇಲಿ
ದಣಿವಾಯಿತು |
ಚಂಬಿನ ಕೃಷ್ಣಯ್ಯ ಹಾಸಿಗೆ ದೊಡ್ಡಯ್ಯ ಎಲ್ಲಿಗೆ ಹೋದಿರಿ ಬನ್ನಿರೆಂದ ||೪೬||

ಗುಡ್ಡದಿ ಮರದಡಿ ಸದರು ಹಾಕಿದರೆ ತಂಗಾಳಿ ಹವಕಾಯಿತು |
ಆಗ ಸೋಮಣ್ಣನು ಪರಂಗಿದಂಡಿಗೆ ಕುಂಸಲು ಕೊಟ್ಟನಲ್ಲಾ ||
ಬಲ್ಲದ ಅರಮನೆ ಮುತ್ತಿಗೆ ಹಾಕಿಸಿ ಧೊರೆಯಿಲ್ಲದೆ ಅರೆಕೇರಿ ಐಗೂರಲಿ ||
ಅರಮನೆ ಮುತ್ತಿಶಿ ಹುಡುಕಿಸಿ ಕಾಣದೆ ಮೋಸವಾಯಿತು ಪರಾರಿ ಆದನೆಂದ
||೪೭||

ಮೂರು ವರುಷದಿಂದ ಕಾದಿದ ಮಲೆರಾಯನ ಕೊಲ್ಲುವದಿಲ್ಲವೆಂದು |
ಮೋಸದಿ ಕಾಗದ ಬರೆಯಿಶಿ ಸುಳ್ಳಕ್ಕಿ ಉದ್ದಿಜಗಲಿಯೋರ ಕೈಲಿಟ್ಟು ಕಳುಹಿಸಿದ ||
ತಂಪಾಗಿ ಹೊಂಗರ್ಹಳ್ಳದುಡುವೆಗೆ ಧೊರೆ ಬರಲು ಕುಳುವಾಡಿ ಬೈರಕಂಡು |
ಕ್ಯಾಸಕ್ಕಿಪಡಿ ಕೆಸವಿನಸೊಪ್ಪು ಹಸರು ಮೆಣಸಿನಕಾಯಿ
ಹೊಸಮಡಕೆ ಸಹ ನಜರು ಕೊಟ್ಟ ||೪೮||

ಈ ಸಾರಿ ಉಳಿದರೆ ಹತ್ತು ಖಂಡುಗ ಗದ್ದೆ ಉಂಬಳಿ ಕೊಡುತೇನೆಂದು |
ಒಲೆಹೂಡಿ ಅಡಿಗೆಯ ಮಾಡಿಸುತ್ತಿದ್ದರೆ ಇಬ್ಬರು ಕಾಣಿಸಲು ||
ಬಿಟ್ಟು ಎತ್ತಿನ ಹೊಳೆಗಡುವೆಗೆ ನುಗ್ಗಿದೋರು ನಾಮಶಾವೆ ಮಾಡಿದರು |
ನೆನೆಯಕ್ಕಿ ಒಂದು ಹಿಡಿ ತಿಂದರೆ ಬಂದರು ಯಮದೂತರಿವರಿಬ್ಬರು ||೪೯||

ಅಲ್ಲಿಂದೂ ಹೊರಟರೆ ಮುಂದಕೆ ನಾಯಿ ಬೆತ್ತಾ ತಡೆಯಿತು ಧೊರೆವುಟ್ಟ
ಧೋತ್ರ ಪಾರುಪಾರಾಯ್ತು |
ತೊಟ್ಟ ಅಂಗಿ ಚೂರುಚೂರಾಯ್ತು ಸಾವಿರ ಜಿಗಣೆ ಮುತ್ತಿತು ಪಾದಗಳ ||
ವಾಟೆಚೀಪು ಕಾಲಿಗೆ ಹೊಕ್ಕು ಶಾನೆ ರಕ್ತ ಸುರಿದು ಹಿಮ್ಮೆಟ್ಟಿ ಬಂದರಲ್ಲಾ |
ಅಡ್ಡ ಬಂದು ಸುಳ್ಳಕ್ಕಿ ನಂಜೆಗೌಡ ಉದ್ದಿಜಗಲಿ ವೀರೆಗೌಡ
ಕಾಗದವನು ಕೊಟ್ಟರು ||೫೦||

ದಂಡು ಹಿಂದಕೆ ಹೋಯ್ತು ತಿರಿಗಿ ಬನ್ನಿರೆಂದರೆ ಕಾಗದವನು ಓದಿದ |
ಮುಂದೆ ಧೊರೆಗಳು ಹಿಂದೆ ವೀರೆಗೌಡ ಬರುತಲಿ ಕತ್ತಿಯ ಎತ್ತಿದನು ||
ಎತ್ತಿದ ಕತ್ತಿಗೆ ಅಡ್ಡಮಲ್ಲೇ ಬೀಳುತಡೆದ್ದು ತುಂಡಾಗಿ ಉಡುಕತ್ತಿ ಕೆಳಗೆ ಬಿತ್ತು|
ಹಿಂದಿರಿಗಿ ನೋಡುತ ದಾಯಾದನಾದೆನೆ ನಿನಗೇನ ಮಾಡಿದ್ದೆನೆಂದರಲ್ಲಾ ||೫೧||

ಬೀಳುತಡಿಯೋದೆಂದು ಕಡಿದೇನೆ ಹೊರತಾಗಿ ಬೇರೆ ಅಲ್ಲಾವೆನ್ನಲು |
ಉರಿದುರಿದುಕ್ಕುವ ದುಃಖದಿ ರಾಯರು ಅಲ್ಲಿಯೆ ಕೂತರಲ್ಲಾ ||
ನಿನ್ನ ಸಂತಾನವು ಇರಬೇಡವೆಂದರು ಶಾಪವ ಕೊಟ್ಟರಲ್ಲಾ |
ಮುಂದಕ್ಕೆ ಹೊರಟರೆ ಸೋಮಣ್ಣ ಹಿಂದಟ್ಟಿ ಪರಂಗಿದಂಡೆಲ್ಲ ಮುತ್ತಿಶಿದ ||೫೨||

ಮೋಸ ಮಾಡಿದನಲ್ಲಾ ಸೋಮೇಗೌಡ ನಿನ್ನ ಹೆಂಡತಿ
ಮುಂಡೆಯಾಗಲಿ ಎಂದನು |
ಎರಡು ಕೈಯಲಿ ಎರಡು ಪಟ್ಟಾಕತ್ತಿಯ ಹಿಡಿದು ಯುದ್ಧವ ಮಾಡ್ತೇನೆಂದ ||
ಪ್ರಾಣ ಬಿಡುತೇನೆಂದು ಬೀಸುತ್ತಾ ಬಂದರೆ ತಾನೆದ್ದು ಮಾಡೋದಕೆ |
ನಾಯ ಸಾಕೋದ್ಯಾಕೆ ನಾನ್ಯಾಕೆ ಬೇಡವೆಂದ ಸೋಮಣ್ಣನು ||೫೩||

ಅನ್ನವಿಲ್ಲದೆ ಮೂರು ದಿನವಾಯ್ತು ರಾಜಗೆ ಕಳಸೊಕ್ಕಿತು |
ಕೆಂಚನ ಕುಮರಿಯ ಮಲೆಕುಮರಿ ಹತ್ತುತದೇವಳ್ಳಿ ಬೋಯಿ ಹುಡುಗ |
ಸಿಕ್ಕಲು ಸೋಮಣ್ಣ ಮದ್ದು ಹಾಕಿದ ಹಾಲತರಿಶಿ ಧೊರೆಗೆ ಕೊಟ್ಟ |
ಚಂಚಲಿಸುತ ಕುಡಿದು ಮದಹತ್ತಿ ಮತ್ತಾಗಿ ಕೆಳಗೆ ಬಿದ್ದ ||೫೪||

ಕತ್ತಿಕಠಾರಿಯ ಔಚಿಟ್ಟ ಸೋಮಣ್ಣ ಸುತ್ತಲು ಕಾವಲು ಹಾಕಿಸಿದ |
ಕೇಡುಗಾಲಕೆ ನಿದ್ದೆ ಮರಣಗಾಲಕೆ ಬುದ್ಧಿ ಇಲ್ಲವಲ್ಲಾ ||
ಧೊರೆ ಎದ್ದು ಎಡಬಲಕೆ ಕೈಹಾಕಿ ನೋಡಲು ಏನೂ ಸಿಕ್ಕದೆ ಹೋಯಿತಲ್ಲಾ |
ಉಪ್ಪೂ ಅಕ್ಕಿ ತಿಂದು ಮೋಸ ಮಾಡಿದನೆಂದು ಬಾಯಿ ಬಾಯಿ ಬಿಟ್ಟನಲ್ಲಾ ||೫೫||

ಆರಕ್ಕೆ ಹೆಚ್ಚಬೇಡ ಮೂರಕ್ಕೆ ಕುಂದಬೇಡ ನಾವು ಬಂದಾಗೊಂದು ಕೊನೆ ಇರಬೇಕೆಂದು |
ಶಾಪವ ಕೊಟ್ಟೋನು ನನ್ನಪ್ಪ ಮುಟ್ಟಬೇಡಿ ಸುತ್ತಲು ಬನ್ನಿರೆಂದ ||
ಉಗ್ಗಳ್ಳಿ ಬಾಗಿಲ ಸೇರಿದರೆಲ್ಲರು ಹಿರೆಮಂದೆ ಚನ್ನೇಗೌಡನ ಬಾರೆಂದು ಕರೆದರಲ್ಲಾ |
ನಿನಗೆ ಮದುವೆಯಾಗಿ ಆರು ತಿಂಗಳಾಯಿತು ಹೆಂಡತಿ ಮುಖವಿನ್ನೂ
ನೋಡಲಿಲ್ಲ ಹೋಗಪ್ಪ ಬದುಕೆಂದನು ||೫೬||

ಆಗ ಚನ್ನೇಗೌಡ ಈ ಲೋಕ ಸ್ಥಿರವಲ್ಲಾ ಯಮಲೋಕ ದೊಳಗಿಬ್ಬರೂ ಸೇರೋಣ|
ಗಲ್ಲು ನೋಡಬೇಕೆಂದು ಗಲ್ಲಿಗೆ ಬಿದ್ದೋನು ಪ್ರಾಣವ ಬಿಟ್ಟನಲ್ಲಾ ||
ಧೊರೆಯನು ಗಲ್ಲಿಗೆ ಹಾಕಲು ಹಗ್ಗ ಹರಿದು ಪ್ರಾಣವು ಹೋಗಲಿಲ್ಲ |
ಎಂಥ ಲಡ್ಡು ಹಗ್ಗವೆಂದರೆ ಹೊಸಗಲ್ಲು ಕಟ್ಟಲು ಧೊರೆ ಮತ್ತೆ ಬಿದ್ದನಲ್ಲಾ ||೫೭||

ಹಗ್ಗ ಹರಿದು ಹೋಯಿತು ಪ್ರಾಣವು ಉಳಿಯಿತು ಮಾತಮಾತಾಡುತಿರೆ |
ಮೇಲಿನಪ್ಪಣೆ ಬಂತು ಸೆರೆಹಿಡಿಯಬೇಕೆಂದು ಆಗ ಸೋಮೇಗೌಡನು ||
ಪೂರ್ಣಯ್ಯಗೆ ಕೈಯ ಮುಗಿದರೆ ಸೆರೆಯನು ಬಿಡಿಶಾನೆಂದ |
ಕಿಡಿಕಿಡಿಯಾದನು ಮೊಗ ನೋಡದಿದ್ದನು ಶ್ರೀ ವೆಂಕಟಾದ್ರಿ ಭೂಪ || ೫೮ ||

ಕೈಯ ಕೆಳಗೆ ಬರಕೊಂಡು ಇರುವಗೆ ಕೈಯನು ಮುಗಿಯಬೇಕೋ |
ಕ್ಯಾಕರಿಸಿ ಉಗಿದರೆ ನೂಲಿನ ಹಗ್ಗದಿ ಗಲ್ಲನೆ ಏರಿಸಿತು ||
ಮೂರು ದಿವಸವಾಯಿತು ಗಲ್ಲಿಗೆ ಹಾಕಿದ್ದ ಮೇಲಕ್ಕೆ ಬರೆಸಿದರು |
ಶಾರೇವರಹಾ ಚಲ್ಲಿದರೂ ಧೊರೆ ರಾಮರಾಮೆಂದು ಜಪ ಮಾಡಿದರು ||೫೯||

ಗರುಡನು ಚಕ್ರವ ತಿರುಗಿದನೂ ರೆಕ್ಕೆಯ ನೆಳಲನು ಒಡ್ಡಿದನು |
ಗುರುಗಳು ಕರುಣವ ಚೆಲ್ಲಿದರೂ ಬಲವಂತದಿ ನೇಣನು ಹಾಕಿದರು ||
ಸೂರ್ಯನ ಹಬೆ ಕಾಣದಂತಿರಲೂ ಧೊರೆ ಪ್ರಾಣವ ಬಿಟ್ಟನು ಧೈರ್ಯದಲಿ |
ಮೋಸ ಮಾಡಿದೋರೆಲ್ಲಾ ನಾಶವೇ ಆದರೂ ಸತ್ಯವೆ ಪಥ್ಯವಯ್ಯಾ ||೬೦||

ಅನುಬಂಧ ೫

# ಕೆನರಾ ಬಂಡಾಯಗಾರರ ವಿಚಾರಣೆಯ ನ್ಯಾಯಾಂಗ ಸೂಚಿ
## *(JUDICIAL INDEX)*

(ಆರಂಭದಲ್ಲಿರುವುದು ಪತ್ರದ ದಿನಾಂಕಗಳು)

೧೩ ಮೇ ೧೮೩೭: ಸದ್ರ್ (Sudr) ಅದಾಲತ್ತಿನ ರಿಜಿಸ್ಟ್ರಿಯಿಂದ : ಮಂಗಳೂರು ಗಲಭೆಯ ಸಮಯದಲ್ಲಿ ನ್ಯಾಯಾಲಯದ ಕಟ್ಟಡಕ್ಕೆ ಹಾನಿಯಾದುದರ ಬಗ್ಗೆ ಪಶ್ಚಿಮ ವಿಭಾಗದ ಸುಪರಿಂಟೆಂಡೆಂಟ್ ಇಂಜಿನಿಯರ ವರದಿಯ ಪತ್ರದ ನಕಲು ಕಳುಹಿಸಿ, ದಾಖಲಿಸಲು ಆಜ್ಞಾಪಿಸಲಾಗಿದೆ.

೧೯ ಮೇ ೧೮೩೭: ಪ್ರಿನ್ಸಿಪಲ್ ಕಲೆಕ್ಟರ್‌ರಿಂದ : ೧೮೦೨ರ ೨೦ನೇ ರೆಗ್ಯುಲೇಶನ್ ಪ್ರಕಾರ ಸರಕಾರದ ತಿಳಿವಳಿಕೆಗೆ ತರುವ ಮುಂಚಿತವಾಗಿ ಬಂಡಾಯದ ಎಲ್ಲಾ ಪ್ರಕರಣಗಳನ್ನು ಸ್ಪೆಶಲ್ ಕಮಿಶನ್ ಮುಂದಿಡುವ ಸಾರ್ವತ್ರಿಕ ಅಧಿಕಾರವನ್ನು ನೀಡುವಂತೆ ಮನವಿ.

ಈ ಅಧಿಕಾರ ಈಗಾಗಲೇ ಇರುವುದರಿಂದ ಪ್ರತ್ಯೇಕ ಅಪ್ಪಣೆಯು ಅಗತ್ಯವಿರುವುದಿಲ್ಲ.

೨೦ ಮೇ ೧೮೩೭ : ಮ್ಯಾಜಿಸ್ಟ್ರೇಟರಿಂದ : ಕೆನರಾದಲ್ಲಿ ಮಾರ್ಷಲ್ ಲಾ ಅನುಷ್ಠಾನಕ್ಕೆ ಬರುವ ಮೊದಲು ಬಂಡಾಯಗಾರರು ಮಾಡಿದ ಅಪರಾಧಗಳನ್ನು ವಿಚಾರಿಸುವ ಅಧಿಕಾರ ತಮಗಿಲ್ಲವೆಂಬ ಪತ್ರ.

ಈ ಅಧಿಕಾರವನ್ನು ನೀಡಿ, ಅಗತ್ಯವಿದ್ದಲ್ಲಿ ಸಹಾಯಕ್ಕಾಗಿ ಮಿಲಿಟರಿ ಅಧಿಕಾರಿಗಳ ಸೇವೆ ಒದಗಿಸಲು ಮ್ಯಾಜಿಸ್ಟ್ರೇಟರಿಗೆ ತಿಳಿಸಲಾಗಿದೆ.

೧ ಜೂನ್ ೧೮೩೭ : ಫೌಜುದಾರಿ ಅದಾಲತ್ ನಡಾವಳಿ : ಫೌಜು ಅದಾಲತ್ ಕೇಸ್ ನಂ. ೩ರ ತೀರ್ಪು ಮತ್ತು ೧೮೦೨ರ ಸೆಕ್ಷನ್ ೫ ರೆಗ್ಯುಲೇಶನ್ ೨೦ರ ಪ್ರಕಾರ ನಡೆಸಿದ ಎಲ್ಲಾ ನಡಾವಳಿಯೊಂದಿಗೆ ವಿಶೇಷ ಆಯೋಗಕ್ಕೆ ಕಳುಹಿಸಲಾಗಿದೆ.

೨೭ ಮೇ ೧೮೩೭ : ಮ್ಯಾಜಿಸ್ಟ್ರೇಟರಿಂದ : ವಿಶೇಷ ಆಯೋಗವು ಸುಬಾಜಿ ಎಂಬ ಬಂಡಾಯಗಾರನಿಗೆ ಮರಣದಂಡನೆಗಿಂತ ಕಡಿಮೆ ಶಿಕ್ಷೆ ನೀಡಿದ್ದೇಕ್ಕೆಂಬ ಬಗ್ಗೆ

ವಿವರಣೆ ಕೇಳಿಕೆ. ಉತ್ತರ : ವಿಶೇಷ ನಿಯೋಗ ತೀರ್ಪಿತ್ತ ಬಳಿಕ ಸರಕಾರ ಅಡ್ಡ ಬರುವ ಅಗತ್ಯವಿಲ್ಲ.

೨೧ ಮೇ ೧೮೩೭ : ಬ್ರಿಗೇಡಿಯರ್ ಜೆ. ಅಲನ್‌ರಿಂದ : (ಮಲಬಾರ್ ಮತ್ತು ಕೆನರಾ) ಮಾರ್ಷಲ್ ಲಾ ಪ್ರಕಾರ ಯುರೋಪಿನ ವಿಶೇಷ ನ್ಯಾಯಾಲಯವು ಲಚ್ಚಮನ್ ಬಂಗರ್ (ಲಕ್ಷ್ಮಪ್ಪ ಬಂಗರಸ)ನನ್ನು ಮಂಗಳೂರಲ್ಲಿ ನಡೆಸಿದ ವಿಚಾರಣೆಯ ನಡಾವಳಿಗಳನ್ನು ಕಳುಹಿಸಿಕೊಡಲಾಗಿದೆ.

೨೫ ಮೇ ೧೮೩೭ : ಬ್ರಿಗೇಡಿಯರ್ ಜೆ. ಅಲನ್‌ರಿಂದ : ಮಂಗಳೂರಿನ ಕಮಾಂಡಿಂಗ್ ಆಫೀಸರನಿಂದ ಪಡೆದ ವರದಿಯ ಪ್ರಕಾರ ಕ್ರಾಂತಿಕಾರಿ ಲಚ್ಚಮನ್ ಬಂಗರ್‌ನನ್ನು ಗಲ್ಲಿಗೇರಿಸಿ ಬಳಿಕ ಶವವನ್ನು ಸಂಕೋಲೆಗಳಿಂದ ನೇತು ಹಾಕಲಾಗಿದೆ.

೨೭ ಮೇ ೧೮೩೭ : ಬ್ರಿಗೇಡಿಯರ್ ಜೆ. ಅಲನ್‌ರಿಂದ : ಯುರೋಪಿಯನ್ ಕೋರ್ಟ್ ಮಾರ್ಷಲ್‌ನ ಆದೇಶದಂತೆ ಉಪ್ಪಿನಂಗಡಿ ಸರಕಾರಿ ಪ್ಯೂನ್ ಮಂಜುವನ್ನು ತಡಮಾಡದೆ ಗಲ್ಲಿಗೇರಿಸುವಂತೆ ಆಜ್ಞಾಪಿಸಲಾಗಿದೆ.

೩೦ ಮೇ ೧೮೩೭ : ಕರ್ನಲ್ ಜೆ. ಗ್ರೀನ್ (ಮಲಬಾರ್ ಮತ್ತು ಕೆನರಾ ಕಮಾಂಡಿಂಗ್ ಬ್ರಿಗೇಡಿಯರ್) : ಕ್ರಾಂತಿಕಾರಿ ಮಂಜುವನ್ನು ಬೆಳಿಗ್ಗೆ ಗಲ್ಲಿಗೇರಿಸಿರುವುದಾಗಿ ವರದಿ ಸಲ್ಲಿಸಲಾಗಿದೆ.

೧೪ ಏಪ್ರಿಲ್ ೧೮೩೭ : ಬ್ರಿ. ಜೆ. ಅಲನ್‌ರಿಗೆ ಮುಖ್ಯ ಇಲಾಖೆಯಿಂದ ಬಂದಿರುವ ಪತ್ರದ ನಕಲು : ಕೆನರಾದ ಗಲಭೆಗೊಳಗಾದ ತಾಲೂಕುಗಳಲ್ಲಿ ಸರಕಾರದ ವಿರುದ್ಧ ಶಸ್ತ್ರ ಹಿಡಿದವರನ್ನು ಮತ್ತು ಅವರಿಗೆ ಸಹಾಯ ನೀಡಿದವರನ್ನು ಕೋರ್ಟ್ ಮಾರ್ಷಲ್‌ಗೆ ಒಳಪಡಿಸುವ ಮತ್ತು ಕೂಡಲೇ ವಿಚಾರಣೆಗೊಳ ಪಡಿಸುವ ಅಧಿಕಾರ ನೀಡಲಾಗಿದೆ. ಸಹಾಯ ಮತ್ತು ಸಲಹೆಗಾಗಿ, ಸಹ ನ್ಯಾಯಾಧೀಶ ಮತ್ತು ವಕೀಲನಾಗಿ ಕಾರ್ಯ ನಿರ್ವಹಿಸಲು ೪೧ನೇ ರೆಜಿಮೆಂಟಿನ ಎನ್. ಐ. ನ ಕ್ಯಾಪ್ಟನ್ ಡಬ್ಲ್ಯೂ. ಪಿ. ಮೆಕ್‌ಡನಾಲ್ಡ್‌ನನ್ನು ನೇಮಿಸಲಾಗಿದೆ.

೪ ಜೂನ್ ೧೮೩೭ : ಮ್ಯಾಜಿಸ್ಟ್ರೇಟನಿಂದ : ಕ್ರಾಂತಿಕಾರರನ್ನು ವಿಚಾರಣೆಗೊಳಪಡಿಸಲು ಆಗುತ್ತಿರುವ ಅನಾನುಕೂಲತೆಗಳನ್ನು ಗಮನಿಸಿ, ಸರಕಾರ ಹೊಸ ಆದೇಶದ ಮೂಲಕ ವಿಶೇಷ ನಿಯೋಗದ ತೊಂದರೆಗಳನ್ನು ನಿವಾರಿಸಲು ವಿನಂತಿಸಲಾಗಿದೆ.

೭ ಜೂನ್ ೧೮೩೭ : ಫೌಜುದಾರಿ ಅದಾಲತ್ ನಡಾವಳಿಗಳಿಂದ ಆಯ್ದುದ್ದು : ಸೆಕ್ಷನ್ ೫ ರೆಗ್ಯುಲೇಶನ್ ೨೦, ೧೮೦೨ರ ಅನ್ವಯ ಫೌಜುದಾರಿ ಅದಾಲತ್ ಕೇಸ್ ನಂ. ೨೧ ತೀರ್ಪು ಮತ್ತು ನಡಾವಳಿಗಳನ್ನು ಸರಕಾರದ ಆದೇಶಕ್ಕಾಗಿ ಕಳಿಸಿಕೊಡಲಾಗಿದೆ.

೨ ಜೂನ್ ೧೮೩೭ರಂದು ಸರಕಾರದ ಅನುಮತಿ ಸಿಕ್ಕಿತು. ಆರೋಪಿಗಳನ್ನು ಗಲ್ಲಿಗೇರಿಸುವಂತೆ ಆಜ್ಞಾಪಿಸಲಾಯಿತು.

೧೦ ಜೂನ್ ೧೮೩೭: ಬ್ರಿ. ಜೆ. ಅಲನ್ : ಯುರೋಪಿಯನ್ ವಿಶೇಷ ನ್ಯಾಯಾಲಯದಲ್ಲಿ ವಿಚಾರಣೆಗೊಳಪಟ್ಟ ಮಂಗಳೂರಿನ ಐವರು ಬಂಡುಕೋರರಿಗೆ ವಿಧಿಸಲಾದ ಮರಣ ದಂಡನೆಯ ತೀರ್ಪನ್ನು ಕೆಲವೊಂದು ಕಾರಣಗಳಿಗಾಗಿ ಬದಲಾಯಿಸುವಂತೆ ಸೂಚಿಸಲಾಯಿತು.

೧೪, ೧೫, ೧೯ ಜೂನ್ ೧೮೩೭: ಫೌಜುದಾರಿ ಅದಾಲತ್ ನಡಾವಳಿಯಿಂದ : ಕೇಸ್ ನಂ. ೭, ೮, ೫, ೬, ೯ಗಳನ್ನು ಮಂಗಳೂರು ವಿಶೇಷ ನಿಯೋಗದಿಂದ ೧೮೦೨ರ ಸೆಕ್ಷನ್ ೫ ರೆಗ್ಯುಲೇಶನ್ ೨೦ರ ಪ್ರಕಾರ ಸರಕಾರದ ಅಪ್ಪಣೆಗೆ ಕಳುಹಿಸಿಕೊಡಲಾಗಿದೆ.

೨೬ ಡಿಸೆಂಬರ್ ೧೮೩೬ : ಫೌಜುದಾರಿ ಅದಾಲತ್ ತೀರ್ಪು ಒಪ್ಪಲಾಗಿದೆ ಮತ್ತು ಕಾರ್ಯಗತಗೊಳಿಸುವಂತೆ ಆಜ್ಞಾಪಿಸಲಾಗಿದೆ.

೧೫ ಜೂನ್ ೧೮೩೭ : ಬ್ರಿ. ಜೆ. ಅಲನ್‌ನಿಂದ : ಮಂಗಳೂರಿನ ಬಂಡಾಯಗಾರ ಪುಟ್ಟಬಸಪ್ಪನನ್ನು ಯುರೋಪಿಯನ್ ವಿಶೇಷ ನ್ಯಾಯಾಲಯದ ವಿಚಾರಣಾ ನಡಾವಳಿಯನ್ನು ಕಳುಹಿಸುವುದರೊಂದಿಗೆ ಖೈದಿಯನ್ನು ತಡಮಾಡದೆ ಗಲ್ಲಿಗೇರಿಸುವಂತೆ ತಿಳಿಸಲಾಗಿದೆ.

೧೯ನೇ ಜೂನ್ ೧೮೩೭: ಬಂಡಾಯಗಾರ ಬಸಪ್ಪನನ್ನು ೧೯ರಂದು ಗಲ್ಲಿಗೇರಿಸಿರುವುದಾಗಿ ವರದಿ ಮಾಡಲಾಯಿತು.

೯ ಜೂನ್ ೧೮೩೭: ಸದ್ರ (Sudr) ಮತ್ತು ಫೌಜುದಾರಿ ಅದಾಲತ್‌ನ ನಡಾವಳಿಯಿಂದ ಆಯ್ದದ್ದು :

ಕೇಸ್ ನಂ. ೪ನ್ನು ಸರಕಾರದ ಅಪ್ಪಣೆಗೆ ಕಳುಹಿಸಿದ್ದು.

೨೯ ಜೂನ್ ೧೮೩೭ : ಈ ಕೇಸಿಗೆ ಒಪ್ಪಿಗೆ ನೀಡಿದೆ ಮತ್ತು ಕಾರ್ಯಗತ ಮಾಡುವಂತೆ ಅಪ್ಪಣೆ ನೀಡಿದೆ.

೧೯ ಜೂನ್ ೧೮೩೭ : ಲೆ. ಕ|| ಬಿ. ಎಂ. ಮಾಸ್ಟರ್, ೨೩ನೇ ಎಲ್. ಐ. ಕಮಾಂಡಿಂಗ್ ಬ್ರಿಗೇಡಿಯರ್ ಮಲಬಾರ್ ಮತ್ತು ಕೆನರಾ : ಬಂಡಾಯಗಾರ ಕಲ್ಯಾಣಪ್ಪನನ್ನು ಯುರೋಪಿಯನ್ ವಿಶೇಷ ನ್ಯಾಯಾಲಯದ ತೀರ್ಪಿನ ಪ್ರಕಾರ ಗಲ್ಲಿಗೇರಿಸಿದ್ದಾಗಿ ವರದಿಯಾಗಿದೆ.

೧೬ ಜೂನ್ ೧೮೩೭ : ಫೌಜುದಾರಿ ಅದಾಲತಿನ ನಡಾವಳಿಯಿಂದ ಆಯ್ದದ್ದು : ಕೇಸ್ ನಂ. ೧ನ್ನು ಸರಕಾರದ ಅಪ್ಪಣೆಗೆ ಕಳುಹಿಸಲಾಗಿದೆ.

೨೬ ಜೂನ್ ೧೮೩೭ : ಸದ್ರ್ (Sudr) ಅದಾಲತ್ ರಿಜಿಸ್ಟ್ರಿಯಿಂದ : ಕೆನರಾದ ನ್ಯಾಯಾಧೀಶರ ಎ, ಬಿ ಮತ್ತು ಸಿ ಮೂರು ಹೇಳಿಕೆಗಳ ಪ್ರಕಾರ ಇತ್ತೀಚಿನ ಗಲಭೆಯ ಸಂದರ್ಭದಲ್ಲಿ ನ್ಯಾಯಾಂಗ ಇಲಾಖೆಗೆ ಆಗಿರುವ ನಷ್ಟ ಮತ್ತು ಸರಕಾರದಿಂದ ಸಲ್ಲಲು ಬಾಕಿ ಇರುವ ರೂ. ೧,೬೫೩ - ೩ ಆಣೆ - ಪೈ ೪.೫ ಮತ್ತು ಹೇಳಿಕೆ ಸಿಯ ಪ್ರಕಾರ ಕೊಂಡುಕೊಳ್ಳಬೇಕಾಗಿ ಸೂಚಿಸಲ್ಪಟ್ಟಿರುವ ವಸ್ತುಗಳ ವಿವರ ಹಾಗೂ ಮೊಬಲಗು ರೂ. ೧೪೮ ಮತ್ತು ಹೇಳಿಕೆ ಎ ಪ್ರಕಾರ ಉಳಿಕೆ ಮೊತ್ತದಲ್ಲಿ ಆಗಿರುವ ಲಾಭ ಮತ್ತು ನಷ್ಟ.

೧೬ ಜೂನ್ ೧೮೩೭ : ಬ್ರಿ. ಜೆ. ಅಲನ್‌ನಿಂದ : ಕೆನರಾದ ಮೂವರು ಖೈದಿಗಳು ಪ್ರಭಾವಶಾಲಿಗಳೂ, ಕ್ರಿಯಾಶೀಲ ನಾಯಕರೂ ಆಗಿದ್ದು, ವಿಶೇಷ ಕೋರ್ಟ್ ಮಾರ್ಷಲ್ ನಡೆಸಿದ ಅವರ ವಿಚಾರಣಾ ವರದಿಯನ್ನು ಕಳುಹಿಸಲಾಗಿದೆ. ಮರಣದಂಡನೆಗೆ ಒಪ್ಪಿಗೆ ಸಿಗಬಹುದಾಗಿದೆ ಮತ್ತು ಕಾರ್ಯಗತಗೊಳಿಸುವ ಬಗ್ಗೆ ಸೂಚಿಸಲಾಗಿದೆ.

೨೮ ಜೂನ್ ೧೮೩೭ : ಬ್ರಿ. ಜೆ. ಅಲನ್‌ನಿಂದ : ಯುರೋಪಿಯನ್ ವಿಶೇಷ ಕೋರ್ಟ್ ಮಾರ್ಷಲ್ ವಿಚಾರಣಾ ವರದಿ ಪ್ರಕಾರ ಮಂಗಳೂರು ಬಂಡಾಯಗಾರ ಮುಂಗೆಣ್ಣನೆಂಬ ಖೈದಿ ಮರಣದಂಡನೆಗೆ ತಕ್ಕವನಾಗಿದ್ದಾನೆಂದು ಸರಕಾರಕ್ಕೆ ಅಭಿಪ್ರಾಯ ಕಳುಹಿಸಲಾಗಿದೆ.

೨೮ ಜೂನ್ ೧೮೩೭ : ಬ್ರಿ. ಜೆ. ಅಲನ್‌ನಿಂದ : ಕೆನರಾದಲ್ಲಿ ಮಾರ್ಷಲ್ ಲಾವನ್ನು ಅಂತ್ಯಗೊಳಿಸಿದ ಘೋಷಣೆಯನ್ನು ವರದಿ ಮಾಡಲಾಗಿದೆ. ವಿಶೇಷ ಕೋರ್ಟ್ ಮಾರ್ಷಲ್‌ನಲ್ಲಿ ವಿಚಾರಣೆ ನಿರೀಕ್ಷಣೆಯಲ್ಲಿರುವ ಖೈದಿಗಳನ್ನು ಸ್ವೀಕರಿಸಲು ಮ್ಯಾಜಿಸ್ಟ್ರೇಟರಿಗೆ ತಿಳಿವಳಿಕೆ ಕೊಡಲಾಗಿದೆ.

೨೮ ಜೂನ್ ೧೮೩೭ : ಬ್ರಿ. ಜೆ. ಅಲನ್‌ನಿಂದ : ಮಂಗಳೂರಿನ ಯುರೋಪಿಯನ್ ವಿಶೇಷ ಕೋರ್ಟ್ ಮಾರ್ಷಲ್‌ನ ವಿಚಾರಣಾ ನಂಬ್ರ ೩ರ ಪ್ರಕಾರ ಮರಣದಂಡನೆ ವಿಧಿಸಲ್ಪಟ್ಟ ಐವರು ಖೈದಿಗಳಿಗೆ ಮರಣದಂಡನೆಗೆ ಬದಲಾಗಿ ಕಠಿಣ ಸಜೆ ವಿಧಿಸುವುದಾಗಿ ವರದಿ ಮಾಡಲಾಗಿದೆ.

೨೬ ಜೂನ್ ೧೮೩೭ : ಮ್ಯಾಜಿಸ್ಟ್ರೇಟನಿಂದ : ಈಗ ಮಂಗಳೂರಲ್ಲಿ ಬಂಡಾಯಗಾರರನ್ನು ವಿಚಾರಣೆ ಮಾಡುತ್ತಿರುವ ಎರಡು ಕೋರ್ಟುಗಳಿಗೆ ಸಲ್ಲಿಸಿರುವ ಮತ್ತು ಸಲ್ಲಿಸಲಿರುವ ಸಾಕ್ಷ್ಯಾಧಾರಗಳನ್ನು ಪಡೆಯುವಲ್ಲಿ ಆಗುತ್ತಿರುವ ತೊಂದರೆಯ ಪರಿಸ್ಥಿತಿಯಿಂದಾಗಿ ಕೇವಲ ಒಪ್ಪಿಕೊಳ್ಳುವವನ ಸಾಕ್ಷಿ ಆಧಾರದ ಹೊರತಾಗಿ, ಬೇರೆ ಸಾಕ್ಷಿಗಳಿಲ್ಲದ ಮತ್ತು ತರಲು ಸಾಧ್ಯವಾಗದ ಸಂದರ್ಭದಲ್ಲಿ - ಕ್ಷಮಿಸುವ ವಿವೇಚನಾ ಅಧಿಕಾರವನ್ನು ತನಗೆ ಕೊಡಬೇಕೆಂದು ಭಿನ್ನವಿಸಲಾಗಿದೆ.

೨೬ ಜೂನ್ ೧೮೩೭ : ಮೇಲಿನ ಪತ್ರದಲ್ಲಿ ಹೇಳಿರುವ ಪರಿಸ್ಥಿತಿಯಲ್ಲಿ ಅತ್ಯಂತ ಸರಿಯಾದ ಮತ್ತು ಸುಲಭವಾದ ಆಚರಣೆ ಏನು ಎಂಬುದಾಗಿ ಫೌಜುದಾರಿ ಅದಾಲತ್ ತಿಳಿಸುವಂತೆ ವಿನಂತಿಸಲಾಗಿದೆ.

೨೮ ಜೂನ್ ೧೮೩೭ : ಮ್ಯಾಜಿಸ್ಟ್ರೇಟನಿಂದ : ಏಪ್ರಿಲ್ ೫ ಮತ್ತು ಅನಂತರದ ದಿನಗಳಲ್ಲಿ ಕೆನರಾದ ಒಳಗೆ ಹಾಗೂ ಹೊರಗೆ ಕಾರ್ಯಾಚರಣೆ ನಡೆಸಿದ ಖೈದಿಗಳ ಪೈಕಿ ತನ್ನ ವಶಕ್ಕೆ ಬೇರೆ ಬೇರೆ ಇಲಾಖೆಗಳ ಮೂಲಕ ಬಂದಿರುವವರ ಬಗ್ಗೆ ನಿವೇದನಾಪತ್ರ ಸಲ್ಲಿಸಲಾಗಿದೆ.

೬ ಜುಲೈ ೧೮೩೭ : ಫೌಜುದಾರಿ ಅದಾಲತ್ ರಿಜಿಸ್ಟ್ರಿಯಿಂದ : ಕೆನರಾದ ಕ್ರಿಮಿನಲ್ ಜಡ್ಜ್ ಬರೆದ ಪತ್ರದ ನಕಲು ಕೊಡಲಾಗಿದೆ ಮತ್ತು ೨೫ ರಂದು ೮ ಹೆಚ್ಚುವರಿ ಪ್ಯೂನ್‌ಗಳನ್ನು ನೇಮಿಸಿಕೊಳ್ಳಲು ಹಕ್ಕು ನೀಡಲಾಗಿದೆ. ಇನ್ನು ಮುಂದೆ ಎಲ್ಲಾ ಶಿಕ್ಷೆಗೊಳಗಾದವರನ್ನು ಹಾಗೂ ಮಂಗಳೂರು ವಿಶೇಷ ನ್ಯಾಯಾಲಯದಿಂದ ತಾತ್ಕಾಲಿಕವಾಗಿ ಶಿಕ್ಷೆಗೊಳಗಾಗುವವರನ್ನು ತಿರುಚಿನಾಪಳ್ಳಿ ಮ್ಯಾಜಿಸ್ಟ್ರೇಟರ ವಶಕ್ಕೆ ವರ್ಗಾಯಿಸುವಂತೆ ಸೂಚಿಸಲಾಗಿದೆ.

೧೩ ಜುಲೈ ೧೮೩೭ : ಹೆಚ್ಚುವರಿ ಪ್ಯೂನ್‌ಗಳ ಉದ್ಯೋಗಕ್ಕೆ ಅನುಮತಿ ನೀಡಲಾಗಿದೆ ಮತ್ತು ವಿಶೇಷ ನಿಯೋಗ ತಾತ್ಕಾಲಿಕ ಕಾರಾಗೃಹ ಶಿಕ್ಷೆ ವಿಧಿಸಿದ ಖೈದಿಗಳನ್ನು ತಿರುಚಿನಾಪಳ್ಳಿ ಜೈಲಿಗೆ ವರ್ಗಾಯಿಸುವ ಸೂಚನೆಯನ್ನು ಕಂದಾಯ ಇಲಾಖೆಯ ಅಭಿಪ್ರಾಯಕ್ಕೆ ಕಳುಹಿಸಲಾಗಿದೆ.

೧೦ ಜುಲೈ ೧೮೩೭ : ಫೌಜು ಅದಾಲತ್ ನಡಾವಳಿಯಿಂದ ಆಯ್ದದ್ದು : ಫೌಜು ಅದಾಲತ್ ಕೇಸ್ ನಂ ೧೧೮ ತೀರ್ಪು ಮಂಗಳೂರು ವಿಶೇಷ ನ್ಯಾಯಾಲಯದಿಂದ ಕೇಸಿನ ಎಲ್ಲಾ ನಡಾವಳಿಯೊಂದಿಗೆ ಸರಕಾರದ ಅಪ್ಪಣೆಗೆ (೧೮೦೨ರ ಸೆಕ್ಷನ್ ೫ ರೆಗ್ಯುಲೇಶನ್ ೨೦) ಕಳುಹಿಸಿಕೊಡಲಾಗಿದೆ.

೧೫ ಜುಲೈ ೧೮೩೭ : ಫೌಜು ಅದಾಲತಿನ ತೀರ್ಪನ್ನು ಒಪ್ಪಲಾಗಿದೆ ಮತ್ತು ಕಾರ್ಯಗತಗೊಳಿಸಲು ಅಪ್ಪಣೆ ನೀಡಲಾಗಿದೆ.

೧೨ ಜುಲೈ ೧೮೩೭ : ಫೌಜುದಾರಿ ಅದಾಲತ್ ರಿಜಿಸ್ಟರ್‌ನಿಂದ : ಮಂಗಳೂರು ಕ್ರಿಮಿನಲ್ ಜಡ್ಜ್‌ನಿಂದ ಗಡಿಪಾರು ಶಿಕ್ಷೆ ವಿಧಿಸಲ್ಪಟ್ಟವರನ್ನು ಮಂಗಳೂರಲ್ಲೇ ಇರಿಸಿಕೊಳ್ಳಬೇಕು ಮತ್ತು ಆಫೀಸರು ಮದ್ರಾಸ್‌ಗೆ ಸಮುದ್ರ ಮೂಲಕ ಕೊಂಡೊಯ್ಯುವ ಸಾಧ್ಯತೆಯನ್ನು ಉಪಯೋಗಿಸಿಕೊಳ್ಳುವಂತೆ ಜಡ್ಜರು ಆದೇಶಿಸಬೇಕೆಂದು ಫೌಜುದಾರಿ ಅದಾಲತ್ ನಿರ್ದೇಶಿಸಿರುವುದಾಗಿ ವರದಿಯಾಗಿದೆ.

ಮೇಲ್ಕಾಣಿಸಿದ ಪತ್ರದ ಪ್ರಕಾರ ಅಪರಾಧಿಗಳನ್ನು ಸಮುದ್ರ ಮೂಲಕ ಮದ್ರಾಸಿಗೆ ಕಳುಹಿಸುವ ವ್ಯವಸ್ಥೆಗೆ ಫೌಜುದಾರಿ ಅದಾಲತ್ ಕೇಳಿಕೊಂಡಿರುವುದನ್ನು ಒಪ್ಪಲಾಯಿತು ಮತ್ತು ಈ ಸಂಬಂಧವಾಗಿ ಅವಶ್ಯವಿರುವ ಅಪ್ಪಣೆ ಕೊಡುವಂತೆ ವಿನಂತಿಸಿಕೊಳ್ಳಲಾಯಿತು.

೨೩ ಜೂನ್ ೧೮೩೭: ಮ್ಯಾಜಿಸ್ಟ್ರೇಟನಿಂದ : ಪಶ್ಚಿಮ ವಲಯದ ೨ನೇ ಜಡ್ಜನ ನಡಾವಳಿಯ ಪ್ರತಿಯೊಂದಿಗೆ ಎಷ್ಟು ಮಂದಿ ಸರಕಾರ ವಿರೋಧಿ ಖೈದಿಗಳು ಆತನ ಸ್ವಾಧೀನ ಇದ್ದಾರೆ? ವಿಶೇಷ ನಿಯೋಗದ ಮುಂದೆ ತರಬೇಕಾದವರ ಅಂದಾಜು ಸಂಖ್ಯೆ ಎಷ್ಟು? ಈಗ ಕೆನರಾದಲ್ಲಿ ಕಂಡುಬರುವ ಅವ್ಯೆಚಾರಿಕ ಬೇಡಿಕೆಯ ಬಗ್ಗೆ ಆತನ ಅಭಿಪ್ರಾಯವೇನು? ಇತ್ಯಾದಿ ವಿವರ ಕೇಳಲಾಗಿದೆ.

೨೪ ಜೂನ್ ೧೮೩೭: ಮ್ಯಾಜಿಸ್ಟ್ರೇಟನಿಂದ : ಪಶ್ಚಿಮ ವಲಯದ ಎರಡನೇ ನ್ಯಾಯಾಧೀಶನಿಂದ ನಿನ್ನೆಯ ಪತ್ರದ ಉಲ್ಲೇಖದಂತೆ ಒಂದು ಆಜ್ಞಾಪತ್ರ ಸಲ್ಲಿಸಲು ಮತ್ತು ಬಂಡಾಯಕ್ಕೆ ಸಂಬಂಧಿಸಿದ ಪುಂಡಶೆಟ್ಟಿ ಎಂಬ ಖೈದಿಯ ಬಂಧನವನ್ನು ಸಮರ್ಥಿಸಿ ಸರಕಾರ ಈತನ ಬಗ್ಗೆ ಶೀಘ್ರ ಅಪ್ಪಣೆ ನೀಡಲು ಮನವಿ ಸಲ್ಲಿಸಲಾಗಿದೆ.

೩ ಜುಲೈ ೧೮೩೭: ಫೌಜುದಾರಿ ಅದಾಲತ್ ನಡಾವಳಿಯಿಂದ ಆಯ್ದುದ್ದು : ಸರಕಾರದ ಅಭಿಪ್ರಾಯ ಮತ್ತು ಅಪ್ಪಣೆಗಾಗಿ ಈ ಕೆಳಗಿನ ಮೂಲಪ್ರತಿಗಳನ್ನು ಸಲ್ಲಿಸಲಾಗಿದೆ. ಪಶ್ಚಿಮ ವಲಯದ ಜಡ್ಜ್ ಮಿ. ವಾಘನ್ ಪತ್ರವ್ಯವಹಾರ ಮತ್ತು ಕೆನರಾದ ಮ್ಯಾಜಿಸ್ಟ್ರೇಟ್ ಮಿ. ಲೆವಿನ್ ಮತ್ತು ಫೌಜುದಾರಿ ಅದಾಲತ್ ಕೋರ್ಟ್ ಸಾದರಪಡಿಸಿದ ಅಭಿಪ್ರಾಯ - ಮುಂದಿನ ಅಧಿಕಾರಿಗೆ ಇದರ ಸೂಕ್ತ ನಿಲುವಿನ ಸ್ಪಷ್ಟತೆ ಇಲ್ಲದೆ ಹೋದರೆ - ತ್ವರಿತ ನಿರ್ವಹಣೆಯಲ್ಲಿ ತೀವ್ರ ಅಡಚಣೆಯೇ ಇದರ ಪರಿಣಾಮವಾಗುವುದು.

೧೭ ಜುಲೈ ೧೮೩೭: ಫೌಜುದಾರಿ ಅದಾಲತಿನ ರಿಜಿಸ್ಟರ್‌ನಿಂದ : ಕೆನರಾ ಮ್ಯಾಜಿಸ್ಟ್ರೇಟನ ವರದಿ ಮತ್ತು $C_2$ & $C_2$ನ ನಕಲು ಮುಂದಿಡಲಾಗಿದೆ. ಮಂಗಳೂರು ವಿಶೇಷ ಕೋರ್ಟಿನಲ್ಲಿ ೨೩ ಜೂನ್ ೧೮೩೭ ವಿಚಾರಣೆಗಾಗಿ ಇರಿಸಿಕೊಂಡ ಖೈದಿಗಳ ಉದಾಹರಣೆಯೊಂದಿಗೆ ಮತ್ತು ೧೩ ಖೈದಿಗಳನ್ನು ವಿಚಾರಣೆಗೊಳಪಡಿಸಬಹುದೆಂಬ ಅಭಿಪ್ರಾಯ ಹಾಗೂ ಉಳಿದವರು ಮಡಿಕೇರಿ ಕಾರ್ಯಾಚರಣೆಗೆ ಸಂಬಂಧಿಸಿದವರಾಗಿದ್ದು - ಅವರ ತಪ್ಪು ತಿಳಿಸಿ, ಎಚ್ಚರಿಸಿ, ಬುದ್ಧಿ ಹೇಳಿಬಿಡಬಹುದು. ಬಂಡಾಯ ಮ್ಯಾಜಿಸ್ಟ್ರೇಟರಿಗೆ ಶಿಕ್ಷಿಸುವ ಅಧಿಕಾರ ಇಲ್ಲದ ಕಾರಣ ಸರಕಾರ ಅನುಮತಿ ನೀಡಿ ಎಚ್ಚರಿಸಿ, ಉಳಿದವರನ್ನು ಬಿಡುಗಡೆಗೊಳಿಸಲು ವಿನಂತಿಸುವುದು.

**೧೯ ಡಿಸೆಂಬರ್ ೧೮೩೬:** ಫೌಜುದಾರಿ ಅದಾಲತ್ ರಿಜಿಸ್ಟ್ರರ್‌ನಿಂದ : ತಾ. ೧೧ರ ವರದಿಯಲ್ಲಿರುವ ಪ್ರಕಾರ ಫೌಜುದಾರಿ ಅದಾಲತ್ತಿನ ಜಡ್ಜರ ಪತ್ರ (ತಾ. ೧೭)ವನ್ನು ಸರಕಾರವು ಒಪ್ಪಿಕೊಂಡರೆ, ಕೆನರಾದ ಮ್ಯಾಜಿಸ್ಟ್ರೇಟನಿಗೆ ತಮ್ಮೊಂದಿಗೆ ಭಾಗವಹಿಸಿದವರ ವಿರುದ್ಧ ಸಾಕ್ಷಿ ಹೇಳಬಲ್ಲವರನ್ನು ಖೈದಿಗಳ ಪೈಕಿ ಆರಿಸಿಕೊಳ್ಳಲು ಏನೂ ಕಷ್ಟವಾಗುವುದಿಲ್ಲ. ಹಾಗಾಗದಿದ್ದರೆ ೧೮೦೨ ಸೆಕ್ಷನ್ ೨೧ ರೆಗ್ಯುಲೇಶನ್ ೮ರ ಪ್ರಕಾರ ಕಾನೂನು ಕ್ರಮ ತೆಗೆದುಕೊಳ್ಳಬೇಕಾಗುವುದು.

**೧೭ ಜುಲೈ ೧೮೩೭ :** ಫೌಜುದಾರಿ ಅದಾಲತ್ ರಿಜಿಸ್ಟ್ರರ್‌ನಿಂದ : ಸರಕಾರದ ತಾ. ೧೧ರ ಪತ್ರದ ಪ್ರಕಾರ ಫೌಜುದಾರಿ ಅದಾಲತ್‌ನ ಅಭಿಪ್ರಾಯದಂತೆ ಮಂಗಳೂರಿನ ವಿಶೇಷ ಕೋರ್ಟು ಮಾರ್ಷಲ್ ಜಿಲ್ಲೆಯಲ್ಲಿ ಮಾರ್ಷಲ್ ಲಾ ಹಿಂತೆಗೆದುಕೊಳ್ಳುವ ಮೊದಲೇ ತನ್ನ ತೀರ್ಪು ಕೊಟ್ಟಿದ್ದರೆ - ಅಧಿಕೃತ ಸಂಸ್ಥೆಯು ಅದನ್ನು ಅಂಗೀಕರಿಸುವುದರಲ್ಲಿ ಮತ್ತು ಅದನ್ನು ಕಾರ್ಯಗತಗೊಳಿಸುವುದರಲ್ಲಿ ಅಭ್ಯಂತರವಿರುವುದಿಲ್ಲ.

**೧೭ ಜುಲೈ ೧೮೩೭:** ಮ್ಯಾಜಿಸ್ಟ್ರೇಟನಿಂದ : ಕೆನರಾದಲ್ಲಿ ಈ ಹಿಂದೆ ನಡೆದ ಬಂಡಾಯಕ್ಕೆ ಸಂಬಂಧಿಸಿದ ಪತ್ರಗಳ ನಕಲನ್ನು ಪಶ್ಚಿಮ ಪ್ರೊವಿಶನಲ್ ಕೋರ್ಟಿಗೆ ವಾರದೊಳಗಾಗಿ ಕಳುಹಿಸುವುದು ಮತ್ತು ಈವರೆಗೆ ಕಳುಹಿಸದಿರಲು ಕಾರಣವೇನೆಂಬ ವಿವರ ತಿಳಿಸುವುದು.

**೨೪ ಅಗಸ್ಟ್ ೧೮೩೭:** ಮ್ಯಾಜಿಸ್ಟ್ರೇಟನ ಈ ಪತ್ರದಲ್ಲಿ ಬರೆದಿರುವ ಆತನ ಕರ್ತವ್ಯವನ್ನು ಪಶ್ಚಿಮ ವಿಭಾಗದ ನ್ಯಾಯಾಲಯದರೊಂದಿಗೆ ಹೋಲಿಸಿರುವುದು ತೀರಾ ಅನವಶ್ಯವಾಗಿದೆ.

**೨೬ ಜುಲೈ ೧೮೩೭:** ಬ್ರಿಗೇಡಿಯರ್ ಜೆ. ಅಲನ್‌ನಿಂದ : ಕೆನರಾದಲ್ಲಿ ರಾಜ್ಯದ ಕೋರ್ಟು ವಿಚಾರಣೆಯಲ್ಲಿ ಸಹ ನ್ಯಾಯಾಧೀಶ ವಕೀಲನಾಗಿ ಕಾರ್ಯ ನಿರ್ವಹಿಸಿದ್ದಕ್ಕೆ ವೇತನವಾಗಿ ರೂ. ೪೨ ಮಂಜೂರು ಮಾಡಲು ಮನವಿ.

**೨ ಅಗಸ್ಟ್ ೧೮೩೭:** ಫೌಜುದಾರಿ ಅದಾಲತ್ ರಿಜಿಸ್ಟರ್‌ನಿಂದ : ಕಳೆದ ಏಪ್ರಿಲ್ ೫ರಂದು ಸೆರೆಹಿಡಿದ ೭೦ ಖೈದಿಗಳನ್ನು ಇನ್ನೊಂದು ಕೇಸಿನಲ್ಲಿ ಒಳಗೊಳಿಸಿರುವ ಬಗ್ಗೆ ಕೆನರಾದ ಮ್ಯಾಜಿಸ್ಟ್ರೇಟನ ಪತ್ರ. ಅವರ ಪೈಕಿ ೮ನೆಯವನ ಹೊರತಾಗಿ ಉಳಿದವರನ್ನು ಬಿಡುಗಡೆಗೊಳಿಸಬಹುದು. ಆತನು ಕೆಟ್ಟ ಪ್ರವೃತ್ತಿಯವನೆಂದು ಫೌಜುದಾರಿ ಅದಾಲತ್ ಮತ್ತು ಮ್ಯಾಜಿಸ್ಟ್ರೇಟನು ಸೂಚಿಸಿರುವುದರಿಂದ ವಿಶೇಷ ನಿಯೋಗದ ವಿಚಾರಣೆಗೆ ಒಪ್ಪಿಸುವಂತೆ ಮ್ಯಾಜಿಸ್ಟ್ರೇಟನು ಬರೆದ ಪತ್ರವನ್ನು ಕಳುಹಿಸಲಾಗಿದೆ.

೫ ಅಗಸ್ಟ್ ೧೮೩೭ : ಮ್ಯಾಜಿಸ್ಟ್ರೇಟನ ಸೂಚನೆಯನ್ನು ಅಂಗೀಕರಿಸಲಾಗಿದೆ ಮತ್ತು ಅವುಗಳ ಮೇಲೆ ಕ್ರಮ ತೆಗೆದುಕೊಳ್ಳಲು ಅನುಮತಿ ನೀಡಲಾಗಿದೆ.

೨೯ ಜುಲೈ ೧೮೩೭ : ಫೌಜುದಾರಿ ಅದಾಲತ್ತಿನ ನಡಾವಳಿಯಿಂದ : ಕೇಸ್ ನಂ. ೧೮ ಕುರಿತು ಮಂಗಳೂರು ವಿಶೇಷ ನಿಯೋಗದ ತೀರ್ಪು ಮತ್ತು ಕೇಸಿನ ಬಗ್ಗೆ ಆಗಿರುವ ಎಲ್ಲಾ ನಡಾವಳಿಯೊಂದಿಗೆ ೧೮೦೨ರ ಸೆಕ್ಷನ್ ೫ ರೆಗ್ಯುಲೇಶನ್ ೨೦ರ ಪ್ರಕಾರ ಸರಕಾರದ ಅಪ್ಪಣೆಗೆ ಕಳುಹಿಸಿಕೊಡಲಾಗಿದೆ.

೮ ಅಗಸ್ಟ್ ೧೮೩೭ : ಫೌಜುದಾರಿ ಅದಾಲತ್‌ನ ತೀರ್ಪನ್ನು ಒಪ್ಪಿಕೊಳ್ಳಲಾಗಿದೆ ಮತ್ತು ಕಾರ್ಯಗತಗೊಳಿಸಲು ಅಪ್ಪಣೆ ನೀಡಲಾಗಿದೆ.

೩೧ ಜುಲೈ ೧೮೩೭ : ಫೌಜುದಾರಿ ಅದಾಲತ್ ನಡಾವಳಿ : ಕೇಸ್ ನಂ. ೧೮, ೨೪, ೧೭ ಇವುಗಳನ್ನು ಮಂಗಳೂರಿನ ವಿಶೇಷ ನಿಯೋಗದ ತೀರ್ಪು ಮತ್ತು ನಡಾವಳಿಯೊಂದಿಗೆ ಸರಕಾರದ ಅಪ್ಪಣೆಗೆ ಕಳುಹಿಸಲಾಗಿದೆ.

೧೦ ಅಗಸ್ಟ್ ೧೮೩೭ : ಲೆ| ಕ| ಬಿ. ಎಂ. ಮಾಸ್ಟರ್, ಕಮಾಂಡಿಂಗ್ ಬ್ರಿಗೇಡಿಯರ್‌ನಿಂದ : ಬಂಡಾಯುಗಾರ ಮುಣೆಯಪ್ಪನೆಂಬ ಖೈದಿ ಮರಣ ಹೊಂದಿದನೆಂದು ವರದಿಯಾಗಿದೆ.

೧೪ ಅಗಸ್ಟ್ ೧೮೩೭ : ಆತ ಯಾರು ಎಂಬುದನ್ನು ದೃಢಪಡಿಸುವ ಸಲುವಾಗಿ ತಿಳಿಸಲಾದ ಖೈದಿಯ ಬಗ್ಗೆ ಹೆಚ್ಚಿನ ವಿವರಗಳನ್ನು ನಿರೀಕ್ಷಿಸಲಾಗಿದೆ.

೫ ಅಗಸ್ಟ್ ೧೮೩೭ : ಕ್ರಿಮಿನಲ್ ಜಡ್ಜನಿಂದ : ಗೂಡೆನ ಎಂಬ ಪ್ರಕ್ರಿಯೆಯು ೨೮೦೨ರ ಸೆಕ್ಷನ್ ೩೫ ರೆಗ್ಯುಲೇಶನ್ ೭ರಲ್ಲಿ ಎಂದು ತಿಳಿಯಪಡಿಸಿರುವ ಸೂಚನೆಗೆ ಸರಿಯಾಗಿರುತ್ತದೆಯೇ? ೨೫ರಂದು ಸರಕಾರದ ಅಪ್ಪಣೆಯಂತೆ ಗಡಿಪಾರು ಮಾಡಲಿರುವ ಖೈದಿಗಳಿಗೆ ಇದು ಅನ್ವಯಿಸುತ್ತದೆಯೇ? ಎಂಬುದನ್ನು ತಿಳಿಸಲು ವಿನಂತಿಸಲಾಗಿದೆ. ಈ ವಿಚಾರದಲ್ಲಿ, ಕಾಣಿಸಿರುವ ಖೈದಿಗಳಿಗೆ ಅನ್ವಯಿಸುತ್ತದೆ ಎಂದು ತಿಳಿಸಲಾಗಿದೆ.

೧ ಅಗಸ್ಟ್ ೧೮೩೭ : ಫೌಜುದಾರಿ ಅದಾಲತ್ ನಡಾವಳಿಯಿಂದ : ಕೇಸು ನಂಬ್ರ ೧೬ನ್ನು ಕಾನೂನು ಪ್ರಕಾರ ಸರಕಾರದ ಅಪ್ಪಣೆಗೆ ಕಳುಹಿಸಲಾಗಿದೆ.

೧೫ ಅಗಸ್ಟ್ ೧೮೩೭ : ಫೌಜುದಾರಿ ಅದಾಲತ್ ನಡಾವಳಿಯಿಂದ : ಕೆನರಾ ಮ್ಯಾಜಿಸ್ಟ್ರೇಟನ ೮ನೇ ಜುಲೈ ೧೮೩೭ರ ಪತ್ರದ ಪ್ಯಾರಾ ೩ರ ನಕಲಿನಲ್ಲಿರುವ ಕೇಸ್ ನಂ. ೧೮ರ ಸಾಕ್ಷಿಯ ಹೇಳಿಕೆಯನ್ನು ಅವಗಾಹನೆಗೆ ಕಳುಹಿಸಲಾಗಿದೆ.

೭ ಅಗಸ್ಟ್ ೧೮೩೭ : ಬ್ರಿ. ಜೆ. ಅಲನ್‌ನಿಂದ : ಖೈದಿ ಮುಂಗೆಣ್ಣನ ಮರಣವನ್ನು ವರದಿ ಮಾಡಲಾಗಿದೆ.

**೧೯ ಅಗಸ್ಟ್ ೧೮೩೭ :** ಫೌಜುದಾರಿ ಅದಾಲತ್ ನಡಾವಳಿಯಿಂದ : ಕೇಸು ನಂಬ್ರ ೧೩ನ್ನು ತೀರ್ಪು ಮತ್ತು ನಡಾವಳಿಯೊಂದಿಗೆ ಸರಕಾರದ ಅಪ್ಪಣೆಗಾಗಿ ಕಳುಹಿಸಲಾಗಿದೆ.

**೨೧ ಅಗಸ್ಟ್ ೧೮೩೭ :** ಫೌಜುದಾರಿ ಅದಾಲತ್ ನಡಾವಳಿಯಿಂದ : ಕೇಸು ನಂಬ್ರ ೧೩ನ್ನು ತೀರ್ಪು ಮತ್ತು ನಡಾವಳಿಯೊಂದಿಗೆ ಸರಕಾರದ ಅಪ್ಪಣೆಗಾಗಿ ಕಳುಹಿಸಲಾಗಿದೆ.

ಕೇಸ್ ನಂಬ್ರ ೧೯ರ ತೀರ್ಪು ಮತ್ತು ನಡಾವಳಿಯೊಂದಿಗೆ ಸರಕಾರದ ಅಪ್ಪಣೆಗೆ ಕಳುಹಿಸಲಾಗಿದೆ.

**೩೧ ಅಗಸ್ಟ್ ೧೮೩೭ :** ತೀರ್ಪು ಒಪ್ಪಿಕೊಂಡು ಕಾರ್ಯಗತಗೊಳಿಸಲು ಅಪ್ಪಣೆ ನೀಡಲಾಗಿದೆ.

**೨೪ ಅಗಸ್ಟ್ ೧೮೩೭ :** ತೀರ್ಪು ಒಪ್ಪಿಕೊಂಡು ಕಾರ್ಯಗತಗೊಳಿಸಲು ಅಪ್ಪಣೆ ನೀಡಲಾಗಿದೆ.

ಕೇಸ್ ನಂಬ್ರ ೨೯ರ ತೀರ್ಪು ಮತ್ತು ನಡಾವಳಿಯೊಂದಿಗೆ ಸರಕಾರದ ಅಪ್ಪಣೆಗೆ ಕಳುಹಿಸಲಾಗಿದೆ.

**೩೧ ಅಗಸ್ಟ್ ೧೮೩೭ :** ತೀರ್ಪನ್ನು ಒಪ್ಪಿ ಕಾರ್ಯಗತಗೊಳಿಸಲು ಅಪ್ಪಣೆ ನೀಡಲಾಗಿದೆ.

**೨೧ ಅಗಸ್ಟ್ ೧೮೩೭ :** ತೀರ್ಪನ್ನು ಒಪ್ಪಿ ಕಾರ್ಯಗತಗೊಳಿಸಲು ಅಪ್ಪಣೆ ನೀಡಲಾಗಿದೆ.

ಕೇಸ್ ನಂಬ್ರ ೧೫ ಮತ್ತು ಕೇಸ್ ನಂಬ್ರ ೨೨ಗಳ ತೀರ್ಪು ಮತ್ತು ನಡಾವಳಿಯೊಂದಿಗೆ ಸರಕಾರದ ಅಪ್ಪಣೆಗೆ ಕಳುಹಿಸಲಾಗಿದೆ.

**೨೨ ಅಗಸ್ಟ್ ೧೮೩೭ :** ಲೆ| ಕ| ಬಿ. ಎಂ. ಮಾಸ್ಟರ್‌ನಿಂದ: ವಿಚಾರಣಾ ಸಂಖ್ಯೆ ೬ರಂತೆ ಸತ್ತಿರುವ ಖೈದಿಯ ಹೆಸರು ವರದಿಯಾಗಿರುವಂತೆ ಮುಂಗೆಣ್ಣ ಅಲ್ಲ ಬದಲಾಗಿ ಮುನೆಯಪ್ಪ ಎಂಬುದಾಗಿ ಹೇಳಲಾಗಿದೆ.

**೧೦ ಅಗಸ್ಟ್ ೧೮೩೭ :** ಮ್ಯಾಜಿಸ್ಟ್ರೇಟನಿಂದ : ದಿನಾಂಕ ೫ರಿಂದ ರಾಜ್ಯದ ಖೈದಿಗಳಾಗಿ ತನ್ನ ಸ್ವಾಧೀನಕ್ಕೆ ಬಂದಿರುವವರನ್ನು ಮುಂದಿನ ಕಾರ್ಯಾಚರಣೆಗೆ ತೆಗೆದುಕೊಳ್ಳುವ ದೃಷ್ಟಿಯಿಂದ ಹೊರತುಗೊಳಿಸಬೇಕೆಂಬ ವರದಿಯನ್ನು ಅರ್ಪಿಸಲಾಗಿದೆ. ಇಲ್ಲದಿದ್ದರೆ ಈ ಕಾರ್ಯವು ಕೊನೆಯಿಲ್ಲದ್ದಾಗುತ್ತದೆಂದು ತಿಳಿಯಪಡಿಸಲಾಗಿದೆ.

**೮ ಸೆಪ್ಟೆಂಬರ್ ೧೮೩೭ :** ಮೇಲ್ಕಾಣಿಸಿದ ಪತ್ರದಲ್ಲಿ ಹೇಳಿರುವುದರ ಬಗ್ಗೆ ಫೌಜುದಾರಿ ಅದಾಲತ್ ತನ್ನ ಅನುಕಂಪವನ್ನು ವ್ಯಕ್ತಪಡಿಸಿದೆ. ಮಂಗಳೂರು ವಿಶೇಷ ನಿಯೋಗದ ವಿಚಾರಣೆಗಾಗಿ ಕಾಯುತ್ತಿರುವ ಕೆನರಾದ ಬಂಡುಕೋರ ಖೈದಿಗಳ ಬಗ್ಗೆ ಸರಕಾರ

ಜೂನ್ ೨೩ರಂದು ಕೇಳಿರುವ ಮಾಹಿತಿಯನ್ನು ತ್ವರಿತವಾಗಿ ಸಿದ್ಧಗೊಳಿಸಲು ಸೂಚಿಸಲಾಗಿದೆ.

೨೯ ಅಗಸ್ಟ್ ೧೮೩೭ : ಫೌಜುದಾರಿ ಅದಾಲತ್ ನಡಾವಳಿಯಿಂದ : ಕೇಸ್ ನಂಬ್ರ ೩೩, ೩೪, ೨೬, ೨೭, ೩೧, ೨೫ ಇವುಗಳ ತೀರ್ಪು ಮತ್ತು ನಡಾವಳಿಯೊಂದಿಗೆ ಸರಕಾರದ ಅಪ್ಪಣೆಗೆ ಕಳುಹಿಸಲಾಗಿದೆ.

೨೪ ಅಗಸ್ಟ್ ೧೮೩೭ : ಮ್ಯಾಜಿಸ್ಟ್ರೇಟನಿಂದ : ಮಂಗಳೂರು ವಿಶೇಷ ನಿಯೋಗದಲ್ಲಿ ವಿಚಾರಣೆಯಾಗಿ ತೀರ್ಪು ಕೊಡಲ್ಪಟ್ಟ ಪ್ರಕರಣಗಳ ಪಟ್ಟಿಯನ್ನು ಕಳುಹಿಸುವಂತೆ ವಿನಂತಿಸಲಾಗಿದೆ.

೧೧ ಸೆಪ್ಟೆಂಬರ್ ೧೮೩೭ : ಫೌಜುದಾರಿ ಅದಾಲತ್ ಮೇಲ್ಕಾಣಿಸಿದ ಪತ್ರದಲ್ಲಿರುವುದು ಕೊಡುವಂತೆ ವಿಶೇಷ ನಿಯೋಗವನ್ನು ವಿನಂತಿಸಿತು.

೯ ಸೆಪ್ಟೆಂಬರ್ ೧೮೩೭ : ಫೌಜುದಾರಿ ಅದಾಲತ್ ರಿಜಿಸ್ಟ್ರರ್‌ನಿಂದ : ಕೆನರಾದ ಕ್ರಿಮಿನಲ್ ಜಡ್ಜ್‌ನ ಪತ್ರದ ಪ್ರತಿಯನ್ನು ಕಳುಹಿಸಲಾಗಿದೆ. ಇದು ಬಂಡಾಯ ಕಾಲದಲ್ಲಿ ಹಾಳಾದ ಮನೆಗಳನ್ನು ದುರಸ್ತಿ ಮಾಡಲು ಕೆಲವು ಖೈದಿಗಳನ್ನು ಬಳಸಿಕೊಳ್ಳಲು ಅನುಮತಿ ನೀಡುತ್ತದೆ.

೧೮ ಸೆಪ್ಟೆಂಬರ್ ೧೮೩೭ : ಹೊಣೆಯನ್ನು ನೀಡಲಾಗಿದೆ.

೧೮, ೧೯ ಸೆಪ್ಟೆಂಬರ್ ೧೮೩೭ : ಕೇಸ್ ನಂಬ್ರ ೧೦ ಮತ್ತು ೨೦

ಇವುಗಳ ಬಗ್ಗೆ ಮಂಗಳೂರು ವಿಶೇಷ ನಿಯೋಗ ನೀಡಿದ ತೀರ್ಪು ಮತ್ತು ನಡಾವಳಿಗಳನ್ನು ಸರಕಾರದ ಅಪ್ಪಣೆಗಾಗಿ ಕಳುಹಿಸಲಾಯಿತು.

೨ ಅಕ್ಟೋಬರ್ ೧೮೩೭ : ಕೇಸ್ ನಂಬ್ರ ४೧ ಮತ್ತು ४೩

ಇವುಗಳ ಬಗ್ಗೆ ಮಂಗಳೂರು ವಿಶೇಷ ನಿಯೋಗ ನೀಡಿದ ತೀರ್ಪು ಮತ್ತು ನಡಾವಳಿಗಳನ್ನು ಸರಕಾರದ ಅಪ್ಪಣೆಗಾಗಿ ಕಳುಹಿಸಲಾಯಿತು.

೨೭ ಸೆಪ್ಟೆಂಬರ್ ೧೮೩೭ : ಕೇಸ್ ನಂಬ್ರ ೪೫

ಇವುಗಳ ಬಗ್ಗೆ ಮಂಗಳೂರು ವಿಶೇಷ ನಿಯೋಗ ನೀಡಿದ ತೀರ್ಪು ಮತ್ತು ನಡಾವಳಿಗಳನ್ನು ಸರಕಾರದ ಅಪ್ಪಣೆಗಾಗಿ ಕಳುಹಿಸಲಾಯಿತು.

೨೮ ಸೆಪ್ಟೆಂಬರ್ ೧೮೩೭ : ಕೇಸ್ ನಂಬ್ರ ೩೦, ೩೫, ೬೬ ಮತ್ತು ೫೭

ಇವುಗಳ ಬಗ್ಗೆ ಮಂಗಳೂರು ವಿಶೇಷ ನಿಯೋಗ ನೀಡಿದ ತೀರ್ಪು ಮತ್ತು ನಡಾವಳಿಗಳನ್ನು ಸರಕಾರದ ಅಪ್ಪಣೆಗಾಗಿ ಕಳುಹಿಸಲಾಯಿತು.

೪ ಅಕ್ಟೋಬರ್ ೧೮೩೭ : ಕೇಸ್ ನಂಬ್ರ ೨೮
ಇವುಗಳ ಬಗ್ಗೆ ಮಂಗಳೂರು ವಿಶೇಷ ನಿಯೋಗ ನೀಡಿದ ತೀರ್ಪು ಮತ್ತು ನಡಾವಳಿಗಳನ್ನು ಸರಕಾರದ ಅಪ್ಪಣೆಗಾಗಿ ಕಳುಹಿಸಲಾಯಿತು.

೫ ಅಕ್ಟೋಬರ್ ೧೮೩೭ : ಕೇಸ್ ನಂಬ್ರ ೩೨ ಮತ್ತು ೩೬
ಇವುಗಳ ಬಗ್ಗೆ ಮಂಗಳೂರು ವಿಶೇಷ ನಿಯೋಗ ನೀಡಿದ ತೀರ್ಪು ಮತ್ತು ನಡಾವಳಿಗಳನ್ನು ಸರಕಾರದ ಅಪ್ಪಣೆಗಾಗಿ ಕಳುಹಿಸಲಾಯಿತು.

೧೬ ಅಕ್ಟೋಬರ್ ೧೮೩೭: ಫೌಜುದಾರಿ ಅದಾಲತ್ ರಿಜಿಸ್ಟರ್‌ನಿಂದ : ೨ ಅಕ್ಟೋಬರ್ ೧೮೩೭ರ ಫೌಜುದಾರಿ ಅದಾಲತ್ತಿನ ನಡಾವಳಿ ನಕಲು ನಂಬ್ರ ೩೦೫ಕ್ಕೆ ಸಂಬಂಧಿಸಿದಂತೆ ಒಂದು ವರದಿ ಸಲ್ಲಿಸಲಾಗಿದೆ. ಮಂಗಳೂರು ವಿಶೇಷ ನಿಯೋಗಕ್ಕೆ ಕೇಸ್ ನಂಬ್ರ ೪೧ರ ತೀರ್ಪನ್ನು ಕಳುಹಿಸಲಾಗಿದೆ.

೨೭ ಸೆಪ್ಟೆಂಬರ್ ೧೮೩೭ : ಮ್ಯಾಜಿಸ್ಟ್ರೇಟನಿಂದ : ಅನುಭವಸ್ಥ ಅಧಿಕಾರಿಗಳಿಂದ ತನ್ನ ಸ್ವಾಧೀನದಲ್ಲಿರುವ ಬಂಡುಕೋರ ಖೈದಿಗಳನ್ನು ವಿಚಾರಿಸಲು ಜವಾಬ್ದಾರಿ ಕೊಡುವಂತೆ ಸರಕಾರದ ಪರವಾಗಿ ವಿನಂತಿಸಿಕೊಳ್ಳಲಾಗಿದೆ.

೧೩ ಅಕ್ಟೋಬರ್ ೧೮೩೭ : ಮಂಗಳೂರಲ್ಲಿ ವಿಚಾರಣೆ ನಿಧಾನವಾಗುತ್ತಿರುವುದರ ಪರಿಣಾಮ ಮತ್ತು ಅದರಿಂದ ಉಂಟಾಗುವ ತೊಂದರೆಗಳನ್ನು ತಿಳಿಸಲಾಗಿದೆ. ಚಿಕ್ಕ ಕೇಸುಗಳ ವಿಲೇವಾರಿಯನ್ನು ಮದ್ರಾಸಲ್ಲಿ ಮುಗಿಸಬಹುದು. ಸರಕಾರದ ಪರವಾಗಿ ಶಿಕ್ಷೆಯನ್ನು ಮುಗಿಸುವ ಮತ್ತು ಅಪರಾಧ ದೊಡ್ಡದಲ್ಲದ ಪಕ್ಷದಲ್ಲಿ ಮನ್ನಿಸುವ ಅಧಿಕಾರವನ್ನು ನಿಯೋಗಕ್ಕೆ ಕೊಡುವುದಾಗಿ ಸೂಚಿಸಲಾಗಿದೆ.

೨೧ ಅಕ್ಟೋಬರ್ ೧೮೩೭: ಕೆನರಾದ ಮ್ಯಾಜಿಸ್ಟ್ರೇಟನ ಪತ್ರದ ನಕಲನ್ನು ಸರಕಾರದ ಅಪ್ಪಣೆಗೆ ಕಳುಹಿಸಲಾಗಿದೆ. ವಿಚಾರಣೆಗೆ ಒಳಗಾಗಿ ಬಂಧನದಲ್ಲಿರುವ ಖೈದಿಗಳ ಬಗ್ಗೆ ಮಂಗಳೂರು ವಿಶೇಷ ನಿಯೋಗದ ತಾ. ೨೩ ಜೂನ್ ೧೮೩೭ರ ಪ್ಯಾರಾ ೨ ತಾ. ೮ರ ನಿರ್ಣಯಗಳ ಪ್ರತಿಗಳನ್ನು ಲಗತ್ತಿಸಿದೆ.

೧೬ ಅಕ್ಟೋಬರ್ ೧೮೩೭ : ಫೌಜುದಾರಿ ಅದಾಲತ್ತಿನ ನಡಾವಳಿಯಿಂದ : ಫೌಜುದಾರಿ ಅದಾಲತ್ತಿನ ಕೇಸ್ ನಂ. ೫೪ ಮತ್ತು ಮಂಗಳೂರು ವಿಶೇಷ ನಿಯೋಗದ ನಡಾವಳಿಯ ತೀರ್ಪುಗಳೊಂದಿಗೆ ಸರಕಾರದ ಅಪ್ಪಣೆಗೆ ಕಳುಹಿಸಲಾಗಿದೆ.

ಫೌಜುದಾರಿ ಅದಾಲತ್ತಿನ ಈ ಕೇಸನ್ನು ಒಪ್ಪಿ ಕಾರ್ಯಗತಗೊಳಿಸಲು ಆಜ್ಞಾಪಿಸಿದೆ.

೨೦ ಅಕ್ಟೋಬರ್ ೧೮೩೭ : ಫೌಜುದಾರಿ ಅದಾಲತ್ತಿನ ನಡಾವಳಿಯಿಂದ ಆಯ್ದದ್ದು.
೨೦ ಅಕ್ಟೋಬರ್ ೧೮೩೭ : ಕೇಸ್ ನಂ. ೩೮

೧೮೦೨ರ ಸೆಕ್ಷನ್ ೫ ರೆಗ್ಯುಲೇಶನ್ ೨೦ರ ಪ್ರಕಾರ ಸರಕಾರದ ಅಪ್ಪಣೆಗೆ ಕಳುಹಿಸಿ ಕೊಡಲಾಗಿದೆ.

೨೧ ಅಕ್ಟೋಬರ್ ೧೮೩೭ : ಕೇಸ್ ನಂ. ೩೯

೧೮೦೨ರ ಸೆಕ್ಷನ್ ೫ ರೆಗ್ಯುಲೇಶನ್ ೨೦ರ ಪ್ರಕಾರ ಸರಕಾರದ ಅಪ್ಪಣೆಗೆ ಕಳುಹಿಸಿ ಕೊಡಲಾಗಿದೆ.

೨೧ ಅಕ್ಟೋಬರ್ ೧೮೩೭ : ಕೇಸ್ ನಂ. ೫೫

೧೮೦೨ರ ಸೆಕ್ಷನ್ ೫ ರೆಗ್ಯುಲೇಶನ್ ೨೦ರ ಪ್ರಕಾರ ಸರಕಾರದ ಅಪ್ಪಣೆಗೆ ಕಳುಹಿಸಿ ಕೊಡಲಾಗಿದೆ.

೨೩ ಅಕ್ಟೋಬರ್ ೧೮೩೭ : ಕೇಸ್ ನಂ. ೧೪

೧೮೦೨ರ ಸೆಕ್ಷನ್ ೫ ರೆಗ್ಯುಲೇಶನ್ ೨೦ರ ಪ್ರಕಾರ ಸರಕಾರದ ಅಪ್ಪಣೆಗೆ ಕಳುಹಿಸಿ ಕೊಡಲಾಗಿದೆ.

**೨೩ ಅಕ್ಟೋಬರ್ ೧೮೩೭:** ಫೌಜುದಾರಿ ಅದಾಲತ್ತಿನ ರಿಜಿಸ್ಟರ್‌ನಿಂದ : ಕೆನರಾದ ಮ್ಯಾಜಿಸ್ಟ್ರೇಟನ ತಾ. ೧೨ರ ಪತ್ರದ ನಕಲಿನೊಂದಿಗೆ ಮೂಲಪ್ರತಿಯನ್ನೂ, ಅದರೊಂದಿಗೆ ಜಿಲ್ಲೆಯಲ್ಲಾದ ಬಂಡಾಯದಲ್ಲಿ ಭಾಗಿಗಳಾಗಿದ್ದಾರೆಂಬ ಸಂಶಯಕ್ಕೆ ಒಳಗಾದ ವ್ಯಕ್ತಿಗಳ ವಿಲೇವಾರಿ ಬಗ್ಗೆ ಅಪ್ಪಣೆಯನ್ನು ವಿನಂತಿಸಿಕೊಳ್ಳಲಾಗಿದೆ.

**೨೩ ಅಕ್ಟೋಬರ್ ೧೮೩೭:** ರಾಜಕೀಯ ಇಲಾಖೆಯೊಂದಿಗೆ ಅವಶ್ಯ ಕಂಡಲ್ಲಿ ವ್ಯವಹರಿಸುವುದು. ಈ ಹಿಂದೆ ಕೆನರಾದಲ್ಲಿ ಬಂಡಾಯ ಕಾಣಿಸಿಕೊಂಡದಕ್ಕೆ ಕಾರಣ ಕಂಡುಹಿಡಿಯಲು ನಿಯೋಗವನ್ನು ನೇಮಿಸಲಾಗಿದೆ ಮತ್ತು ಮಿ. ಲೆವಿನ್ ಹೇಳಿಕೆಯಲ್ಲಿ ತನ್ನೊಂದಿಗೆ ಒಬ್ಬನೂ ಯುರೋಪಿಯನ್ ಸಹಾಯಕ ಈ ಸಮಯದಲ್ಲಿ ಇಲ್ಲ ಎಂದಿರುವುದನ್ನು ಗ್ರಹಿಸಿಕೊಂಡು ದಾಖಲಿಸಲಾಗಿದೆ.

**೨೧ ಅಕ್ಟೋಬರ್ ೧೮೩೭ :** ಮ್ಯಾಜಿಸ್ಟ್ರೇಟರನಿಂದ : ಮಂಗಳೂರಿನ ವಿಶೇಷ ನಿಯೋಗದ ಕೂಲಿಯವರನ್ನು ಉಪಯೋಗಿಸಿಕೊಳ್ಳುವುದು ಮತ್ತು ಸರಕಾರದ ಸಹಾಯವನ್ನು ಆದಷ್ಟು ಬೇಗನೆ ಅಂತ್ಯಗೊಳಿಸುವುದು.

**೨೧ ಅಕ್ಟೋಬರ್ ೧೮೩೭ :** ತಾ. ೨೪ರಂದು ಫೌಜುದಾರಿ ಅದಾಲತ್ತಿಗೆ ಮಿ. ಲೆವಿನನು ಕಳುಹಿಸಿದ ಅಪ್ಪಣೆಯ ಬಗ್ಗೆ ಕೂಡಲೇ ಗಮನ ಕೊಡುವಂತೆ ಅಪೇಕ್ಷಿಸಲಾಗಿದೆ. ಮಂಗಳೂರು ಜೈಲಿನಿಂದ ವಿಶೇಷ ನಿಯೋಗಕ್ಕೆ ಕೂಲಿಗಳನ್ನು ತರಿಸಿಕೊಳ್ಳುವುದನ್ನು ತಕ್ಷಣ ನಿಲ್ಲಿಸುವುದು ಮತ್ತು ಸರಕಾರದೊಂದಿಗೆ ವ್ಯವಹರಿಸುವುದು. ಫೌಜುದಾರಿ ಅದಾಲತ್ತಿನ ಮೂಲಕವೇ ವಿಶೇಷ ನಿಯೋಗವು ಇನ್ನು ಮುಂದೆ ವ್ಯವಹರಿಸಬೇಕು.

೬ ನವಂಬರ್ ೧೮೩೭ - ಫೌಜುದಾರಿ ಅದಾಲತ್ತಿನ ನಡಾವಳಿಯಿಂದ ಆಯ್ದುದ್ದು.

೬ ನವಂಬರ್ ೧೮೩೭ - ಕೇಸ್ ನಂಬ್ರ ೪೦
೧೮೦೨ರ ಸೆಕ್ಷನ್ ೫ ರೆಗ್ಯುಲೇಶನ್ ೨೦ರ ಪ್ರಕಾರ ಸರಕಾರದ ಅಪ್ಪಣೆಗೆ ಕಳುಹಿಸಲಾಗಿದೆ.

೬ ನವಂಬರ್ ೧೮೩೭ - ಕೇಸ್ ನಂಬ್ರ ೮೮
೧೮೦೨ರ ಸೆಕ್ಷನ್ ೫ ರೆಗ್ಯುಲೇಶನ್ ೨೦ರ ಪ್ರಕಾರ ಸರಕಾರದ ಅಪ್ಪಣೆಗೆ ಕಳುಹಿಸಲಾಗಿದೆ.

೨೫ ಅಕ್ಟೋಬರ್ ೧೮೩೭ - ಕೇಸ್ ನಂಬ್ರ ೩೭
೧೮೦೨ರ ಸೆಕ್ಷನ್ ೫ ರೆಗ್ಯುಲೇಶನ್ ೨೦ರ ಪ್ರಕಾರ ಸರಕಾರದ ಅಪ್ಪಣೆಗೆ ಕಳುಹಿಸಲಾಗಿದೆ.

೨೬ ಅಕ್ಟೋಬರ್ ೧೮೩೭ - ಕೇಸ್ ನಂಬ್ರ ೫೮
೧೮೦೨ರ ಸೆಕ್ಷನ್ ೫ ರೆಗ್ಯುಲೇಶನ್ ೨೦ರ ಪ್ರಕಾರ ಸರಕಾರದ ಅಪ್ಪಣೆಗೆ ಕಳುಹಿಸಲಾಗಿದೆ.

೩೦ ಅಕ್ಟೋಬರ್ ೧೮೩೭ - ಕೇಸ್ ನಂಬ್ರ ೬೮
೧೮೦೨ರ ಸೆಕ್ಷನ್ ೫ ರೆಗ್ಯುಲೇಶನ್ ೨೦ರ ಪ್ರಕಾರ ಸರಕಾರದ ಅಪ್ಪಣೆಗೆ ಕಳುಹಿಸಲಾಗಿದೆ.

೩೧ ಅಕ್ಟೋಬರ್ ೧೮೩೭ - ಕೇಸ್ ನಂಬ್ರ ೫೨
೧೮೦೨ರ ಸೆಕ್ಷನ್ ೫ ರೆಗ್ಯುಲೇಶನ್ ೨೦ರ ಪ್ರಕಾರ ಸರಕಾರದ ಅಪ್ಪಣೆಗೆ ಕಳುಹಿಸಲಾಗಿದೆ.

೩೧ ಅಕ್ಟೋಬರ್ ೧೮೩೭ - ಕೇಸ್ ನಂಬ್ರ ೨೩
೧೮೦೨ರ ಸೆಕ್ಷನ್ ೫ ರೆಗ್ಯುಲೇಶನ್ ೨೦ರ ಪ್ರಕಾರ ಸರಕಾರದ ಅಪ್ಪಣೆಗೆ ಕಳುಹಿಸಲಾಗಿದೆ.

೬ ನವಂಬರ್ ೧೮೩೭ : ಫೌಜುದಾರಿ ಅದಾಲತ್ತಿನ ಹಿರಿಯ ಉಪ ರಿಜಿಸ್ಟ್ರಾರ್‌ನಿಂದ: ಮಂಗಳೂರು ವಿಶೇಷ ನಿಯೋಗ ಕೇಸ್ ೫೪ ಪುಟ್ಟಯ್ಯನೆಂಬ ಖೈದಿ ನಂಬ್ರ ೧ ಮರಣ ಹೊಂದಿರುವುದು ವರದಿ ಮಾಡಲಾಗಿದೆ.

೭ ನವಂಬರ್ ೧೮೩೭: ಫೌಜುದಾರಿ ಅದಾಲತ್ತಿನ ಹಿರಿಯ ಉಪ ರಿಜಿಸ್ಟ್ರಾರ್‌ನಿಂದ:

ಮಂಗಳೂರು ವಿಶೇಷ ನಿಯೋಗದ ಕೇಸ್ ನಂಬ್ರ ೫೨ ಖೈದಿ ನಂಬ್ರ ೩ ಬಂಗಾರಿ ಎಂಬಾತನು ಮರಣ ಹೊಂದಿದ್ದಾಗಿ ವರದಿ ಮಾಡಲಾಗಿದೆ.

೧೩ ನವಂಬರ್ ೧೮೩೭ : ಫೌಜುದಾರಿ ಅದಾಲತ್ತಿನ ರಿಜಿಸ್ಟರ್‌ನಿಂದ : ಮಂಗಳೂರು ವಿಶೇಷ ನಿಯೋಗವು ಬಹಳಷ್ಟು ಕೇಸುಗಳಲ್ಲಿ ಬಂಡಾಯದ ಖೈದಿಗಳ ವಿರುದ್ಧ ಜಾರಿಗೊಳಿಸಿದ ತೀರ್ಪುಗಳನ್ನು ವಿನಾಯಿತಿಗೊಳಿಸುವ ಸಲಹೆ ಪತ್ರದ ಪ್ರತಿಯನ್ನು ಕಳುಹಿಸಲಾಗಿದೆ.

೩೧ ಅಕ್ಟೋಬರ್ ೧೮೩೭ : ಮ್ಯಾಜಿಸ್ಟ್ರೇಟನಿಂದ: ಸರಕಾರವು ಕೇಳಿರುವ ಪ್ರಕಾರ ಖೈದಿಗಳ ತಖ್ತೆ ಸಲ್ಲಿಸುವಲ್ಲಿ ಮತ್ತು ರಿಂಗ್ ಲೀಡರ್ ರಾಮ ಗೌಡನನ್ನು ವಿಚಾರಣೆಗೆ ತರುವಲ್ಲಿ ತಡವಾಗುತ್ತಿರುವ ಕಾರಣವನ್ನು ವಿವರಿಸಲಾಗಿದೆ ಹಾಗೂ ವಿಶೇಷ ನಿಯೋಗ ವಿಚಾರಿಸಲು ಬಿಟ್ಟಿರುವ ಎಲ್ಲಾ ಕೇಸುಗಳನ್ನು ಹಿಂತೆಗೆದುಕೊಳ್ಳಬೇಕೇ? ಈವರೆಗೆ ಕಳುಹಿಸಲ್ಪಡದಿರುವ ಖೈದಿಗಳನ್ನು ತಖ್ತೆಗೆ ಸೇರಿಸಬೇಕೇ? ಎಂಬ ವಿವರ ಕೇಳಲಾಗಿದೆ.

೬ ನವಂಬರ್ ೧೮೩೭ : ಮ್ಯಾಜಿಸ್ಟ್ರೇಟನಿಂದ : ಸರಕಾರವು ಕೇಳಿದ ತಖ್ತೆಯಲ್ಲಿ ವಿಶೇಷ ನಿಯೋಗ ವಿಚಾರಣೆಗೆ ತೆಗೆದುಕೊಳ್ಳದ ಕೇಸುಗಳನ್ನು ೩೧ರ ಆತನ ಪತ್ರದಲ್ಲಿ ತಿಳಿಸಿರುವುದನ್ನು ಹೇಳುತ್ತಾ ಐದು ಕೇಸುಗಳನ್ನು ಪೂರ್ಣವಾಗಿ ಅಥವಾ ಅಪೂರ್ಣವಾಗಿ ಹಿಂತೆಗೆದುಕೊಳ್ಳಲಾಗಿದೆ.

೭ ನವಂಬರ್ ೧೮೩೭ : ಕೇಸ್ ನಂಬ್ರ ೬೧, ೬೬ ಮತ್ತು ೭೯
೧೮೦೨ರ ಸೆಕ್ಷನ್ ೫ ರೆಗ್ಯುಲೇಶನ್ ೨೦ರ ಪ್ರಕಾರ ಸರಕಾರದ ಅಪ್ಪಣೆಗೆ ಕಳುಹಿಸಲಾಗಿದೆ.

೮ ನವಂಬರ್ ೧೮೩೭ : ಕೇಸ್ ನಂಬ್ರ ೪೪, ೬೪, ೭೦ ಮತ್ತು ೮೬
೧೮೦೨ರ ಸೆಕ್ಷನ್ ೫ ರೆಗ್ಯುಲೇಶನ್ ೨೦ರ ಪ್ರಕಾರ ಸರಕಾರದ ಅಪ್ಪಣೆಗೆ ಕಳುಹಿಸಲಾಗಿದೆ.

೯ ನವಂಬರ್ ೧೮೩೭ : ಕೇಸ್ ನಂಬ್ರ ೬೦
೧೮೦೨ರ ಸೆಕ್ಷನ್ ೫ ರೆಗ್ಯುಲೇಶನ್ ೨೦ರ ಪ್ರಕಾರ ಸರಕಾರದ ಅಪ್ಪಣೆಗೆ ಕಳುಹಿಸಲಾಗಿದೆ.

೧೦ ನವಂಬರ್ ೧೮೩೭ : ಕೇಸ್ ನಂಬ್ರ ೬೫
೧೮೦೨ರ ಸೆಕ್ಷನ್ ೫ ರೆಗ್ಯುಲೇಶನ್ ೨೦ರ ಪ್ರಕಾರ ಸರಕಾರದ ಅಪ್ಪಣೆಗೆ ಕಳುಹಿಸಲಾಗಿದೆ.

೧೩ ನವಂಬರ್ ೧೮೩೭ : ಕೇಸ್ ನಂಬ್ರ ೬೩ ಮತ್ತು ೬೭
೧೮೦೨ರ ಸೆಕ್ಷನ್ ೫ ರೆಗ್ಯುಲೇಶನ್ ೨೦ರ ಪ್ರಕಾರ ಸರಕಾರದ ಅಪ್ಪಣೆಗೆ ಕಳುಹಿಸಲಾಗಿದೆ.

೧೮ ನವಂಬರ್ ೧೮೩೭ - ಫೌಜುದಾರಿ ಅದಾಲತ್ ರಿಜಿಸ್ಟರ್‌ನಿಂದ : ಮಂಗಳೂರು ವಿಶೇಷ ನಿಯೋಗದ ಕೇಸ್ ನಂಬ್ರ ೭೦ರ ಖೈದಿ ನಂ. ೨ ಮರಣ ಹೊಂದಿರುವುದಾಗಿ ವರದಿಯಾಗಿದೆ.

೧೪ ನವಂಬರ್ ೧೮೩೭ - ಫೌಜುದಾರಿ ಅದಾಲತ್ ನಡಾವಳಿಯಿಂದ
೧೮೦೨ರ ಸೆಕ್ಷನ್ ೫ ರೆಗ್ಯುಲೇಶನ್ ೨೦ರ ಪ್ರಕಾರ ಸರಕಾರದ ಅಪ್ಪಣೆಗೆ ಕಳುಹಿಸಲಾಗಿದೆ.

೧೪ ನವಂಬರ್ ೧೮೨೭ - ಕೇಸ್ ನಂಬ್ರ ೬೨, ೮೦ ಮತ್ತು ೮೯
೧೮೦೨ರ ಸೆಕ್ಷನ್ ೫ ರೆಗ್ಯುಲೇಶನ್ ೨೦ರ ಪ್ರಕಾರ ಸರಕಾರದ ಅಪ್ಪಣೆಗೆ ಕಳುಹಿಸಲಾಗಿದೆ.

೧೭ ನವಂಬರ್ ೧೮೩೭ - ಕೇಸ್ ನಂಬ್ರ ೭೬
೧೮೦೨ರ ಸೆಕ್ಷನ್ ೫ ರೆಗ್ಯುಲೇಶನ್ ೨೦ರ ಪ್ರಕಾರ ಸರಕಾರದ ಅಪ್ಪಣೆಗೆ ಕಳುಹಿಸಲಾಗಿದೆ.

೨೦ ನವಂಬರ್ ೧೮೩೭ - ಕೇಸ್ ನಂಬ್ರ ೭೪ ಮತ್ತು ೯೭
೧೮೦೨ರ ಸೆಕ್ಷನ್ ೫ ರೆಗ್ಯುಲೇಶನ್ ೨೦ರ ಪ್ರಕಾರ ಸರಕಾರದ ಅಪ್ಪಣೆಗೆ ಕಳುಹಿಸಲಾಗಿದೆ.

೨೧ ನವಂಬರ್ ೧೮೩೭ - ಕೇಸ್ ನಂಬ್ರ ೭೫
೧೮೦೨ರ ಸೆಕ್ಷನ್ ೫ ರೆಗ್ಯುಲೇಶನ್ ೨೦ರ ಪ್ರಕಾರ ಸರಕಾರದ ಅಪ್ಪಣೆಗೆ ಕಳುಹಿಸಲಾಗಿದೆ.

೨೩ ನವಂಬರ್ ೧೮೩೭ - ಕೇಸ್ ನಂಬ್ರ ೯೪
೧೮೦೨ರ ಸೆಕ್ಷನ್ ೫ ರೆಗ್ಯುಲೇಶನ್ ೨೦ರ ಪ್ರಕಾರ ಸರಕಾರದ ಅಪ್ಪಣೆಗೆ ಕಳುಹಿಸಲಾಗಿದೆ.

೨೪ ನವಂಬರ್ ೧೮೩೭ - ಕೇಸ್ ನಂಬ್ರ ೭೧ ಮತ್ತು ೭೨
೧೮೦೨ರ ಸೆಕ್ಷನ್ ೫ ರೆಗ್ಯುಲೇಶನ್ ೨೦ರ ಪ್ರಕಾರ ಸರಕಾರದ ಅಪ್ಪಣೆಗೆ ಕಳುಹಿಸಲಾಗಿದೆ.

೨೪ ನವಂಬರ್ ೧೮೩೭ - ಕೇಸ್ ನಂಬ್ರ ೭೭
೧೮೦೨ರ ಸೆಕ್ಷನ್ ೫ ರೆಗ್ಯುಲೇಶನ್ ೨೦ರ ಪ್ರಕಾರ ಸರಕಾರದ ಅಪ್ಪಣೆಗೆ ಕಳುಹಿಸಲಾಗಿದೆ.

೨೫ ನವಂಬರ್ ೧೮೩೭ - ಕೇಸ್ ನಂಬ್ರ ೮೫ ಮತ್ತು ೯೧

೧೮೦೨ರ ಸೆಕ್ಷನ್ ೫ ರೆಗ್ಯುಲೇಶನ್ ೨೦ರ ಪ್ರಕಾರ ಸರಕಾರದ ಅಪ್ಪಣೆಗೆ ಕಳುಹಿಸಲಾಗಿದೆ.

೨೭ ನವಂಬರ್ ೧೮೩೭ - ಕೇಸ್ ನಂಬ್ರ ೮೧ ಮತ್ತು ೮೭

೧೮೦೨ರ ಸೆಕ್ಷನ್ ೫ ರೆಗ್ಯುಲೇಶನ್ ೨೦ರ ಪ್ರಕಾರ ಸರಕಾರದ ಅಪ್ಪಣೆಗೆ ಕಳುಹಿಸಲಾಗಿದೆ.

೪ ನವಂಬರ್ ೧೮೩೭ - ಕೇಸ್ ನಂಬ್ರ ೯೯

೧೮೦೨ರ ಸೆಕ್ಷನ್ ೫ ರೆಗ್ಯುಲೇಶನ್ ೨೦ರ ಪ್ರಕಾರ ಸರಕಾರದ ಅಪ್ಪಣೆಗೆ ಕಳುಹಿಸಲಾಗಿದೆ.

೪ ಡಿಸೆಂಬರ್ ೧೮೩೭: ೨ನೇ ಖೈದಿಯ ೨ ವರ್ಷಗಳ ಕಠಿಣ ಶಿಕ್ಷೆಯನ್ನು ೬ ತಿಂಗಳಿಗೆ ಇಳಿಸಲಾಗಿದೆ ಮತ್ತು ಫೌಜುದಾರಿ ಅದಾಲತ್ತು ಸಲಹೆ ಮೇರೆಗೆ ಒಂದನೇ ಖೈದಿ ಅಣ್ಣಪ್ಪನನ್ನು ತಕ್ಷಣ ಬಿಡುಗಡೆಗೊಳಿಸುವಂತೆ ಅಪ್ಪಣೆ ನೀಡಲಾಗಿದೆ.

೪ ಡಿಸೆಂಬರ್ ೧೮೩೭: ಫೌಜುದಾರಿ ಅದಾಲತ್ ಕೇಸ್ ನಂ. ೯೩ ಮತ್ತು ಮಂಗಳೂರು ವಿಶೇಷ ನಿಯೋಗದ ತೀರ್ಪು ಮತ್ತು ನಡಾವಳಿಯನ್ನು ಸರಕಾರದ ಅಪ್ಪಣೆಗೆ ಕಳುಹಿಸಲಾಗಿದೆ.

ತೀರ್ಪನ್ನು ಒಪ್ಪಿಕೊಂಡು, ಕಾರ್ಯಗತಗೊಳಿಸಲು ಅಪ್ಪಣೆ ನೀಡಲಾಗಿದೆ.

ಫೌಜುದಾರಿ ಅದಾಲತ್ ಕೇಸು ನಂ. ೧೧೪ ಮತ್ತು ಮಂಗಳೂರು ವಿಶೇಷ ನಿಯೋಗದ ತೀರ್ಪು ಮತ್ತು ನಡಾವಳಿಯನ್ನು ಸರಕಾರದ ಅಪ್ಪಣೆಗೆ ಕಳುಹಿಸಲಾಗಿದೆ.

ಫೌಜುದಾರಿ ಅದಾಲತ್ತಿಗೆ, ಯುಕ್ತ ಕಂಡಂತೆ ಎಚ್ಚರಿಕೆ ನೀಡಿ ಈ ವಿಚಾರಣಾ ಖೈದಿಗಳನ್ನು ಬಿಡುಗಡೆಗೊಳಿಸುವ ಅಧಿಕಾರ ಕೊಡುವುದಕ್ಕೆ ಒಪ್ಪಲಾಗಿದೆ.

೧೮ ಡಿಸೆಂಬರ್ ೧೮೩೭ : ಕೆನರಾದ ಮ್ಯಾಜಿಸ್ಟ್ರೇಟನ ಪತ್ರದ ಪ್ರಕಾರ ಹಿಂಸಾಚಾರ ಮತ್ತು ಬಂಡಾಯದ ಆರೋಪ ಹೊಂದಿರುವ ೧೫ ಖೈದಿಗಳನ್ನು ಎಚ್ಚರಿಕೆ ನೀಡಿ ಬಿಡುಗಡೆಗೊಳಿಸಬಹುದೆಂಬ ಸಲಹೆಯೊಂದಿಗೆ ನಕಲನ್ನು ಕಳುಹಿಸಲಾಗಿದೆ.

ಮ್ಯಾಜಿಸ್ಟ್ರೇಟನ ಸಲಹೆಯನ್ನು ಒಪ್ಪಲಾಗಿದೆ ಮತ್ತು ಕೂಡಲೇ ಕಾರ್ಯಗತಗೊಳಿಸಲು ಅಧಿಕಾರ ನೀಡಲಾಗಿದೆ.

೧೫ ಡಿಸೆಂಬರ್ ೧೮೩೭ - ಫೌಜುದಾರಿ ಅದಾಲತ್ ನಡಾವಳಿಯಿಂದ :

೧೫ ಡಿಸೆಂಬರ್ ೧೮೩೭ - ಕೇಸ್ ನಂಬ್ರ ೫೯

೧೮೦೨ರ ಸೆಕ್ಷನ್ ೫ ರೆಗ್ಯುಲೇಶನ್ ೨೦ರ ಪ್ರಕಾರ ಸರಕಾರದ ಅಪ್ಪಣೆಗೆ ಕಳುಹಿಸಲಾಗಿದೆ.

೧೬ ಡಿಸೆಂಬರ್ ೧೮೩೭ - ಕೇಸ್ ನಂಬ್ರ ೮೪

೧೮೦೨ರ ಸೆಕ್ಷನ್ ೫ ರೆಗ್ಯುಲೇಶನ್ ೨೦ರ ಪ್ರಕಾರ ಸರಕಾರದ ಅಪ್ಪಣೆಗೆ ಕಳುಹಿಸಲಾಗಿದೆ.

೧೯ ಡಿಸೆಂಬರ್ ೧೮೩೭ : ಫೌಜುದಾರಿ ಅದಾಲತ್ ಕೋರ್ಟಿನ ರಿಜಿಸ್ಟರ್‌ನಿಂದ: ಕೇಸ್ ನಂಬ್ರ ೧೦೩ರ ತೀರ್ಪು ಮತ್ತು ನಡಾವಳಿಯನ್ನು ಸರಕಾರದ ಅಪ್ಪಣೆಗೆ ಕಳುಹಿಸಲಾಗಿದೆ.

೨೨ ಡಿಸೆಂಬರ್ ೧೮೩೭ : ತಕ್ಕುದಾದ ಎಚ್ಚರಿಕೆ ನೀಡಿ ಖೈದಿಗಳನ್ನು ಬಿಡುಗಡೆಗೊಳಿಸಿರುವ ಅಧಿಕಾರವನ್ನು ಕೊಡಲಾಗಿದೆ.

೧೫ ಡಿಸೆಂಬರ್ ೧೮೩೭ : ಮಂಗಳೂರು ವಿಶೇಷ ನಿಯೋಗದ ಪತ್ರದ ನಕಲನ್ನು ಕಳುಹಿಸಿರುವ ಪ್ರಕಾರ ವಿಶೇಷ ವಿಚಾರಣೆ ನಂ. ೯ರ ೪ನೇ ಖೈದಿ ಗೌಡ ತ್ಯಾಂಪನಿಗೆ ಗಡಿಪಾರು ಶಿಕ್ಷೆಯಾಗಿರುವುದರ ಬದಲಾಗಿ ೭ ವರ್ಷ ಜೈಲು ಶಿಕ್ಷೆ ನೀಡಲಾಗಿದೆ ಮತ್ತು ಕೇಸು ನಂಬ್ರ ೧೨ರ ೧ ಮತ್ತು ೨ನೇ ಖೈದಿಗಳನ್ನು ಎಚ್ಚರಿಕೆ ನೀಡಿ ಬಿಡುಗಡೆಗೊಳಿಸಲು ಸಲಹೆ ನೀಡಲಾಗಿದೆ.



ಭಾಗ ೨

# ಅಮರಕ್ರಾಂತಿ ಉತ್ಸವದ ಸಿಂಹಾವಲೋಕನ

ಪ್ರೊ| ಎಂ. ಶಿವಣ್ಣ ನೆಲಮನೆ

ನಾಡಿಗಾಗಿ ನಾಡವರಿಗಾಗಿ, ಸ್ವಾತಂತ್ರ್ಯ ಸ್ವಾಭಿಮಾನಗಳಿಗಾಗಿ ಪ್ರಾಣದ ಹಂಗುತೊರೆದು ಹೋರಾಡಿ ಬಲಿದಾನಗೈದ ಹಿರಿಚೇತನಗಳಿಗೆ ಕೃತಜ್ಞತಾ ಸಮರ್ಪಣೆಯನ್ನು ಸಲ್ಲಿಸುವುದು ಈ ನಾಡ ಮಣ್ಣಿನ ಹಿರಿಯ ಗುಣ, ಹಾಗೂ ನಾಡವರ ಸುಸಂಸ್ಕಾರ ಸುಸಂಸ್ಕೃತಿಗಳ ದ್ಯೋತಕ. ಸಿಪಾಯಿದಂಗೆಗಿಂತ ಮೊದಲೇ 1837ರಲ್ಲಿಯೇ ರಾಷ್ಟ್ರದ ಕರ್ನಾಟಕದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮವೆನಿಸುವಂತೆ ಪ್ರಬಲ ಬ್ರಿಟಿಷರ ವಿರುದ್ಧ ಸ್ವಯಂಸ್ಫೂರ್ತಿಯಿಂದ ಸಾಮೂಹಿಕವಾಗಿ ಹೋರಾಡಿ ಪ್ರಾಣಾರ್ಪಣೆ ಮಾಡಿಕೊಂಡ ಸುಳ್ಯದ ಅಜ್ಞಾತ ಅಮರ ವೀರರ ಸ್ಮೃತಿಗಾಗಿ ಸುಳ್ಯದ ಅಮರಕ್ರಾಂತಿ ಉತ್ಸವ ಸಮಿತಿ 1998ರಿಂದ ಆರಂಭಿಸಿ ವರ್ಷಂಪ್ರತಿ ಏಪ್ರಿಲ್ ಐದರ ಕ್ರಾಂತಿ ದಿನದಂದು ವಿವಿಧ ಸಂಸ್ಮರಣ ಕಾರ್ಯಕ್ರಮಗಳನ್ನು ಆಯೋಜಿಸಿ ನಡೆಸಿಕೊಂಡು ಹೋಗುತ್ತಿರುವುದು ಅಭಿಮಾನದ ವಿಚಾರವಾಗಿದೆ. ಮೊದಲಿಗೆ, 1998ರ ಸ್ವಾತಂತ್ರ್ಯ ಸುವರ್ಣ ಮಹೋತ್ಸವದ ಸಂದರ್ಭದಲ್ಲಿ ಒಂದು ಸಪ್ತಾಹವಿಡೀ ಸುಳ್ಯದಿಂದ ಮಂಗಳೂರಿನ ಬಾವುಟಗುಡ್ಡೆಯವರೆಗೆ ಕಾಲ್ನಡಿಗೆ ಜಾಥಾ ಮತ್ತು ಅಮರಕ್ರಾಂತಿ ಬೀದಿನಾಟಕದ ಮೂಲಕ ಸಾಗಿದ ಅಭೂತಪೂರ್ವ ಮೆರವಣಿಗೆ ಮತ್ತು ಸಭಾಕಾರ್ಯಕ್ರಮಗಳು ನಡೆದುವು. ಮುಂದಿನ ವರ್ಷ 1999ರಲ್ಲಿ ಪುತ್ತೂರಿನಲ್ಲಿ ನಡೆದ ಸಂಸ್ಮರಣಾ ಕಾರ್ಯಕ್ರಮದಲ್ಲಿ `ಅಮರ ಸುಳ್ಯದ ಸ್ವಾತಂತ್ರ್ಯ ಸಮರ' ಕೃತಿ ಬಿಡುಗಡೆಯಾಯಿತು. 2000ದಲ್ಲಿ ಸಂಪಾಜೆಯಲ್ಲಿ ಭಾಷಾಸಾಮರಸ್ಯ ಗೋಷ್ಠಿ ಜರುಗಿತು. ಹಾಗೂ 2001ರಲ್ಲಿ ಸುಳ್ಯದಲ್ಲಿ ಸಂಸ್ಮರಣ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿತ್ತು. 2002ರಲ್ಲಿ ವಾಹನಜಾಥಾ ಮತ್ತು ಸಭಾಕಾರ್ಯಕ್ರಮಗಳನ್ನು ಕ್ರಾಂತಿ ದಿಗ್ವಿಜಯ ದಿನವಾದ ಏಪ್ರಿಲ್ ಐದರಂದು ಆಯೋಜಿಸಲಾಯಿತು. ಇದರ ಅಂಗವಾಗಿ ಭಾಷಾ ಸಾಮರಸ್ಯ ಕೃತಿ ಬಿಡುಗಡೆ ಮಾಡಲಾಯಿತು. ಈ ಪ್ರಸ್ತಾವದಲ್ಲಿ ಇದುವರೆಗಿನ ಸಂಸ್ಮರಣಾ ಕಾರ್ಯಕ್ರಮಗಳ ಸ್ಥೂಲ ಪರಿಚಯದ ಪಕ್ಷಿನೋಟವನ್ನು ಘಟನಾನುಕ್ರಮದಲ್ಲಿಯೇ ಸಂಕ್ಷೇಪಿಸಲಾಗಿದೆ.

## ೧. ಅಮರಕ್ರಾಂತಿ ಜಾಥಾ 30-03-98ರಿಂದ 05-04-98

'ಇತಿಹಾಸವನ್ನು ಮರೆತವರು ಇತಿಹಾಸವನ್ನು ಸೃಷ್ಟಿಸಲಾರರು' ಎಂಬುದು ಭಾರತರತ್ನ ಡಾ| ಭೀಮರಾವ್ ಅಂಬೇಡ್ಕರರ ಎಚ್ಚರಿಕೆಯ ನುಡಿಮಾತು. ನಿಜವಾದ ಇತಿಹಾಸದ ಪುನರ್ಮನನವು ನಮ್ಮತನದ ಅರಿವನ್ನುಂಟು ಮಾಡಿ ನಮ್ಮ ಸಂಸ್ಕೃತಿಯ ಬಗೆಗಿನ ಅಭಿಮಾನವನ್ನು ಹೆಚ್ಚಿಸಿ ರಾಷ್ಟ್ರ ಪ್ರೇಮವನ್ನು ವರ್ಧಿಸುವುದಾಗಿರುತ್ತದೆ. ನಮ್ಮ ನಾಡಿನ ಸರಿಯಾದ ಚಾರಿತ್ರಿಕ ಪ್ರಜ್ಞೆಯ ಅಭಾವದಿಂದ ಯುವಪೀಳಿಗೆ ನಿರಭಿಮಾನಿಗಳಾಗಿ ಲಘುಪಥದಲ್ಲಿ ಕ್ರಮಿಸುವ ಅಪಾಯ ತಲೆದೋರಬಹುದು. ದುರ್ಬಲ ವರ್ಗಕ್ಕೆ ಸೇರಿದ ಸಾಮಾನ್ಯ ಜನತೆಯ ಅದೆಷ್ಟೋ ತ್ಯಾಗ ಬಲಿದಾನಗಳು, ಹೋರಾಟ ದೇಶಪ್ರೇಮಗಳು ತಥಾಕಥಿತ ಇತಿಹಾಸದ ಅವಜ್ಞೆಗೆ ಒಳಗಾಗಿರಬಹುದು. ಆದ್ದರಿಂದ ಇತಿಹಾಸ ಗರ್ಭದಲ್ಲಡಗಿರುವ ನಮ್ಮ ಪೂರ್ವಜರ ಸಾಹಸಗಾಥೆಗಳನ್ನು, ಐತಿಹಾಸಿಕ ವಿವರಗಳನ್ನು ಪುನಾರಚಿಸುವುದರ ಮೂಲಕ ಕಿರಿಯರಲ್ಲಿ ಜಾಗೃತಿಯನ್ನು ಮೂಡಿಸುವುದು ಹಿರಿಯರ ಕರ್ತವ್ಯವಾಗಿದೆ.

ಎಲ್ಲ ವರ್ಗಕ್ಕೆ ಸೇರಿದ ಜನತೆಯ ಸಾಮೂಹಿಕ ಧ್ಯೇಯೋದ್ದೇಶದ ಹೋರಾಟದ ವಿಶಿಷ್ಟ ಸ್ವರೂಪದಿಂದಾಗಿ ಕರ್ನಾಟಕ, ಅಷ್ಟೇ ಏಕೆ ಭಾರತದಲ್ಲಿಯೇ ಪ್ರಥಮ ಸ್ವಾತಂತ್ರ್ಯ ಹೋರಾಟ ಎಂಬ ಕೀರ್ತಿಗೆ ಪಾತ್ರವಾಗಬೇಕಿದ್ದ 1837ರ `ಅಮರ ಸುಳ್ಯದ ಹೋರಾಟ' ಚರಿತ್ರೆಯ ಪುಟಗಳಲ್ಲಿ ತಪ್ಪಾಗಿ ದಾಖಲಾಗಿ `ಅಮರ ಸುಳ್ಯದ ಗೌಡದಂಗೆ', `ಕಲ್ಯಾಣಪ್ಪನ ಕಾಟುಕಾಯಿ' ಇತ್ಯಾದಿ ಲಘುಶೀರ್ಷಿಕೆಗಳಿಂದ ಕಡೆಗಣಿಸಲ್ಪಟ್ಟಿದೆ. ಯಕ್ಷಗಾನ ಪ್ರಸಂಗವಾಗಿಯೂ ತಪ್ಪು ಅರ್ಥದಲ್ಲಿ ಜನಜನಿತವಾಗಿದೆ. ಈ ಪ್ರದೇಶದ ರೈತಾಪಿ ಜನಾಂಗಕ್ಕೆ ಸೇರಿದ ಸುಶಿಕ್ಷಿತ ಸುಸಂಸ್ಕೃತ ಮುಂದಾಳು ಎನ್. ಎಸ್. ದೇವಿಪ್ರಸಾದರು ಈ ಬಗ್ಗೆ ಬಹುದಿನಗಳಿಂದ ಸಾಕಷ್ಟು ಅಧ್ಯಯನ ನಡೆಸಿದಾಗ ಹಲವು ಮಾಹಿತಿಗಳು ದೊರೆತು ಈ ಕ್ರಾಂತಿ ವಿಷಯದ ಈವರೆಗಿನ ಗೃಹೀತ ಇತಿಹಾಸ ಮತ್ತು ಐತಿಹ್ಯ ಹಾಗೂ ಯಕ್ಷಗಾನ ಪ್ರಸಂಗಗಳ ಪಠ್ಯಗಳು ತಪ್ಪು ಕಲ್ಪನೆಯಿಂದ ಕೂಡಿದುವೆಂದು ಖಚಿತಪಡಿಸಿದುವು. ಇತಿಹಾಸದಲ್ಲಿ ಹೀಗೆ ಈ ಕ್ರಾಂತಿಯ ಬಗ್ಗೆ ತಪ್ಪಾಗಿ ದಾಖಲಾದ ಗೊಂದಲಗಳನ್ನು ನಿವಾರಿಸಿ ವಾಸ್ತವಸತ್ಯದ ಪಠ್ಯ ಚರಿತ್ರೆಯಲ್ಲಿ ಸೇರ್ಪಡೆಗೊಳಿಸಬೇಕೆಂಬ ಆದರ್ಶದಿಂದ ಅವರು ಕ್ರಿಯಾಶೀಲರಾದರು.

ಈ ಹಿರಿದಾದ ಆಶಯದೊಡನೆ ಅವರು ಇತಿಹಾಸ ಸಂಸ್ಕೃತಿ ಪ್ರೇಮಿಗಳಾದ ಹಲವು ಸಮಾನಮನಸ್ಕರನ್ನು ಕೂಡಿಸಿಕೊಂಡು ಕ್ರಾಂತಿ ಸಂಘಟನೆಯ ಕೇಂದ್ರ ಸ್ಥಳವಾದ ಸುಳ್ಯದಲ್ಲಿ 1998ರ ಜನವರಿಯಲ್ಲಿ ಸಮಿತಿಯೊಂದನ್ನು ರೂಪಿಸಿಕೊಂಡರು. ಆ ಸಮಿತಿ ಕಾರ್ಯಾಲಯವೊಂದನ್ನು ಸ್ಥಾಪಿಸಿ ಹಲವು ಸಭೆಗಳನ್ನು ಜರುಗಿಸಿ, ಸಾಕಷ್ಟು ಬರಹಗಳನ್ನು

ಪ್ರಕಟಿಸಿ, ಪತ್ರಿಕಾ ಗೋಷ್ಠಿಗಳನ್ನು ನಡೆಸಿತು. 22-02-98ರಂದು ಬುದ್ಧಿಜೀವಿಗಳ ಸಂವಾದಗೋಷ್ಠಿಯೊಂದನ್ನು ಸಹ ಏರ್ಪಡಿಸಲಾಗಿತ್ತು. ಸ್ವರ್ಣಸ್ವಾತಂತ್ರ್ಯೋತ್ಸವ ವರ್ಷಾಚರಣೆಯ ಆರಂಭಿಕ ವರ್ಷದ ಸುಸಂದರ್ಭದಲ್ಲಿ ಈ ಕ್ರಾಂತಿಯ ಬಗ್ಗೆ ರಚನಾತ್ಮಕ ಜನಾಭಿಪ್ರಾಯ ಮತ್ತು ಜನಜಾಗೃತಿ ಮೂಡಿಸಲು ಡಾ| ಪ್ರಭಾಕರ ಶಿಶಿಲರ ಹೊಳಹಿನಂತೆ ದಿನಾಂಕ 30-03-98 ರಿಂದ 05-04-98ರವರೆಗೆ ಕಾಲ್ನಡಿಗೆ ಜಾಥಾವನ್ನು ಡಿ. ಜವರೇಗೌಡರ ನೇತಾರಿಕೆಯಲ್ಲಿ ಆಯೋಜಿಸಲಾಗಿತ್ತು. ಜಾಥಾ ನಾಗರಿಕರ ಸಲಹೆ ಸಹಕಾರಗಳೊಡನೆ, ಸಂಘಸಂಸ್ಥೆಗಳ ಉದಾರ ನೆರವಿನೊಡನೆ ಡಾ| ಶಿಶಿಲ ವಿರಚಿತ ಬೀದಿನಾಟಕ - ಲಾವಣಿಗಳಿಂದ ಕೂಡಿದ ಜೀವನರಾಂ ನೇತೃತ್ವದ ಕಲಾ ತಂಡದೊಡನೆ ಸುಳ್ಯ ಚೆನ್ನಕೇಶವ ದೇಗುಲದಿಂದ ಮಾರ್ಚ್ 30ರಂದು ಹೊರಟು ಬೆಳ್ಳಾರೆ - ಕುಂಬ್ರ - ಪುತ್ತೂರು - ಮಾಣಿ - ನಂದಾವರ - ಫರಂಗಿಪೇಟೆ ಮಾರ್ಗವಾಗಿ ಸಾಗಿ ಏಪ್ರಿಲ್ ಐದರಂದು ಮಂಗಳೂರಿನ ಬಾವುಟ ಗುಡ್ಡೆಯ ಸಂತ ಅಲೋಶಿಯಸ್ ಕಾಲೇಜು ಮೈದಾನದಲ್ಲಿ ಧ್ವಜಾರೋಹಣಮಾಡಿ ಸಭೆ ಜರುಗಿಸುವುದೆಂದು ನಿರ್ಧಾರವಾಯಿತು.

1998ನೆಯ ಮಾರ್ಚ್ 30ರ ಅಪರಾಹ್ನ ಐದರ ಸಂಧ್ಯಾಸಮಯ. ಸೂರ್ಯ ಪಶ್ಚಿಮಾಂಬುಧಿಯಡೆ ಇಳಿಮೊಗವಾಗಿ ನಭಕ್ಕೆ ಕುಂಕುಮದೋಕುಳಿಯ ರಂಗು ಚೆಲ್ಲಿದೆ. ಕಾಲ್ನಡಿಗೆ ಜಾಥಾ ಸಾಧ್ಯತೆಯ ಬಗೆಗಿದ್ದ ಎಲ್ಲ ಗುಮಾನಿಗಳನ್ನು ಮೀರಿ, ಎಲ್ಲಾ ವರ್ಗದ, ವಯೋಮಾನದ ಜನರ ಬೃಹತ್‌ದಂಡು ಬೀದಿ ನಡೆಯುವ ಉಮೇದಿನಿಂದ ಸುಳ್ಯದ ಶ್ರೀ ಚೆನ್ನಕೇಶವ ದೇಗುಲದ ಮುಂದೆ ಉತ್ಸಾಹದಿಂದ ನೆರೆಯಿತು. ಸುಳ್ಯದ ಪ್ರಮುಖ ನಾಗರಿಕರು, ಸರ್ವಪಕ್ಷಗಳ ಮುಖಂಡರು, ಲಯನ್ಸ್, ರೋಟರಿ, ಯುವಜನಸಂಯುಕ್ತ ಮಂಡಳಿ, ಜೇಸಿ ಯುವಕ-ಯುವತಿ ಮಂಡಲಗಳು, ರೋಟರ್ಯಾಕ್ಟ್, ಇನ್ನರ್‌ವೀಲ್, ಲಯನ್ನೆಸ್, ಶಾಲಾಕಾಲೇಜಿನ ಶಿಕ್ಷಕರು, ಸ್ಕೌಟ್‌ಗೈಡ್ಸ್ ವಿದ್ಯಾರ್ಥಿಗಳು ಅಲ್ಲದೆ ಅನೇಕ ಸ್ವಾತಂತ್ರ್ಯ ಪ್ರೇಮಿಗಳು ಕಾಲ್ನಡಿಗೆ ಜಾಥಾದಲ್ಲಿ ಭಾಗವಹಿಸಲು ಮತ್ತು ಜಾಥಾ ಬೀಳ್ಕೊಡಲು ಅಲ್ಲಿ ಸೇರಿದ್ದರು. ಡಾ| ಶಿಶಿಲರ ನಿರ್ವಹಣೆಯೊಂದಿಗೆ, ಗೀತಾಮುಳ್ಯರ ವಿಧಿವತ್ತಾದ ಪ್ರಾರ್ಥನೆಯೊಂದಿಗೆ, ಕಾರ್ಯದರ್ಶಿ ಜನಾರ್ದನ ಕಣಕ್ಕೂರರು ಸ್ವಾಗತಿಸುವುದರೊಂದಿಗೆ ಶುಭಾರಂಭಗೊಂಡಿತು. ಹಿರಿಯರಾದ ದೇಂಗೋಡಿ ಸುಬ್ಬಣ್ಣ ಗೌಡರು, ಶ್ರೀ ಚೆನ್ನಕೇಶವ ದೇವರನ್ನು ಪ್ರಾರ್ಥಿಸಿ ಜಾಥಾವನ್ನು ಉದ್ಘಾಟಿಸಿದರು. ಅವರು ತಮ್ಮ ಉದ್ಘಾಟನಾ ಭಾಷಣದಲ್ಲಿ "ಈ ಜಾಥಾ ಮುಂದಿನ ಪೀಳಿಗೆಗೆ ಜಾಗೃತಿ ತರುವ ಕಾರ್ಯಕ್ರಮವಾಗಿದೆ. ಇದು ಈ ವರ್ಷಕ್ಕೆ ಮಾತ್ರ ಸೀಮಿತಗೊಳ್ಳದೆ ವರ್ಷಂಪ್ರತಿ ಮುಂದುವರಿದು ನಮ್ಮ ಯುವ ಪೀಳಿಗೆಗೆ ಕ್ರಾಂತಿಕಾರರ ನೆನಪನ್ನು ಸದಾ ತಂದುಕೊಡುವಂತಾಗಬೇಕು" ಎಂದು ಹೇಳಿ ಎಲ್ಲ ದೇಶಪ್ರೇಮಿಗಳಿಗೆ ಶುಭ ಹಾರೈಸಿದರು.

ಕಾರ್ಯಕ್ರಮ ರೂವಾರಿ ಸಮಿತಿಯ ಅಧ್ಯಕ್ಷ ಎನ್. ಎಸ್. ದೇವಿಪ್ರಸಾದ್ ಸಂಪಾಜೆಯವರು ಪ್ರಾಸ್ತವಿಕವಾಗಿ ಮಾತನಾಡಿ "ಅಮರ ಸುಳ್ಯ ದಂಗೆ ಚರಿತ್ರೆಗೆ ಸೇರಬೇಕೆಂಬ ಬಗ್ಗೆ ಸಾಕಷ್ಟು ಸಂವಾದ ಜರುಗಿ ತಿ. ತಾ. ಶರ್ಮ, ಡಾ| ಸೂರ್ಯನಾಥ ಕಾಮತ್ ಮುಂತಾದ ಇತಿಹಾಸಜ್ಞ ಮೇಧಾವಿಗಳೆಲ್ಲರೂ ಇದು ಚರಿತ್ರೆಗೆ ಸೇರಬೇಕಾದ ವಿಷಯವೆಂದು ಮನವರಿಕೆ ಮಾಡಿಕೊಟ್ಟಿದ್ದಾರೆ. ಈ ಸಂಘಟನೆಗೆ ಮತ್ತು ಜಾಥಾಕ್ಕೆ ಎಲ್ಲೆಡೆ ಬೆಂಬಲ ದೊರೆಯುವಂತಾಗಲಿ" ಎಂದು ಆಶಿಸಿದರು. ಈ ಸಂದರ್ಭದಲ್ಲಿ ಸಂಶೋಧಕರಾದ ವಿದ್ವಾನ್ ತುದಿಯಡ್ಕ ವಿಷ್ಣ್ವಯ್ಯನವರು ಜಾಥಾ ತಂಡದವರನ್ನು ಉದ್ದೇಶಿಸಿ "ಅಮರ ಸುಳ್ಯದ ಸಿಡಿಲ ಮರಿಗಳೇ, 161 ವರ್ಷಗಳ ಹಿಂದೆ ನಮ್ಮ ಪೂರ್ವಿಕರು ಪರಕೀಯರ ದಬ್ಬಾಳಿಕೆಯ ವಿರುದ್ಧ ಸಿಡಿದೆದ್ದು ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಈ ಪುಣ್ಯ ಭೂಮಿಯ ಮಣ್ಣಿನಲ್ಲಿ, ಅವರು ಸಾಗಿದ ಹಾದಿಯಲ್ಲಿ ನಾವು ಸಾಗುತ್ತಿದ್ದೇವೆ. ನಮ್ಮ ಮಣ್ಣಿನ ಮೇಲಿನ ಅಭಿಮಾನದೊಂದಿಗೆ, ನಮ್ಮ ಹಿರಿಯರ ಮೇಲಿನ ಗೌರವದೊಂದಿಗೆ ಈ ಜಾಥಾ ಅಂದಿನ ಹೋರಾಟದ ನೆನಪನ್ನು ಚಿರಸ್ಥಾಯಿಯಾಗಿಸಲಿ" ಎಂದು ಜಾಥಾ ಸಾಗುವವರಿಗೆ ಸ್ಫೂರ್ತಿ ತುಂಬಿದರು. ಸುಳ್ಯ ನಗರ ಪಂಚಾಯತ್‌ನ ಅಂದಿನ ಅಧ್ಯಕ್ಷೆಯಾಗಿದ್ದ ಆಶಾತಿಮ್ಮಪ್ಪನವರು ಜಾಥಾ ತಂಡಕ್ಕೆ ಶುಭಕೋರಿ, ಮುಂದಿನ ಜಾಥಾ ಮತ್ತು ಇತರ ಕಾರ್ಯಕ್ರಮಗಳು ಯಶಸ್ವಿಯಾಗಲಿ ಎಂದು ಹುರಿದುಂಬಿಸಿದರು.

ಜಾಥಾ ಅಭಿಯಾನವನ್ನು ಆರಂಭಿಸುವ ಸಮಯದಲ್ಲಿ ರಥಬೀದಿಯ ಜಾತ್ರಾ ಮೈದಾನದಲ್ಲಿ ಪ್ರೊ| ಕೋಡಿ ಕುಶಾಲಪ್ಪ ಗೌಡ, ಟಿ. ಜಿ. ಮುಡೂರು, ಕೋಟೆ ವಸಂತಕುಮಾರ್, ಬಾಲಕೃಷ್ಣ ರೈ ಚೊಕ್ಕಾಡಿ, ಜನಾರ್ದನ ಕಣಕ್ಕೂರು, ಕುಕ್ಕೇಟಿ ಮಾಧವ ಗೌಡ, ಪಿ. ಎಸ್. ಗಂಗಾಧರ್, ದಿನೇಶ್ ಮಡಪ್ಪಾಡಿ, ಪ್ರಮೋದ್ ಕುಮಾರ್ ನಾಯಕ್, ವಿಶ್ವನಾಥರಾವ್, ಕೋಟೆ ಲಕ್ಷ್ಮೀನಾರಾಯಣ, ಎಂ. ಬಾಲಕೃಷ್ಣ, ಕೆ. ವಿ. ಹೇಮನಾಥ್, ಡಾ| ಕೆ. ವಿ. ರೇಣುಕಾಪ್ರಸಾದ್, ನಿತ್ಯಾನಂದ ಮುಂಡೋಡಿ, ಕುರುಂಜಿ ಪುರುಷೋತ್ತಮ, ಸಂಜೀವ ಕುದ್ಪಾಜೆ, ಕೆ. ಆರ್. ಗಂಗಾಧರ್, ಡಿ.ಎಂ. ಸುಮಿತ್ರ, ಎಂ. ಬಿ. ಸದಾಶಿವ, ಹರಿಣಿ ಸದಾಶಿವ, ಡಿ. ಜಿ. ನಡ್ಕ, ಮಂಡೆಕೋಲು ಗಂಗಾಧರ್, ದಯಾನಂದ ಕೊಯಿಂಗೋಡಿ, ಡಾ| ಪ್ರಭಾಕರ ಶಿಶಿಲ, ಪ್ರೊ| ಶಿವಣ್ಣ ನೆಲಮನೆ, ಪ್ರೊ| ಜವರೇ ಗೌಡ, ಡಾ| ಎಚ್. ಎಂ. ಕುಮಾರಸ್ವಾಮಿ, ಶ್ರೀಮತಿ ನಂದಾ ಕುಮಾರಸ್ವಾಮಿ, ಡಿ. ಎಸ್. ಗೋಪಾಲ, ಮದುವೆಗದ್ದೆ ಭೋಜಪ್ಪ ಮತ್ತಿತರ ಅನೇಕ ಮಂದಿ ಭಾಗವಹಿಸಿದ್ದರು. ಜೀವನ್‌ರಾಂ ಸುಳ್ಯ ಇವರ ನೇತೃತ್ವದ ಕಲಾವಿದರ ತಂಡವೂ ಜತೆಗಿದ್ದಿತು. ಯುವಜನ ಸಂಯುಕ್ತ ಮಂಡಳಿ, ಸುಳ್ಯ ಇದರ ಸದಸ್ಯರೂ ದಿನೇಶ್ ಮಡಪ್ಪಾಡಿ ಅವರ ಮುಖಂಡತ್ವದಲ್ಲಿ ಕಾಲ್ನಡಿಗೆ ಜಾಥಾ ತಂಡದೊಡನೆ ನಡೆದರು.

ಶ್ರೀಮತಿ ಶೈಲಿ ಪ್ರಭಾಕರ್ ನಿರ್ದೇಶನದಲ್ಲಿ ಸಮವಸ್ತ್ರ ಧರಿಸಿದ ರೋಟರಿ ಶಾಲಾ ಸ್ಕೌಟ್ ಮತ್ತು ಗೈಡ್ಸ್‌ನ ತಂಡ ಜಾಥಾದ ಮುಂಚೂಣಿಯಲ್ಲಿದ್ದಿತು.

ಸುಳ್ಯದ ಪ್ರಮುಖ ಬೀದಿಗಳ ಮೂಲಕ ಧ್ವಜಲಾಂಛನ, ಶಿಸ್ತುಬದ್ಧ ಘೋಷಣೆಗಳೊಡನೆ ಸಾಗಿದ ಜಾಥಾ ಪೈಚಾರಿಗೆ ತಲುಪಿತು. ಪೈಚಾರಿನಲ್ಲಿ ಬೊಳುಬೈಲು ಯುವಕ ಮಂಡಲ, ನವಚೇತನ ಯುವಕ ಮಂಡಲ ಮತ್ತು ಶಾಂತಿನಗರ ಯುವಕ ಮಂಡಲದ ಸದಸ್ಯರು ತಂಡವನ್ನು ಸ್ವಾಗತಿಸಿದರು. ಹಾಗೂ ತಂಪು ಪಾನೀಯವನ್ನು ನೀಡಿ ಸತ್ಕರಿಸಿದರು. ಅಲ್ಲಿ ಡಾ| ಶಿಶಿಲ ವಿರಚಿತ ಟಿಪ್ಪುವಿನ ಪತನದ ಬೀದಿನಾಟಕವನ್ನು ಜೀವನ್‌ರಾಂ ಕಲಾತಂಡ ಅಭಿನಯಿಸಿತು. ಸೇರಿದ್ದ ಬಹುಜನತೆ ಮಂತ್ರಮುಗ್ಧವಾಗಿ ವೀಕ್ಷಿಸಿತು. ಬಳಿಕ ಸೋಣಂಗೇರಿಗೆ ಹೋದ ತಂಡವನ್ನು ಅಲ್ಲಿಯ ಯುವಕ ಮಂಡಲದವರು ಸ್ವಾಗತಿಸಿ ಉಪಚರಿಸಿದರು. ಸೋಣಂಗೇರಿ ಶಾಲಾವಠಾರದಲ್ಲಿ ಮತ್ತೆ ಬೀದಿನಾಟಕದ ಪ್ರದರ್ಶನವಾಯಿತು. ಅನಂತರ ಐವರ್ನಾಡಿಗೆ ತಲುಪಿದ ಜಾಥಾ ತಂಡವನ್ನು ಅಲ್ಲಿಯ ಗ್ರಾಮಸ್ಥರು ಪಾಲೆಪ್ಪಾಡಿ ಗಣಪಯ್ಯ ಭಟ್ ಮತ್ತು ಐತಪ್ಪಗೌಡರ ನೇತೃತ್ವದಲ್ಲಿ ಬರಮಾಡಿಕೊಂಡು ತಂಡದವರಿಗೆ ತಿನಿಸು ಮತ್ತು ಪಾನೀಯಗಳನ್ನಿತ್ತು ಸತ್ಕರಿಸಿದರು. ಜಾಥಾದ ಉದ್ದೇಶವನ್ನು ಅಧ್ಯಕ್ಷರು ಪ್ರಸ್ತಾವಿಕವಾಗಿ ಮನವರಿಗೆ ಮಾಡಿಕೊಟ್ಟ ಮೇಲೆ ಬೀದಿನಾಟಕದ ಪ್ರದರ್ಶನದ ತರುವಾಯ ಜಾಥಾ ಮುಂದುವರಿದು ಬೆಳ್ಳಾರೆಯಡೆ ಸಾಗಿತು.

ಬೆಳ್ಳಾರೆಯಲ್ಲಿ ಅಮರಕ್ರಾಂತಿ ಸ್ವಾಗತ ಸಮಿತಿ ಮತ್ತು ಜೇಸಿಸ್‌ನವರು ರಾತ್ರಿ ಒಂಭತ್ತರ ಸುಮಾರಿನಲ್ಲಿ ಜಾಥಾವನ್ನು ಅದರ ಪೂರ್ವಕ ಸ್ವಾಗತಿಸಿದರು. ಅಲ್ಲಿ ಶಾಸಕರಾದ ಕೆ. ವಿನಯಚಂದ್ರ ಊರಿನ ಅಧ್ಯಕ್ಷ ಟಿ. ವಾಸುದೇವ ಆಚಾರ್, ಬೆಳ್ಳಾರೆಯ ಮಾಜಿ ಮಂಡಲಪ್ರಧಾನ ಕೆ. ಜಯಸೂರ್ಯ ರೈ, ಮಠತಡ್ಕ ಕೇಶವಭಟ್ ಮೊದಲಾದವರ ಉಪಸ್ಥಿತಿಯಲ್ಲಿ ಬೃಹತ್ ಸಭಾಕಾರ್ಯಕ್ರಮವನ್ನು ಏರ್ಪಡಿಸಲಾಗಿತ್ತು. ಈ ಸಭೆಯಲ್ಲಿ ಮುಖ್ಯ ಭಾಷಣಕಾರರಾಗಿ ಮಾತನಾಡಿದ ಶಾಸಕ ಕೆ. ವಿನಯಚಂದ್ರರು, ದೇಶದ ಸ್ವಾತಂತ್ರಕ್ಕಾಗಿ ತ್ಯಾಗ, ಬಲಿದಾನಗಳನ್ನು ಗೈದ ಸ್ವಾತಂತ್ರ್ಯ ಯೋಧರ ಸ್ಮರಿಸುವಿಕೆ ಅತ್ಯಗತ್ಯವಾಗಿದ್ದು, ಇದರಿಂದಾಗಿ ಯುವಜನಾಂಗಕ್ಕೆ ದೇಶಪ್ರೇಮ, ರಾಷ್ಟ್ರೀಯ ಭಾವೈಕ್ಯತೆ ಹೆಚ್ಚಿಸಿಕೊಳ್ಳಲು ಅನುಕೂಲವಾಗುವುದು. ಈ ನಿಟ್ಟಿನಲ್ಲಿ ಸುಳ್ಯದಿಂದ ಹಮ್ಮಿಕೊಳ್ಳಲಾಗಿರುವ ಅಮರಕ್ರಾಂತಿ ಉತ್ಸವ ಜಾಥಾ ನಿಜಕ್ಕೂ ಶ್ಲಾಘನೀಯ ವಾದುದೆಂದು ತಿಳಿಸಿ ಜಾಥಾ ಸಂಘಟಕರಿಗೆ ಅಭಿನಂದನೆಗಳನ್ನು ವ್ಯಕ್ತಪಡಿಸಿದರು. ಜಾಥಾದ ಸಂಚಾಲಕ ಎನ್. ಎಸ್. ದೇವಿಪ್ರಸಾದ್ ಮಾತನಾಡಿ, ಅಮರಕ್ರಾಂತಿಗೆ ಸಂಬಂಧಿಸಿ ಬೆಳ್ಳಾರೆಯಲ್ಲಿ 1837ರ ಮಾರ್ಚ್ 30ರಂದು 2000 ಯೋಧರು ಸೇರಿ ಬ್ರಿಟಿಷ್

ಖಜಾನೆಯನ್ನು ಸ್ವಾಧೀನಪಡಿಸಿದ ವಿಚಾರವು ಬಹುಪ್ರಮುಖವಾದುದೆಂದು ವಿವರಿಸಿದರು.

ಅಧ್ಯಕ್ಷ ಸ್ಥಾನದಿಂದ ಕಿಟ್ಟಣ್ಣ ರೈಯವರು, ಅಪೂರ್ವವಾದ ಈ ಕಾರ್ಯಕ್ರಮವನ್ನು ಹಮ್ಮಿಕೊಂಡದ್ದಕ್ಕೆ ಸಮಿತಿಗೆ ಕೃತಜ್ಞತೆ ಸೂಚಿಸಿದರು. ಹಾಗೂ ಅಮರಕ್ರಾಂತಿಗೆ ಸಂಬಂಧಿಸಿದ ತಮ್ಮ ಕೆಲವು ಹಳೆಯ ನೆನಪುಗಳನ್ನು ಉಕ್ತಮಾಡಿದರು. ರಾಮಕೃಷ್ಣ ಭಟ್ ಚೊಕ್ಕಾಡಿ, ರಾಜೀವಿ ರೈ, ಕುಮಾರ ನಾಯರ್, ಕಳಂಜ ಗ್ರಾಮ ಪಂಚಾಯತ್ ಅಧ್ಯಕ್ಷರಾಗಿದ್ದ ವಿಶ್ವನಾಥ ರೈ, ಧರ್ಮದರ್ಶಿ ಕೋಟೆ ಲಕ್ಷ್ಮಿನಾರಾಯಣ, ಪ್ರದೀಪ್ ರೈ, ರಘುನಾಥ ರೈ, ಕೆ. ವಿ. ಹೇಮನಾಥ್, ಅಮರನಾಥ ಪಡ್ಡಂಬೈಲು, ಡಿ. ಜಿ. ನಡ್ಕ, ಐ. ಎಂ. ಎಸ್. ಮೂರ್ತಿ, ವಿಶ್ವನಾಥ ರಾವ್, ಹರಿಣಿ ಸದಾಶಿವ, ಡಾ| ರಂಗಯ್ಯ ಮೊದಲಾದವರು ಉಪಸ್ಥಿತರಿದ್ದರು. ಪ್ರಧಾನ ಕಾರ್ಯದರ್ಶಿ ಜನಾರ್ದನ ಕಣಕ್ಕೂರು ಕಾರ್ಯಕ್ರಮ ನಿರ್ವಹಣೆ ಗೈದರು. ಸ್ವಾತಂತ್ರ್ಯ ಸಂಗ್ರಾಮದ ಕುರಿತು ಜೀವನ್‌ರಾಂ ಸುಳ್ಯ ಕಲಾತಂಡದವರಿಂದ ಡಾ| ಶಿಶಿಲ ವಿರಚಿತ ಬೀದಿನಾಟಕ ಜರುಗಿತು. ಬೆಳ್ಳಾರೆ ಜೇಸಿಯವರು ಊಟೋಪಚಾರಗಳ ಆತಿಥ್ಯವನ್ನು ನೀಡಿದರು.

ಮರುದಿನ ಜಾಥಾತಂಡ ಬೆಳ್ಳಾರೆಯ ಐತಿಹಾಸಿಕ ಸ್ಥಳವಾದ ಕೋಟೆಗುಡ್ಡೆಯನ್ನು ಸಂದರ್ಶಿಸಿತು. ಹಿರಿಯರಾದ ಗೋವಿಂದ ಶೆಣೈಯವರು ತಂಡದ ನೇತಾರ ಎನ್. ಎಸ್. ದೇವಿಪ್ರಸಾದ್‌ರಿಗೆ ಹಾರಾರ್ಪಣೆಗೈದರು. ಬೆಳ್ಳಾರೆಯ ಶೆಣೈ ಸ್ವೀಟ್ಸ್ ಸ್ಟಾಲ್ ಮಾಲಿಕರಿಂದ ಸಿಹಿತಿಂಡಿ ವಿತರಣೆ ಮಾಡಲಾಗಿತ್ತು. ಜೇಸಿಯವರು ಇಂದೂ ತಂಪು ಪಾನೀಯವಿತ್ತು ಉಪಚರಿಸಿದರು. ಕೋಟೆ ವಸಂತಕುಮಾರ್ ಪುಸ್ತಕಗಳ ಉಡುಗೊರೆಯಿತ್ತು ತಂಡದವರನ್ನು ಗೌರವಿಸಿದರು. ಮಾಜಿ ಮಂಡಲ ಪ್ರಧಾನ ಜಯಸೂರ್ಯ ರೈ ಹಾಗೂ ಜೇಸಿಸ್‌ನ ಸದಸ್ಯರ ಸಹಭಾಗಿತ್ವದಲ್ಲಿ ತಂಡ ಬೆಳ್ಳಾರೆಯಿಂದ ಬೀಳ್ಕೊಂಡು ಮಾರ್ಚ್ 31ರ ಸಂಜೆ ಕುಂಬ್ರಕ್ಕೆ ನಡೆಯಿತು.

31ರ ಮಾರ್ಚ್ 1998ರ ಸಂಜೆ 4-30ರಲ್ಲಿ ಪ್ರಖರ ಸೂರ್ಯತೇಜದ ಇದಿರು ಬಿಸಿಲಲ್ಲಿ ಬೆಳ್ಳಾರೆಯಿಂದ ಪಾಲ್ತಾಡಿಮಾಡಾವು ಮಾರ್ಗವಾಗಿ ಜಾಥಾತಂಡ ನಡೆಯಿತು. ಕೆ. ಜಯಸೂರ್ಯ ರೈ ಮತ್ತು ಜೇಸಿ ಅಧ್ಯಕ್ಷರು ಕೂಡ ತಂಡದೊಡನೆ ನಡೆದರು. ಹಳ್ಳಿಗಳಲ್ಲಿ ಜನ ಈ ತಂಡವನ್ನು ಕುತೂಹಲದಿಂದ ಹುಬ್ಬೇರಿಸಿ ನೋಡುತ್ತಿದ್ದರು. ಜನರಗುಂಪು ಇದ್ದ ಕಡೆಯಲ್ಲೆಲ್ಲಾ ಮೈಕ್ರೋಫೋನ್ ಹಿಡಿದು ಡಾ| ಶಿಶಿಲ ತುಳು ಭಾಷೆಯಲ್ಲಿ, ಸಂಜೀವ ಕುದ್ಪಾಜೆ ಕನ್ನಡದಲ್ಲಿ ಅಮರಕ್ರಾಂತಿಯ ಸ್ವರೂಪವನ್ನು, ಜಾಥಾ ತಂಡದ ಉದ್ದೇಶಗಳನ್ನು ನಿರೂಪಿಸುತ್ತಿದ್ದರು. ವೀಡಿಯೋಗ್ರಾಫರ್ ಮೋಹನ್ ಉದ್ದಕ್ಕೂ ಪ್ರಕೃತಿ ಸೊಬಗನ್ನು ಸೆರೆಹಿಡಿದರು. ಕೆಮ್ಮಿಂಜೆ, ಹರಿಣಿ, ಬಾಸುಮ

ಫೋಟೋಗಳನ್ನು ತೆಗೆದರು. ಪಾಲ್ತಾಡಿನ ಸಮೀಪದ ರಸ್ತೆ ಬದಿಯ ನಿವಾಸಿ ಜಾಥಾತಂಡದಲ್ಲಿದ್ದ ಚಂದ್ರಾಡ್ಕಾರ್‌ರವರ ಸಂಬಂಧಿಕರ ಮನೆಯ ಮುಂದೆ ಇಡೀ ಜಾಥಾ ತಂಡಕ್ಕೆ ಶರಬತ್ತಿನ ಸರಬರಾಜಾಯಿತು. ಪಾಲ್ತಾಡಿ-ಮಾಡಾವುಗಳಲ್ಲಿ ಭಾಷಣ ಮಾಡಿ ಹದಿನೇಳು ಕಿಲೋಮೀಟರ್‌ಗಳಷ್ಟು ದೀರ್ಘ ನಡೆದು ಕುಂಬ್ರ ಸಮೀಪಿಸಿದಾಗ ಕುಂಬ್ರ ಕಟ್ಟೆಯಲ್ಲಿ ಕುಂಬ್ರ ಜೂನಿಯರ್ ಚೇಂಬರ್‌ನವರಿಂದ ಮತ್ತು ಪುರಂದರ ರೈ, ಡಾ| ಮುರಳಿಕೃಷ್ಣ ರೈಯವರಿಂದ ಸ್ವಾಗತ, ಸಭಾಕಾರ್ಯ ನಡೆಸಿ ಬೀದಿನಾಟಕ ಪ್ರದರ್ಶಿತವಾಗಿ ಕೆದಂಬಾಡಿಯ ದೇವಸ್ಥಾನದಲ್ಲಿ ಶುಚಿರುಚಿಯಾದ ಊಟೋಪಚಾರ ತಂಡದವರಿಗೆ ಲಭಿಸಿತು.

ಮರುದಿನ ಏಪ್ರಿಲ್ ಮೊದಲ ತೇದಿ. ಸಂಜೆ ತುಸು ಮೋಡ, ತುಂತುರು ಹನಿಗಳ ನಡುವೆ ಕುಂಬ್ರದ ಜೇಸಿಯವರ ಸಹಭಾಗಿತ್ವದಲ್ಲಿ ತಂಡ ಮೂರನೆಯ ದಿನದ ನಡಿಗೆಯಲ್ಲಿ ಪುತ್ತೂರಿಗೆ ಪ್ರಯಾಣ ಬೆಳೆಸಿತ್ತು. ಇಂದು ಕೇವಲ ಹತ್ತು ಕಿಲೋಮೀಟರ್ ದಾರಿ ನಡೆಯುವುದಿದ್ದು, ಈ ಸಪ್ತಾಹದಲ್ಲಿಯೇ ಇದು ಕನಿಷ್ಠ ದೂರವಾಗಿದ್ದಿತು. ಇಂದು ಡಾ| ಚಂದ್ರಶೇಖರ ದಾಮ್ಲೆ ಕುಂಬ್ರದಿಂದ ಪುತ್ತೂರವರೆಗೆ ತಂಡದೊಡನೆ ನಡೆದರು. ತಂಡ ಇನ್ನೂ ಬೆಳಕಿದ್ದಂತೆಯೇ ಪುತ್ತೂರಿನ ಹೊರ ವಲಯ ಪ್ರವೇಶಿಸಿತು. ಸುಭದ್ರಾ ಕಲ್ಯಾಣ ಮಂಟಪದ ಮಾಲಿಕ ಪಿ. ಕೆ. ಎಸ್. ಭಟ್ ಆದರದಿಂದ ತಂಡದವರನ್ನು ಬರಮಾಡಿಕೊಂಡು ತಿಂಡಿ ಕಾಫಿಗಳನ್ನಿತ್ತು ಉಪಚರಿಸಿದರು. ಅಲ್ಲಿಂದ ಸಂಜೆ ಏಳಕ್ಕೆ ಪುತ್ತೂರು ಸ್ವಾಗತ ಸಮಿತಿಯ ಅಧ್ಯಕ್ಷರಾದ ಬೋಳಂತ ಕೋಡಿ ಈಶ್ವರ ಭಟ್ಟ ಮತ್ತಿತರರು. ಕೆ. ಎಸ್. ಆರ್. ಟಿ. ಸಿ.ಯ ಗಾಂಧಿಕಟ್ಟೆಯ ಬಳಿ ಹಾರ್ದಿಕವಾಗಿ ಸ್ವಾಗತಿಸಿದರು. ಸಭಾ ಕಾರ್ಯಕ್ರಮ ನಡೆದು ದೇವಿಪ್ರಸಾದ್ ಸಂಪಾಜೆ ಮತ್ತು ತುದಿಯಡ್ಕ ವಿಷ್ಣ್ವಯ್ಯ ಅಮರಕ್ರಾಂತಿ ಬಗೆಗಿನ ಇತಿಹಾಸವನ್ನು ಜನರ ಮುಂದಿಟ್ಟರು.

ಈ ಸಭೆಯ ಅಧ್ಯಕ್ಷಸ್ಥಾನದಿಂದ ಮಾತನಾಡಿದ ಬೋಳಂತ ಕೋಡಿ ಈಶ್ವರಭಟ್ಟರು ಈ ಚಾರಿತ್ರಿಕ ಹೋರಾಟದ ವಿವರಗಳನ್ನು ಗ್ರಂಥ ರೂಪದಲ್ಲಿ ಪ್ರಕಟಿಸಬೇಕು. ಆಗ ಮಾತ್ರ ಹಿಂದಿನ ಘಟನೆಗಳ ಚಿರಸ್ಮರಣೆ ಸಾಧ್ಯ ಎಂದು ಆಶಿಸಿದರು. ಈ ಸಮಾರಂಭದಲ್ಲಿ ವಿ. ಬಿ. ಅರ್ತಿಕಜೆ, ಎ. ಜೀವನ ಭಂಡಾರಿ, ಎನ್. ಸುಬ್ರಹ್ಮಣ್ಯಂ, ಐ. ಕೆ. ಬೊಳುವಾರು, ಬಿ. ಪುರಂದರ ಭಟ್, ಕಲಾವತಿ ಪೂವಪ್ಪ, ಪ್ರೊ| ಲೀಲಾಭಟ್, ಪ್ರೊ| ಹರಿನಾರಾಯಣ ಮಾಡಾವು, ವಿಜಯಕುಮಾರ್ ಮೊಳೆಯಾರ, ಚಿದಾನಂದ ಬೈಲಾಡಿ, ಕೃಷ್ಣಪ್ರಸಾದ್ ಆಳ್ವ, ಶ್ರೀಶಕುಮಾರ್, ಜಗನ್ನಿವಾಸ ರಾವ್, ಸತೀಶ್‌ರಾವ್, ಬಿ. ಜೆ. ಸುವರ್ಣ, ಐತಪ್ಪ ನಾಯ್ಕ ಮೊದಲಾದ ಗಣ್ಯರು ಉಪಸ್ಥಿತರಿದ್ದರು. ಪ್ರಧಾನ ಕಾರ್ಯದರ್ಶಿ ಜನಾರ್ದನ ಕಣಕ್ಕೂರು ಕಾರ್ಯಕ್ರಮ ನಿರ್ವಹಿಸಿ ವಂದನಾರ್ಪಣೆಗೈದರು.

ಐ. ಕೆ. ಬೊಳುವಾರರ ಸಮರ್ಥ ಬೆಳಕಿನ ವ್ಯವಸ್ಥೆಯೊಡನೆ ಜೀವನ್ ರಾಂ ಬಳಗದವರಿಂದ ಡಾ| ಶಿಶಿಲ ವಿರಚಿತ ಬೀದಿನಾಟಕ ಪ್ರದರ್ಶನ ಜರಗಿತು. ಈ ಕಾರ್ಯಕ್ರಮಕ್ಕೆ ಪುತ್ತೂರಿನ ಬುದ್ಧಿಜೀವಿಗಳು ಕೊಟ್ಟ ಪ್ರೋತ್ಸಾಹ ಅವಿಸ್ಮರಣೀಯವಾದುದು.

ದಿನಾಂಕ 02-04-98ರ ಸಂಜೆ ಪುತ್ತೂರು ಸ್ವಾಗತ ಸಮಿತಿಯಿಂದ ಬೀಳ್ಕೊಂಡು ಕಬಕದ ಮಾರ್ಗವಾಗಿ ಮಾಣಿಯ ಎಡೆಗೆ ಜಾಥಾ ಸಾಗಿತು. ಪುತ್ತೂರು ಸ್ವಾಗತ ಸಮಿತಿಯ ಹಲವರು ಹಾಗೂ ಪ್ರಾಂಶುಪಾಲ ಮೊರಬದ ಮಲ್ಲಿಕಾರ್ಜುನ ಜಾಥಾದ ಜೊತೆಗಿದ್ದರು. ನೇರಳೆಕಟ್ಟೆಯಿಂದ ಮಾಣಿಯವರೆಗೆ 200 ದೊಂದಿಗಳ ಬೆಳಕಲ್ಲಿ ಬ್ಯಾಂಡು -ಓಲಗ - ಕೊಂಬು - ಕಹಳೆಗಳೊಡನೆ ಜಾಥಾವನ್ನು ಮಾಣಿ ಸಂತೆ ಮೈದಾನದಲ್ಲಿ ಮಾಣಿ ಜೇಸಿಸ್‌ನವರು ಹೃತ್ಪೂರ್ವಕವಾಗಿ ಬರಮಾಡಿಕೊಂಡರು. ಮಾಣಿಯಲ್ಲಿ ಯುವ ಮುಂದಾಳು ಲೋಕೇಶ್ ಪೆರ್ಗಡೆ ತುಂಬಾ ಮುತುವರ್ಜಿ ವಹಿಸಿದ್ದರು. ಅತ್ಯುತ್ತಮವಾಗಿ ಸಭಾಕಾರ್ಯಕ್ರಮ ಮತ್ತು ಬೀದಿನಾಟಕಗಳ ಪ್ರದರ್ಶನಕ್ಕೆ ವ್ಯವಸ್ಥೆಯ ಜೊತೆಗೆ ಊಟೋಪಚಾರಗಳನ್ನು ನೀಡಿ ಸತ್ಕರಿಸಿದರು. ಪ್ರಧಾನ ಕಾರ್ಯದರ್ಶಿ ಜನಾರ್ದನ ಕಣಕ್ಕೂರ್ ಮಾಣಿಯ ಜನರ ಸಹೃದಯತೆಗೆ ತುಂಬು ಹೃದಯದ ಕೃತಜ್ಞತೆ ಸೂಚಿಸಿದರು.

ಮಾರನೆಯ ದಿನ ತಾರೀಕು 3ನೆಯ ಏಪ್ರಿಲ್ 98ರ ಸಂಜೆ ಮಾಣಿಯ ಸಜ್ಜನರಾದ ಲೋಕೇಶ್ ಪೆರ್ಗಡೆ ಮತ್ತು ಮಿತ್ರರಿಗೆ ವಿದಾಯ ಹೇಳಿ ಜಾಥಾ ತಂಡ ಮಾಣಿಯಿಂದ ನಂದಾವರಕ್ಕೆ ಪ್ರಯಾಣ ಬೆಳೆಸಿತು. ಬಂಟ್ವಾಳ ತಾಲೂಕು ಕಛೇರಿ ಮುಂಭಾಗದ ರಂಗಮಂದಿರದಲ್ಲಿ ಬಂಟ್ವಾಳ ದೇವಾಲಯ ಸಮಿತಿ, ಜಿಲ್ಲಾ ಯುವಜನ ಒಕ್ಕೂಟ ಮತ್ತು ಬಂಟ್ವಾಳ ರೋಟರಿ, ಲಯನ್ಸ್, ಜೇಸಿಸ್ ಸಂಸ್ಥೆಗಳ ಸಹಯೋಗದಲ್ಲಿ ಪದ್ಮರಾಜ ಕರ್ಕೇರರ ಮುಂದಾಳತ್ವದಲ್ಲಿ ಸಭಾಕಾರ್ಯಕ್ರಮ ಮತ್ತು ಬೀದಿನಾಟಕಗಳ ಪ್ರದರ್ಶನ ವ್ಯವಸ್ಥೆ ಮಾಡಲಾಗಿತ್ತು. ಸ್ವಾತಂತ್ರ್ಯ ಯೋಧರಾದ ಅಮ್ಮೆಂಬಳ ಬಾಳಪ್ಪನವರು ಸಭೆಯಲ್ಲಿ ಮಾತನಾಡಿದರು. ನಂದಾವರ ದೇವಾಲಯದ ವಠಾರದಲ್ಲಿ ತಂಡದವರಿಗೆ ಎರಡು ದಿನಗಳವರೆಗೆ ಊಟ ವಸತಿ ಸೌಕರ್ಯಗಳನ್ನು ಧರ್ಮದರ್ಶಿ ಎ. ಸಿ. ಭಂಡಾರಿಯವರು ಕಲ್ಪಿಸಿಕೊಟ್ಟರು. ಹರಿ-ಹರ ಅಭೇದ್ಯ ದೈವದ, ನೇತ್ರಾವತಿ ದಂಡೆಯ ಪ್ರಕೃತಿ ಪರಿಸರದ ನಂದಾವರ ಜಾಥಾದವರಿಗೆ ಪ್ರಿಯವಾದ ತಾಣವಾಯಿತು. ಸುಳ್ಯದ ನೆಹರೂ ಸ್ಮಾರಕ ಮಹಾವಿದ್ಯಾಲಯದ ಹಳೆಯ ವಿದ್ಯಾರ್ಥಿಗಳಾಗಿದ್ದು ಪ್ರಸ್ತುತ ವಿಟ್ಲದಲ್ಲಿ ಉಪನ್ಯಾಸಕರಾಗಿರುವ ಪ್ರಕಾಶ್ಚಂದ್ರ ಶಿಶಿಲ, ರೋಶನಿ ನಿಲಯದಲ್ಲಿ ಸ್ನಾತಕೋತ್ತರ ಪದವಿಗೆ ಅಭ್ಯಸಿಸುತ್ತಿದ್ದ ಉಮ್ಮರ್, ಪುಟ್ಟಣ್ಣ ಕಥೆಗಾರ ಜನಾರ್ದನ ಎರ್ಪಕಟ್ಟೆ, ಉಪನ್ಯಾಸಕ ಪೂವಪ್ಪ ಕಣಿಯೂರು, ಸೂರಜ್, ಪ್ರೊ| ಕೈಕಂಬ ಸುಬ್ಬಪ್ಪ

ಮೊದಲಾದವರು ಮುಂದಿನೆರೆಡು ದಿನಗಳಿಗಾಗಿ ಜಾಥಾ ತಂಡವನ್ನು ಕೂಡಿಕೊಂಡು ಜೊತೆಗೆ ನಡೆದರು.

ಅಂತಿಮದಿನದ ಕಾರ್ಯಕ್ರಮದ ಅಂಗವಾಗಿ ನಂದಾವರದಿಂದ ಫರಂಗೀಪೇಟೆಗೆ ಜಾಥಾ ನಡೆಯಿತು. ಮಾರಿಪಳ್ಳದ ಬಳಿ ಪಥ ನಡೆಯುವರಿಗೆ ತಂಗುದಾಣವನ್ನು ವಿರಚಿಸಿ ಫಲಪುಷ್ಪಗಳನ್ನಿರಿಸಿಕೊಂಡು ತಂಡದವರನ್ನು ಕೃಷ್ಣಕುಮಾರ್ ಪೂಂಜ, ಮಹಾಬಲ ಶೆಟ್ಟಿ, ಪೂವಪ್ಪ, ಶ್ರೀರಾಂ ಶೆಣೈ, ಮಂಜು ವಿಟ್ಲ ಮುಂತಾದವರು ಹೃದಯಸ್ಪರ್ಶಿಯಾಗಿ ಸ್ವಾಗತಿಸಿದರು. ಸ್ಥಳೀಯ ಶಾರದೋತ್ಸವ ಸಮಿತಿಯ ಮಿಂಚಿನ ಸಂಚಾರದೊಡನೆ ಚಿಕ್ಕ ಊರು ಫರಂಗಿಪೇಟೆಯಲ್ಲಿ ಜನ ದಟ್ಟಯಿಸಿತು. ನಾಟಕ ಅಕಾಡೆಮಿಯ ಮಾಜಿ ಸದಸ್ಯರಾದ ಡಾ| ನಾ ದಾಮೋದರ ಶೆಟ್ಟಿ ಬೀದಿನಾಟಕ ವೀಕ್ಷಣೆಗೆಂದು ಫರಂಗಿಪೇಟೆಗೆ ಮಂಗಳೂರಿನಿಂದ ಬಂದಿದ್ದರು. ಅಂದು ರಾತ್ರಿ ಫರಂಗಿಪೇಟೆಯ ಸಭಾಕಾರ್ಯಕ್ರಮಗಳ ಕಡೆಯಲ್ಲಿ ಆ ಮಾರ್ಗದಲ್ಲಿ ಪಯಣಿಸುತ್ತಿದ್ದ ಕರ್ನಾಟಕ ರಾಜ್ಯದ ಮಾಜಿ ಮುಖ್ಯಮಂತ್ರಿ ಎಂ. ವೀರಪ್ಪ ಮೊಯ್ಲಿಯವರು ತಮ್ಮ ಸಹ ಶಾಸಕರೊಡನೆ ಆಗಮಿಸಿ ಎಲ್ಲರಿಗೂ ಶುಭಕೋರಿದರು. ಮರುದಿನ ಮಂಗಳೂರಿನ ಅಲೋಶಿಯಸ್ ಕಾಲೇಜು ಮೈದಾನದಲ್ಲಿ ಜರುಗಲಿರುವ ಸಮಾರೋಪ ಕಾರ್ಯಕ್ರಮದಲ್ಲಿ ತಾವು ಭಾಗಿಗಳಾಗುವುದಾಗಿ ಭರವಸೆಯಿತ್ತರು. ಸಮಿತಿಯ ಪರವಾಗಿ ಪ್ರಧಾನ ಕಾರ್ಯದರ್ಶಿ ಜನಾರ್ದನ ಕಣಕ್ಕೂರು ಎಲ್ಲರಿಗೂ ಧನ್ಯವಾದ ಸಮರ್ಪಿಸಿದರು. ಕೃತಕೃತ್ಯತೆಯ ಭಾವದಿಂದ ತಂಡ ನಂದಾವರದ ಶ್ರೀ ದೈವಸನ್ನಿಧಿಗೆ ಹಿಂದಿರುಗಿ ದೇವಾಲಯ ಪ್ರಾಂಗಣದ ಪರಿಪ್ಲುತವೂ ಪವಿತ್ರವೂ ಆದ ವಾತಾವರಣದಲ್ಲಿ ಅಂದಿನ ರಾತ್ರಿಯನ್ನು ಕಳೆಯಿತು. ನಂದಾವರ ದೇವಳದ ಆಡಳಿತ ಮೊಕ್ತೇಸರರಾದ ಎ. ಸಿ. ಭಂಡಾರಿಯವರು ಈ ಎರಡು ದಿನಗಳ ಊಟ-ವಸತಿ ಸೌಕರ್ಯಗಳನ್ನು ಪ್ರೀತಿಯಿಂದ ಮಾಡಿದರು. ಅವರಿಗೆ ತಂಡ ತುಂಬು ಕೃತಜ್ಞತೆ ಸಲ್ಲಿಸಿತು.

ಜಾಥಾ ಕಾರ್ಯಕ್ರಮದ ಅಂತಿಮ ದಿನವಾದ ಏಪ್ರಿಲ್ ಐದು ಅತ್ಯಂತ ಮಹತ್ವದ ದಿನ. ಜಾಥಾ ಕ್ರಮಿಸಿದ ಈವರೆಗಿನ ಆರು ದಿನಗಳಲ್ಲಿಯೂ ತಂಡದವರು ಸಂಜೆದಾರಿ ನಡೆದು ರಾತ್ರಿ ಸಭಾಕಾರ್ಯಕ್ರಮ ಬೀದಿನಾಟಕಗಳನ್ನು ನಡೆಸುತ್ತಿದ್ದರೆ, ಏಳನೆಯ ಕಡೆಯ ದಿನವಾದ ಇಂದು ನಸುಕಿನಲ್ಲಿ ನಡೆದು ಏರು ಹಗಲಿನಲ್ಲಿ ಮಂಗಳೂರು ನಗರ ಪ್ರವೇಶ ಮಾಡಿ ಬಿಕರ್ನಕಟ್ಟೆಯಲ್ಲಿ ಹುತಾತ್ಮರಿಗೆ ಶ್ರದ್ಧಾಂಜಲಿ ಸಲ್ಲಿಸಿ ಬಾವುಟಗುಡ್ಡೆಯಲ್ಲಿ ಧ್ವಜಾರೋಹಣ ಮತ್ತು ಸಮಾರೋಪ ಕಾರ್ಯಕ್ರಮಗಳನ್ನು ನೆರವೇರಿಸಬೇಕಿದ್ದಿತು. ಹಾಗಾಗಿ ತಂಡದವರು ನಂದಾವರದ ಶ್ರೀ ದೈವ ಸನ್ನಿಧಿಯಲ್ಲಿ ಮೊದಲ ಕೋಳಿಯ ಸುಪ್ರಭಾತದೊಡನೆ ಎಚ್ಚೆತ್ತು, ನೇತ್ರಾವತಿಯಲ್ಲಿ ಮಿಂದು ಹರಿ-

ಹರರಿಗೆ ನಮಿಸಿ ಫರಂಗಿಪೇಟೆ ಮತ್ತು ಅಲ್ಲಿಂದ ಮಂಗಳೂರಿಗೆ ಅಭಿಮುಖರಾಗಿ ನಡೆದರು. ಬಿಸಿಲು ಅಡರುತ್ತಿದ್ದಂತೆಯೇ ಬೆಳಿಗ್ಗೆ ಎಂಟರ ಸುಮಾರಿಗೆ ಹಿಂದೆಮುಂದೆ ವೇಗವಾಗಿ ಚಲಿಸುತ್ತಿದ್ದ ವಾಹನಗಳ ನಡುವೆ ಜಾಥಾ ತಂಡ ಮಂಗಳೂರು ನಗರದ ಗಡಿಯಲ್ಲಿದ್ದ ಕಣ್ಣೂರು ದಾಟಿತು. ಪಡೀಲ್ ಬಳಿಯ ಸರ್ಕೀಟ್‌ಹೌಸ್ ವೃತ್ತಕ್ಕೆ ಜಾಥಾ ಸಾಗಿತು. ರವಿವಾರವಾಗಿದ್ದುದರಿಂದ ಅಲ್ಲಿ ಮಂಗಳೂರಿನ ಸ್ವಾಗತ ಸಮಿತಿಯ ನಾಗರಿಕರು ಹೆಚ್ಚಿನ ಸಂಖ್ಯೆಯಲ್ಲಿ ಸೇರಿ ಆತ್ಮೀಯವಾಗಿ ಜಾಥಾ ತಂಡವನ್ನು ಸ್ವಾಗತಿಸಿದರು.

ಮಂಗಳೂರು ನಗರದಲ್ಲಿ ಉದ್ಯೋಗ-ವ್ಯಾಪಾರ ನಿಮಿತ್ತ ನೆಲಸಿಗರಾಗಿರುವ ಸುಳ್ಯ, ಪುತ್ತೂರು ತಾಲೂಕು ಮೂಲದ ಲೋಕಯ್ಯ ಗೌಡ, ಬಿ. ಎಂ. ಮಾಧವ, ರಾಮಚಂದ್ರ ನೀರಬಿದ್ರೆ, ಗಿರೀಶ್ ಮೊದಲಾದ ಹಲವು ಗಣ್ಯ ನಾಗರಿಕರು ಮತ್ತು ದ. ಕ. ಗೌಡ ಸಮಾಜದ ಮುಂದಾಳುಗಳು ಈ ಸಾಂಸ್ಕೃತಿಕ ರಾಯಭಾರಿಗಳನ್ನು ಗೌರವಿಸಲು ಅಭಿಮಾನದಿಂದ ಅಲ್ಲಿಗೆ ಆಗಮಿಸಿದ್ದರು. ಜಾಥಾ ತಂಡದವರಿಗೆ ಶ್ರೀಗಂಧದ ಹಾರಗಳನ್ನು ಹಾಕಿ, ಗುಲಾಬಿಗುಚ್ಛಗಳನ್ನು ಮೂಸಂಬಿ - ಕಿತ್ತಳೆ ಹಣ್ಣುಗಳನ್ನು ನೀಡಿ ಗೌರವಿಸಿದರು. ವಾಸುದೇವ ಗೌಡರು ತಂಪು ಪಾನೀಯ ನೀಡಿದ ಬಳಿಕ ಎಲ್ಲರೂ ಕೂಡಿ ಉದ್ದ ಸರತಿಯಲ್ಲಿ ಬೈಪಾಸ್ ರಸ್ತೆಯಲ್ಲಿ ಬಿಕರ್ನಕಟ್ಟೆಯತ್ತ ಶ್ರದ್ಧಾಂಜಲಿ ಅರ್ಪಣೆಗಾಗಿ ಸಾಗಿದರು.

ಅಮರಕ್ರಾಂತಿ ವೀರರನ್ನು ಗಲ್ಲಿಗೇರಿಸಿ ಭೀಕರ ಕಣ್ಣೀರಿನ ಕಟ್ಟೆಯಾಗಿದ್ದ ಹುತಾತ್ಮರ ಸ್ಮಾರಕವಿಲ್ಲದ ಪವಿತ್ರ ಬಿಕರ್ನಕಟ್ಟೆಯ ಬಳಿ ಸ್ಥಳೀಯ ನಾಗರಿಕರೂ ನೂರಾರು ಮಂದಿ ಸೇರಿ ಶೋಕತಪ್ತ ಗದ್ಗದಿತ ಭಾವನೆಯೊಡನೆ ಪುಷ್ಪವಿರಿಸಿ ಶ್ರದ್ಧಾಂಜಲಿಯನ್ನು ಸಮರ್ಪಿಸಿದರು. ಅಲ್ಲಿಂದ ಧ್ವಜಾರೋಹಣ ಮತ್ತು ಸಮಾರೋಪಗಳಿಗಾಗಿ ಸಂತ ಅಲೋಶಿಯಸ್ ಕಾಲೇಜಿನ ಆವರಣಕ್ಕೆ ಸಾಗಿ ಬರುವಾಗ ನಗರ ನಾಗರಿಕ ಬಂಧುಗಳು ಜಾಥಾ ತಂಡದವರಿಗೆ ತಂಪು ಪಾನೀಯ ಮತ್ತು ಪಾನಕಗಳನ್ನು ನೀಡಿದರು. ಧ್ವನಿವರ್ಧಕ ಘೋಷಣೆ ಮತ್ತು ಬ್ಯಾನರ್ಸ್ ಹಾಗೂ ಧ್ವಜ ಲಾಂಛನಗಳೊಡನೆ ನಗರದ ಪ್ರಮುಖ ಬೀದಿಗಳಲ್ಲಿ ಮೆರವಣಿಗೆ ಸಾಗಿ ಏರುಹಗಲು ಹತ್ತು ಗಂಟೆಗೆ ಬಾವುಟಗುಡ್ಡೆಯಲ್ಲಿರುವ ಸಂತ ಅಲೋಶಿಯಸ್ ಕಾಲೇಜಿನ ಆವರಣವನ್ನು ಪ್ರವೇಶಿಸಿತು. ಇಲ್ಲಿಗೆ ಸುಳ್ಯದಿಂದ ಹಲವು ಗಣ್ಯರು ಬಂದಿದ್ದರು. ನಿವೃತ್ತ ಪೋಲೀಸ್ ಅಧಿಕಾರಿ ಚಂಡಿರ ರಾಮಪ್ಪ, ಸುಳ್ಯದ ಮಾಜಿ ಮಂಡಲ ಪ್ರಧಾನ ಬಾಲಕೃಷ್ಣ ಗೌಡ, ವಿದ್ವಾನ್ ತುದಿಯಡ್ಕ ವಿಷ್ಣ್ವಯ್ಯ, ಎಂ. ಜಿ. ಕಜೆ, ವಿದ್ಯಾಧರ ಬಡ್ಡಡ್ಕ, ವೆಂಕಟ್ ವೋಂಟಡ್ಕ, ಹೇಮಾವತಿ ವಳಲಂಬೆ, ಮೆಂಡೋನ್ಸಾ ಹಿಮಕರ ಮೊದಲಾದವರು ಆಗಮಿಸಿದ್ದರು. ಅಲೋಶಿಯಸ್ ಕಾಲೇಜಿನ ಆವರಣದಲ್ಲಿ ನಡೆದ ಧ್ವಜಾರೋಹಣ ಮತ್ತು ಸಭಾಕಾರ್ಯಕ್ರಮಗಳ

ಯಶಸ್ಸಿನ ಹಿನ್ನಲೆಯಲ್ಲಿ ಪ್ರಾಚಾರ್ಯ ರೆ. ಫಾ. ಪ್ರಶಾಂತ್ ಮಾಡ್ತಾ, ಪ್ರೊ. ನಾ. ದಾ. ಶೆಟ್ಟಿ ಮತ್ತು ಡಾ. ವಿಶ್ವನಾಥ ಬದಿಕ್ಕಾನರ ಪರಿಶ್ರಮವಿದ್ದಿತು.

ಕಾರ್ಯಕ್ರಮಕ್ಕೆ ಮಂಗಳೂರು ಸುತ್ತಮುತ್ತಣ ಸ್ಥಳಗಳಿಂದ ಜಿಲ್ಲಾ ಉಸ್ತುವಾರಿ ಸಚಿವ ಬಿ. ಎ. ಮೊಯಿದೀನ್, ಮಾಜಿ ಮುಖ್ಯಮಂತ್ರಿ ಎಂ. ವೀರಪ್ಪ ಮೊಯಿಲಿ, ಮಾಜಿ ಸಚಿವ ಬ್ಲೇಸಿಯಸ್ ಡಿ'ಸೋಜ, ಶಾಸಕರುಗಳಾದ ಶ್ರೀ ಕುಂಬ್ಳೆ ಸುಂದರರಾವ್, ಶ್ರೀ ಅಭಯಚಂದ್ರ, ಸ್ವಾತಂತ್ರ್ಯ ಹೋರಾಟಗಾರರಾದ ಶ್ರೀ ಸಂಜೀವನಾಥ ಐಕಳ, ಅಮ್ಮೆಂಬಳ ಬಾಳಪ್ಪ ಮೊದಲಾದವರು ಉಪಸ್ಥಿತರಿದ್ದರು.

ಸಮಾರೋಪ ಸಭಾಕಾರ್ಯಕ್ರಮದ ಆರಂಭದಲ್ಲಿ ಅಮರಕ್ರಾಂತಿ ಉತ್ಸವ ಸಮಿತಿಯ ಅಧ್ಯಕ್ಷರಾದ ದೇವಿಪ್ರಸಾದ್ ಸಂಪಾಜೆಯವರು 161 ವರ್ಷಗಳ ಹಿಂದೆ ನಗರದ ಬಾವುಟಗುಡ್ಡೆಯ ಇದೇ ಸ್ಥಳದಲ್ಲಿ ಇದೇ ಏಪ್ರಿಲ್ ಐದರ ಪುಣ್ಯದಿನ ಕ್ರಾಂತಿಕಾರರು ಧ್ವಜಾರೋಹಣಗೈದಿರುವುದನ್ನು ಸ್ಮರಿಸಿ ಇಂದು ಮತ್ತೆ ಧ್ವಜಾರೋಹಣಗೈದರು. ಸಮಾರೋಪದಲ್ಲಿ ಪ್ರಾಸ್ತಾವಿಕವಾಗಿ ಮಾತನಾಡಿದ ಅವರು ಸ್ವಾತಂತ್ರ್ಯ ಹೋರಾಟಗಾರರ ಬಗ್ಗೆ, ಕಲ್ಯಾಣಪ್ಪನ ಬಗ್ಗೆ ಜನರಿಗೆ ನಿಜ ಅರಿವು ದೊರಕಿಲ್ಲ. ಅವನೊಬ್ಬ ಲೂಟಿಕೋರನೆಂದು ಚಿತ್ರಿಸಲಾಗಿದೆ. ಆದರೆ ಬ್ರಿಟಿಷರ ವಿರುದ್ಧ ಜನರನ್ನು ಸಂಘಟಿಸಿದ ಕಲ್ಯಾಣಪ್ಪನನ್ನು ಮತ್ತು ಅವನ ಜೊತೆಗಾರರನ್ನು ಮತ್ತೆ ನೆನಪಿಸಿಕೊಳ್ಳುವುದು ನಮ್ಮ ಕರ್ತವ್ಯ ಎಂದರು. ಅಮರಕ್ರಾಂತಿ ಜಾಥಾದ ಬಗ್ಗೆ ಎಂ. ಬಿ. ಸದಾಶಿವ ಸಂಕ್ಷಿಪ್ತ ವರದಿ ನೀಡಿ ಮಾರ್ಚ್ 30ರಂದು ಸುಳ್ಯದಲ್ಲಿ ಆರಂಭಗೊಂಡ ಜಾಥಾ ಪ್ರತಿದಿನ ಕ್ರಮವಾಗಿ ಬೆಳ್ಳಾರೆ, ಕುಂಬ್ರ, ಪುತ್ತೂರು, ಮಾಣಿ, ನಂದಾವರ, ಫರಂಗಿ ಪೇಟೆಗಳ ಮಾರ್ಗವಾಗಿ ನಡೆದು ಏಳನೆಯ ದಿನವಾದ ಇಂದು ಮಂಗಳೂರು ತಲುಪಿದೆ. ಜಾಥಾ ಹಾದು ಬಂದ ದಾರಿಯುದ್ದಕ್ಕೂ ಉತ್ತಮ ಪ್ರತಿಕ್ರಿಯೆ ವ್ಯಕ್ತವಾಗಿದ್ದು ಅಮರಕ್ರಾಂತಿಯ ಸಂದೇಶ ಸಾರುವ ಬೀದಿ ನಾಟಕ - ಹಾಡು ಮತ್ತು ಉಪನ್ಯಾಸಗಳು ಜನತೆಯನ್ನು ಪ್ರಚೋದಿಸಿವೆ ಎಂದರು.

ಸಭೆಯಲ್ಲಿ ಮಾತನಾಡಿದ ಸುಳ್ಯದ ಹಿರಿಯ ವಿದ್ವಾಂಸ ತುದಿಯಡ್ಕ ವಿಷ್ಣ್ವಯ್ಯನವರು 161 ವರ್ಷಗಳ ಹಿಂದೆ ನಡೆದ ಅಮರ ಸುಳ್ಯ ದಂಗೆ ಮರೆಯಲಾಗದ ಘಟನೆಯಾಗಿದ್ದು ಇದು ಚರಿತ್ರೆಯ ಪುಟಗಳಲ್ಲಿ ಮತ್ತು ಪಠ್ಯಪುಸ್ತಕಗಳಲ್ಲಿ ಸೇರ್ಪಡೆಗೊಳ್ಳಲು ಅರ್ಹವಾದ ವಿಚಾರವಾಗಿದೆ ಎಂದು ಅಭಿಪ್ರಾಯಪಟ್ಟರು.

ಈ ಸಮಾರೋಪ ಸಮಾರಂಭದ ಮುಖ್ಯ ಅತಿಥಿಯಾಗಿ ಮಾತನಾಡಿದ ಸಚಿವ ಬಿ. ಎ. ಮೊಯಿದೀನ್ ಅವರು, ದೇಶಕ್ಕೆ ದೊರೆತಿರುವ ರಾಜಕೀಯ ಸ್ವಾತಂತ್ರ್ಯದ

ಫಲವನ್ನು ಅನುಭವಿಸುತ್ತಿರುವ ಹೊಸ ಪೀಳಿಗೆಗೆ ಸ್ವಾತಂತ್ರ್ಯದ ಹಿಂದಿರುವ ಹೋರಾಟದ ಕಲ್ಪನೆ ಇಲ್ಲ. ಅವರಿಗೆ ಈ ಕುರಿತು ತಿಳಿಸುವವರು ಕೂಡ ಇಲ್ಲವಾಗಿದ್ದಾರೆ. ಇಂದಿನ ರಾಜಕಾರಣದ ಉದ್ದೇಶ ವೋಟ್ ಬ್ಯಾಂಕ್ ಆಗಿ ಪರಿವರ್ತನೆಗೊಂಡಿದ್ದು ಹಿಂದಿನವರ ತ್ಯಾಗ ಬಲಿದಾನಗಳಿಗೆ ಪ್ರಾಮುಖ್ಯತೆ ಇಲ್ಲವಾಗಿದೆ. ಮಾಧ್ಯಮಗಳಿಗೆ ಕೂಡ ಇದು ಹಳಸಿದ ವಿಚಾರವಾಗಿದೆ. ಇದು ತುಂಬಾ ಬೇಸರದ ಸಂಗತಿ. ಸ್ವಾತಂತ್ರ್ಯ ಹೋರಾಟದ ಸ್ಫೂರ್ತಿ ನಮ್ಮ ಮುಂದಿನ ಜನಾಂಗಕ್ಕೆ ದಾರಿದೀಪ ಆಗಬೇಕು. ಈ ದಿಶೆಯಲ್ಲಿ ಸುಳ್ಯದ ಅಮರಕ್ರಾಂತಿ ಉತ್ಸವ ಸಮಿತಿ ಹಮ್ಮಿಕೊಂಡಿರುವ ಕಾರ್ಯಕ್ರಮ ಸ್ತುತ್ಯರ್ಹ. ಸಮಿತಿಯ ಯೋಜನೆಗಳಿಗೆ ತನ್ನಿಂದಾಗುವ ಸಹಾಯ ನೀಡುತ್ತೇನೆ. ಈ ನಿಟ್ಟಿನಲ್ಲಿ ಪ್ರಮುಖ ಮಾಧ್ಯಮವಾದ ಬೀದಿನಾಟಕಕ್ಕೆ ಸರಕಾರ ಮೂಲ ಸೌಲಭ್ಯಗಳನ್ನು ಒದಗಿಸಲಿದೆ ಎಂದು ಹೇಳಿದರು.

ಮತ್ತೋರ್ವ ಅತಿಥಿ ಮಾಜಿ ಮುಖ್ಯಮಂತ್ರಿ ವೀರಪ್ಪ ಮೊಯಿಲಿಯವರು ಕೆಲವು ಪಟ್ಟಭದ್ರ ಹಿತಾಸಕ್ತಿಗಳು ನಮ್ಮ ಚರಿತ್ರೆಯನ್ನು ವಿಕೃತಗೊಳಿಸಿದ್ದರಿಂದಾಗಿ ದೇಶದ ಜನತೆ ತಪ್ಪುದಾರಿ ಹಿಡಿದಿದ್ದಾರೆ. ಚರಿತ್ರೆಯನ್ನು ಪುನಾರಚಿಸುವ ಕೆಲಸ ಈಗ ಆಗಬೇಕಿದೆ ಎಂದು ಹೇಳಿ ಸುಳ್ಯದ ಅಮರದಂಗೆಯ ಕುರಿತು ಇನ್ನಷ್ಟು ಅಧ್ಯಯನ ನಡೆಸುವಂತಾಗಲು ಮಂಗಳೂರು ವಿಶ್ವವಿದ್ಯಾನಿಲಯದಲ್ಲಿ ಈ ಕುರಿತು ಪೀಠವೊಂದನ್ನು ಸ್ಥಾಪಿಸಬೇಕು. ಈ ಬಗ್ಗೆ ಶಿಕ್ಷಣ ಇಲಾಖೆಯ ಜೊತೆ ತಾನು ವಿಚಾರವಿನಿಮಯ ನಡೆಸುತ್ತೇನೆ. ಮತ್ತು ವಿಧಾನಸಭೆಯಲ್ಲಿ ಪ್ರಸ್ತಾವಿಸುತ್ತೇನೆ ಎಂದು ಅಮರಕ್ರಾಂತಿ ಉತ್ಸವ ಸಮಿತಿಯ ಕಾರ್ಯಕ್ರಮಕ್ಕೆ ಮೆಚ್ಚುಗೆ ವ್ಯಕ್ತಪಡಿಸಿ ಅಭಿನಂದಿಸಿದರು.

ಮಾಜಿ ಸಚಿವ ಬ್ಲೇಸಿಯಸ್ ಎಂ. ಡಿ'ಸೋಜಾರವರು ಹಿರಿಯರು ಮಾಡಿದ ಉತ್ತಮ ಕೆಲಸವನ್ನು ಗುರುತಿಸಿ ಕಿರಿಯರಿಗೆ ಆ ಬಗ್ಗೆ ಮಾರ್ಗದರ್ಶನ ನೀಡುವ ಕೆಲಸ ನಮ್ಮಿಂದಾಗಬೇಕು. ನಾವು ಪಾಶ್ಚಾತ್ಯರ ನಕಲು ಹೊಡೆಯುವುದನ್ನು ಬಿಟ್ಟು ನಮ್ಮದೇ ಆದ ಸಂಸ್ಕೃತಿ ಪರಂಪರೆಯ ಬಗ್ಗೆ ಪ್ರೀತಿ-ಪ್ರೇಮವನ್ನು ಹುಟ್ಟಿಸಿಕೊಳ್ಳಬೇಕೆಂದು ಕರೆಯಿತ್ತರು. ಸುರತ್ಕಲ್ ಶಾಸಕರಾದ ಕಲಾವಿದ ಕುಂಬ್ಳೆ ಸುಂದರರಾವ್ ಮಾತನಾಡಿ ಭಾರತದ ಸ್ವಾತಂತ್ರ್ಯ ಹೋರಾಟಕ್ಕೆ ಹಲವು ಮುಖಗಳಿವೆ. ಗಾಂಧೀಜಿಯ ಅಹಿಂಸಾತತ್ವದ ಜೊತೆಗೆ ದೇಶದ ಮೂಲೆ ಮೂಲೆಗಳಲ್ಲಿ ನಡೆದ ದಂಗೆಗಳು ಸ್ವಾತಂತ್ರ್ಯಕ್ಕೆ ಕೊಡುಗೆ ನೀಡಿವೆ. ಈ ನಿಟ್ಟಿನಲ್ಲಿ ಸುಳ್ಯದ ಅಮರದಂಗೆಯು ನಮ್ಮ ಚರಿತ್ರೆಯ ಪುಟಗಳಲ್ಲಿ ದಾಖಲಾಗಲಿ. ಅಮರಕ್ರಾಂತಿ ಉತ್ಸವವನ್ನು ಮತ್ತೆ ಮತ್ತೆ ಆಚರಿಸುವಂತಾಗಲಿ ಎಂದು ಹೇಳಿದರು.

ಸಮಿತಿಯ ಪ್ರಧಾನ ಕಾರ್ಯದರ್ಶಿ ಜನಾರ್ದನ ಕಣಕ್ಕೂರು ಸ್ವಾಗತಿಸಿದರು. ಪ್ರೊ. ಶಿವಣ್ಣ ನೆಲಮನೆ ಎಲ್ಲರಿಗೂ ವಂದಿಸಿದರು. ಡಾ| ಪ್ರಭಾಕರ ಶಿಶಿಲರು

ಕಾರ್ಯಕ್ರಮವನ್ನು ನಿರ್ವಹಿಸಿದರು. ಎಲ್ಲ ಗಣ್ಯರ ಎದುರು ಅಮರಕ್ರಾಂತಿ ಬೀದಿನಾಟಕವನ್ನು ಪ್ರದರ್ಶಿಸುವುದರ ಮೂಲಕ ಅಮರಕ್ರಾಂತಿ ಜಾಥಾದ ಹೊಸ ಅಧ್ಯಾಯವೊಂದು ಕೊನೆಗೊಂಡಂತಾಯಿತು.

## ೨. 1999ರ ನುಡಿ ಮಣಿಹ 'ಅಮರ ಸುಳ್ಯದ ಸ್ವಾತಂತ್ರ್ಯ ಸಮರ' ಕೃತಿ ಬಿಡುಗಡೆ

1998ರ ಜಾಥಾ ಯಶಸ್ವಿಯಾಗಿದ್ದರೂ ಅಂದಿನ ಸ್ವಾತಂತ್ರ್ಯ ಹೋರಾಟಗಾರರ ಕುಟುಂಬದವರ ಮತ್ತು ಸಾರ್ವಜನಿಕರ ಸಹಭಾಗಿತ್ವ ನಿರೀಕ್ಷಿಸಿದಂತೆ ಲಭಿಸಲಿಲ್ಲ. ರಾಜಕೀಯ ನಾಯಕರುಗಳ ಈ ಸಂಬಂಧದ ಆಶ್ವಾಸನೆಗಳೆಲ್ಲ ವಾಸ್ತವವಾಗಲಿಲ್ಲ. ಉತ್ಸವ ಸಮಿತಿಯ ಪದಾಧಿಕಾರಿಗಳು 25-07-98ರಂದು ಅಂದಿನ ಮುಖ್ಯಮಂತ್ರಿಗಳನ್ನು ಭೇಟಿ ಮಾಡಿ ಉತ್ಸವಾಚರಣೆಯ ಶಾಶ್ವತ ಯೋಜನೆಗಳ ವಿತ್ತೀಯ ಅಗತ್ಯಕ್ಕಾಗಿ ಬೇಡಿಕೆ ಮುಂದಿಟ್ಟರು. ಮುಖ್ಯಮಂತ್ರಿ ಕಾರ್ಯಾಲಯ ಈ ಬಗ್ಗೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ಸೂಚನೆ ನೀಡಿತು. ಸಂಸ್ಕೃತಿ ಇಲಾಖೆ 13-10-98 ರಂದು ಅಂದಾಜುಪಟ್ಟಿ ಸಲ್ಲಿಸಲು ತಿಳಿಸಿತು. ಅಂತೆಯೇ 04-11-98 ರಂದು ಅಂದಾಜುಪಟ್ಟಿ ಸಲ್ಲಿಸಲಾಯಿತು. ಅನಂತರ ಮತ್ತೆ ಮತ್ತೆ ನೆನಪೋಲೆ ಬರೆದರೂ ಈವರೆಗೆ ಯಾವುದೇ ವಿಧಾಯಕ ಸೂಚನೆ ಬರದೆಯೇ ಮುಂದೆ ಯಾವ ಶಾಶ್ವತ ಕಾರ್ಯ ಯೋಜನೆಗಳೂ ರೂಪುಗೊಳ್ಳದೆ ಕಳೆದ ವರ್ಷದ ಜಾಥಾ ಮಾತ್ರ ಒಂದು ಮರೆಯಲಾಗದ ಮಧುರ ಸ್ಮೃತಿಯಾಗಿ ಉಳಿಯಿತು. ಈ ಸ್ಥಗಿತತೆಯ ಒಡಲಿನಲ್ಲಿಯೇ ಕ್ರಿಯಾಶೀಲ ಆಶಾಕಿರಣಗಳು ಅಲ್ಲಲ್ಲಿ ಗೋಚರಿಸಿದವು. ಜಾಥಾ ಅವಧಿಯಲ್ಲಿ ಸುದ್ದಿ ಮಾಧ್ಯಮ ನೀಡಿದ ಪ್ರೋತ್ಸಾಹ ಸ್ಮರಣೀಯ. ಸುದ್ದಿ ಬಿಡುಗಡೆ, ಚೇತನ, ಕೊಡಗು ಸಂಗಾತಿಗಳು ಧಾರಾವಾಹಿಯಾಗಿ ಅಮರಕ್ರಾಂತಿ ವಿಚಾರಗಳನ್ನು ಪ್ರಕಟಿಸಿ ವಿಚಾರ ಪ್ರಬೋಧನೆಯನ್ನು ಮಾಡಿದುವು. ಡಾ| ಎಚ್. ಎಂ. ಕುಮಾರಸ್ವಾಮಿಯವರು 'ಅಮರಕ್ರಾಂತಿ'ಯ ಬಗೆಗೆ ಬರೆದ ದೀರ್ಘ ಲೇಖನವೊಂದು 'ಸ್ವಾತಂತ್ರ್ಯದ ಸ್ವರ್ಣ ಹೆಜ್ಜೆ' ಹೊತ್ತಗೆಯಲ್ಲಿ 26-01-99ರಂದು ಬೆಳಕು ಕಂಡಿತು. ಜಾಥಾ ನಡೆದ ವರ್ಷದ 01-04-98ರ ಸಭೆಯಲ್ಲಿ ಅಧ್ಯಕ್ಷ ಸ್ಥಾನದಿಂದ ಮಾತಾಡಿದ ಸನ್ಮಾನ್ಯ ಬೋಳಂತಕೋಡಿ ಈಶ್ವರ ಭಟ್ಟರು "ಈ ಚಾರಿತ್ರಿಕ ಹೋರಾಟದ ವಿವರಗಳನ್ನು ಗ್ರಂಥರೂಪದಲ್ಲಿ ಪ್ರಕಟಿಸಬೇಕು. ಆಗ ಮಾತ್ರ ಹಿಂದಿನ ಘಟನೆಗಳ ಚಿರಸ್ಮರಣೆ ಸಾಧ್ಯ" ಎಂದು ಆಶಿಸಿದ್ದರು. ಪುಸ್ತಕ ಸಂಸ್ಕೃತಿ ಪ್ರಿಯರಾದ ಅವರೇ ಎಸ್. ಎಸ್. ದೇವಿಪ್ರಸಾದ್ ಮತ್ತು ಸಹಲೇಖಕರು ರಚಿಸಿದ ನೆನಪಿನ ಸಂಕಲನ 'ಅಮರ ಸುಳ್ಯದ ಸ್ವಾತಂತ್ರ್ಯ ಸಮರ' ಎಂಬ ಸಂಸ್ಮರಣ ನುಡಿ ಬಾಗಿನಕ್ಕೆ ಅಧ್ವರ್ಯುವಾದರು.

'ಕಾಟಕಾಯಿ' ಎಂದು ಜನಜನಿತವಾಗಿದ್ದ ಅಮರ ಸುಳ್ಯದ ರೈತರ ಹೋರಾಟವನ್ನು ಸುಳ್ಯದ ಹೆಮ್ಮೆಯ ಸಾಹಿತಿ ನಿರಂಜನರು ಪ್ರಥಮತಃ ಭಾವುಕ ಶ್ರದ್ಧೆಯಿಂದ ತಮ್ಮ 'ಸ್ವಾಮಿ ಅಪರಂಪಾರ' ಮತ್ತು 'ಕಲ್ಯಾಣಸ್ವಾಮಿ' ಕಾದಂಬರಿಗಳ ಮೂಲಕ ಬ್ರಿಟಿಷರ ವಿರುದ್ಧ ನಡೆದ ಸ್ವಾತಂತ್ರ್ಯ ಸಂಗ್ರಾಮವೆಂದು ಚಿತ್ರಿಸಿ ನಾಡಿನ ಗಮನ ಸೆಳೆದಿದ್ದರು. 15-06-99ರಂದು ಪುತ್ತೂರಿನಲ್ಲಿ ಜರುಗಿದ ನಿರಂಜನರ ಎಪ್ಪತ್ತೈದನೆಯ ವರ್ಷದ ಜಯಂತಿ ಕಾರ್ಯಕ್ರಮದಲ್ಲಿ ಅವರ ಸ್ಮರಣೆಗೆ ಈ ಕೃತಿಯನ್ನು ಸಮರ್ಪಿಸಲಾಯಿತು. ಅಮರಕ್ರಾಂತಿ ಉತ್ಸವದ ಎರಡನೆಯ ವರ್ಷದ ನೆನಪಿನ ಕಾಣಿಕೆಯಾಗಿ ನಿರಂಜನರ ಸ್ಮೃತಿಗೆ ಈ ತಮ್ಮ ಕೃತಿ ಅರ್ಪಣೆಗೊಂಡದ್ದು ಕೃತಿಕಾರರಾದ ಎನ್. ಎಸ್. ದೇವಿಪ್ರಸಾದರಿಗೆ ಹಾಗೂ ಅಮರಕ್ರಾಂತಿ ಬೀದಿನಾಟಕ ಕರ್ತೃ ಡಾ| ಶಿಶಿಲರಿಗೆ ಹಾಗೂ ಜತೆ ಲೇಖಕರಿಗೆ ಧನ್ಯತೆಯ ಭಾವವನ್ನು ತಂದಿತು. ಈ ನುಡಿ ಮಣಿಹದಿಂದ ಪ್ರೇರಿತರಾದ ಮತ್ತೂ ಹಲವು ಬೌದ್ಧಿಕರು ಈ ಕ್ರಾಂತಿ ಸಂಬಂಧದ ನಾಟಕ ಮತ್ತು ಲೇಖನಗಳನ್ನು ಬರೆಯುವುದರ ಮೂಲಕ ಸಂಸ್ಮರಣೆಗೆ ತಮ್ಮ ಶ್ರದ್ಧಾಂಜಲಿಯನ್ನು ಅರ್ಪಿಸಿದರು.

## ೩. ಶ್ರದ್ಧಾಂಜಲಿ ಕಾರ್ಯಕ್ರಮ - 2000

ಉದಾರೀಕರಣ ಮತ್ತು ಮುಕ್ತ ವ್ಯಾಪಾರ ನೀತಿ ಎಂಬ ಜಾಗತೀಕರಣ ಪ್ರಕ್ರಿಯೆಯ ನವವಸಾಹತುಶಾಯಿಯ ಕಪಿಮುಷ್ಠಿಯಲ್ಲಿ ಪರಿತಪಿಸುತ್ತಿರುವ ನಮಗೆ ಹೊಸ ಸಹಸ್ರಮಾನದ ಆರಂಭದಲ್ಲಿಯೂ ಅಮರಕ್ರಾಂತಿ ವೀರರು ಎರಡು ಶತಮಾನಗಳ ಹಿಂದೆಯೇ ಪ್ರಬಲ ವಸಾಹತುಶಾಯಿಗೆ ಮಣ್ಣುಮುಕ್ಕಿಸಿದ ಆ ಅಮೃತ ಘಳಿಗೆಯನ್ನು ಅವಿಸ್ಮರಣೀಯಗೊಳಿಸಲೆಂದು ಐದನೆಯ ಏಪ್ರಿಲ್ 2000 ದಂದು ಸ್ಮೃತಿ ಕಾರ್ಯಕ್ರಮವನ್ನು ಸಂಪಾಜೆಯಲ್ಲಿ ಸಂಯೋಜಿಸಲಾಗಿತ್ತು. ಸಭಾಕಾರ್ಯಕ್ರಮದಲ್ಲಿ ಮುಖ್ಯರಾಗಿ ಮಂಗಳೂರು ವಿಶ್ವವಿದ್ಯಾಲಯ ಪ್ರಸಾರಾಂಗ ನಿರ್ದೇಶಕರಾದ ಡಾ| ಚಿನ್ನಪ್ಪ ಗೌಡರು ಭಾಗವಹಿಸಿದ್ದರು. ಸ್ಥಳೀಯ ಜನತೆ ಅಭಿಮಾನದಿಂದ ಆಗಮಿಸಿದ್ದರು. ಈ ಸಂದರ್ಭದಲ್ಲಿ ಜಬ್ಬಾರ್ ಸಮೋ ತಂಡದಿಂದ ತಾಳಮದ್ದಳೆ ಪ್ರದರ್ಶನ ಸಹ ನಡೆಯಿತು. ಕಲಾವಿದರಿಗೆ ಮತ್ತು 1998ರ ಕಾಲ್ನಡಿಗೆ ಜಾಥಾದಲ್ಲಿ ನಡೆದವರಿಗೆ ಸ್ಮರಣಿಕೆಗಳನ್ನು ನೀಡಿ ಗೌರವಿಸಲಾಯಿತು. 15-9-2001ರಂದು ಸಂಪಾಜೆಯಲ್ಲಿ ಕೊಡವ ಸಾಹಿತ್ಯ ಅಕಾಡೆಮಿಯ ನೆರವಿನೊಡನೆ ಸಮಿತಿಯ ವತಿಯಿಂದ ಕೊಡಗು ಭಾಷಾ ಸಾಮರಸ್ಯ ಗೋಷ್ಠಿಯನ್ನು ಏರ್ಪಡಿಸಲಾಗಿತ್ತು.

## ಭಾಷಾ ಸಾಂಸ್ಕೃತಿಕ ಸಾಮರಸ್ಯ - 2001

ಅಮರಕ್ರಾಂತಿಯ ಅಂದಿನ ಸಾಮೂಹಿಕ ಹೋರಾಟದಲ್ಲಿ ಕೊಡಗು ಮತ್ತು ಹಿಂದೆ ಕೊಡಗಿನ ಅವಿಭಾಜ್ಯ ಅಂಗವಾಗಿದ್ದ ಸುಳ್ಯದ ಎಲ್ಲ ಭಾಷಾ ವರ್ಗಗಳ ಜನರೂ ಸಾರ್ವತ್ರಿಕವಾಗಿ ಭಾಗವಹಿಸಿ ಬಲಿದಾನ ಮಾಡಿಕೊಂಡಿದ್ದರು. ಇದರ ಅರಿವಿನಿಂದ ಮೂರನೆಯ ವರ್ಷಕ್ಕೆ ಭಾಷಾ ಸಾಮರಸ್ಯ ಗೋಷ್ಠಿಯನ್ನು ನೆರವೇರಿಸುವುದು ಅರ್ಥಪೂರ್ಣವಾದೀತೆಂದು ಭಾವಿಸಿ ಕೊಡವ ಸಾಹಿತ್ಯ ಅಕಾಡೆಮಿಯ ಸಹಭಾಗಿತ್ವದಲ್ಲಿ ಕೊಡಗು ಮತ್ತು ದಕ್ಷಿಣ ಕನ್ನಡಗಳೆರಡನ್ನೂ ಪ್ರತಿನಿಧಿಸುವ ಸಂಪಾಜೆಯಲ್ಲಿ ಈ ಸಂಬಂಧದ ಕಾರ್ಯಕ್ರಮವನ್ನು ಯೋಜಿಸಲಾಗಿತ್ತು.

ಭಾಷಾ ಸಾಮರಸ್ಯಗೋಷ್ಠಿಯಲ್ಲಿ ತಜ್ಞರುಗಳಾದ ಯು. ಎಸ್. ಶ್ರೀಧರ ಆರಾಧ್ಯ, ಡಾ| ಪ್ರಭಾಕರ ಶಿಶಿಲ, ಬಾಲಸುಬ್ರಹ್ಮಣ್ಯ ಕಂಜರ್ಪಣೆ, ವಿದ್ಯಾಧರ ಬಡ್ಡಡ್ಕ, ಡಾ. ಕೆ. ಎಂ. ಲೋಕೇಶ್ ಮತ್ತು ಪೂವಪ್ಪ ಕಣಿಯೂರರು ಅನುಕ್ರಮವಾಗಿ ಕನ್ನಡ, ಮಲೆಯಾಳಂ, ಹವ್ಯಕ ಭಾಷೆ, ಗೌಡ ಭಾಷೆ, ಕೊಡವ ಭಾಷೆ ಮತ್ತು ತುಳು ಭಾಷಾ ಬಾಂಧವ್ಯಗಳ ಸಾಮರಸ್ಯದ ಕುರಿತು ತಮ್ಮ ಅಭಿಪ್ರಾಯಗಳನ್ನು ಮಂಡಿಸಿದರು. ಹಾಗೂ ತಮ್ಮ ಮೌಲಿಕ ವಿಚಾರಗಳನ್ನು ಪ್ರಬಂಧ ರೂಪದಲ್ಲಿ ಬರೆದುಕೊಡಲು ಸಮ್ಮತಿಸಿದರು. ಅಂದಿನ ಭಾಷಾ ಸಾಮರಸ್ಯಗೋಷ್ಠಿಯ ಲೇಖನಗುಚ್ಛಗಳ ಪ್ರಕಟಿತ ಹೊತ್ತಗೆಯನ್ನು ಅಮರಕ್ರಾಂತಿ ವೀರರ ಸ್ಮೃತಿಗೆ ಗೌರವ ಪುರಸ್ಕರವಾಗಿ ಮುಡಿಪಿಡುವುದೆಂದು ಸಂಕಲ್ಪಿಸಲಾಯಿತು.

## ೪. ಸುಳ್ಯದ ಅಮರ ಭೂಮಿಯಲ್ಲಿ 2001ರ ಸಂಸ್ಮರಣೆ ಮತ್ತು ಮೆರವಣಿಗೆ

05-04-2001ರಂದು ನಾಲ್ಕನೆಯ ವಾರ್ಷಿಕ ಕಾರ್ಯಕ್ರಮವಾಗಿ ಸುಳ್ಯದ ಲಯನ್ಸ್ ಸಭಾಮಂದಿರದಲ್ಲಿ ಅದ್ದೂರಿಯ ಸಮಾರಂಭ ಜರುಗಿತು. ಜಿಲ್ಲಾ ಉಸ್ತುವಾರಿ ಸಚಿವರಾದ ರಮಾನಾಥ ರೈಯವರು ಸಭೆಯ ಅಧ್ಯಕ್ಷತೆ ವಹಿಸಿದ್ದರು. ಡಾ| ಪ್ರಭಾಕರ ಶಿಶಿಲ 1837ರ ಕ್ರಾಂತಿಯ ಬಗ್ಗೆ. ಸುದೀರ್ಘ ಉಪನ್ಯಾಸ ನೀಡಿದರು. ಜನಪ್ರತಿನಿಧಿಗಳಾದ ಅಂಗಾರ ಮತ್ತು ಅಣ್ಣಾವಿನಯಚಂದ್ರರು ಅತಿಥಿಗಳಾಗಿ ಆಗಮಿಸಿ ಕ್ರಾಂತಿವೀರರನ್ನು ಸ್ಮರಿಸಿದರು. ಸಭೆಗೆ ಮೊದಲು ಪೂರ್ವಾಹ್ನ 9-30ರಲ್ಲಿ ಚೆನ್ನಕೇಶವ ದೇವಸ್ಥಾನದಿಂದ ಆರಂಭಿಸಿ ಸುಳ್ಯದ ಪ್ರಮುಖ ಬೀದಿಗಳಲ್ಲಿ ಭರ್ಜರಿ ಮೆರವಣಿಗೆಯು ಕಾಯರ್ತೋಡಿ ಯುವಕಮಂಡಲದ ಡೊಳ್ಳುಕುಣಿತ ಮತ್ತು ಸಾಂಸ್ಕೃತಿಕ ಸ್ತಬ್ಧಚಿತ್ರಗಳನ್ನೊಳಗೊಂಡಂತೆ ಸಾಗಿ ಲಯನ್ಸ್ ಮಂದಿರವನ್ನು ಸೇರಿತು. ಮೆರವಣಿಗೆಯಲ್ಲಿ ಸುಳ್ಯ ತಾಲೂಕಿನ ಬಹುತೇಕ

ಯುವಕ-ಯುವತಿ ಮಂಡಳಗಳನ್ನೊಳಗೊಂಡ ಯುವಜನ ಸಂಯುಕ್ತ ಮಂಡಳಿ ಸಹಕಾರ ನೀಡಿದುವು. ಕ್ರಾಂತಿ ಜ್ಯೋತಿಯನ್ನು ಬೆಳಗಿಸಿ, ಕ್ರಾಂತಿ ಬಾವುಟವನ್ನು ಹಾರಿಸಲಾಯಿತು. ಸಭಾ ಕಾರ್ಯಕ್ರಮದ ತರುವಾಯ ಅಮರಕ್ರಾಂತಿ ಕಾಲ್ನಡಿಗೆ ಜಾಥಾ 1998ರ ವೀಡಿಯೋ ಚಿತ್ರ ಪ್ರದರ್ಶನವನ್ನು ಏರ್ಪಡಿಸಲಾಗಿತ್ತು. ನೂರಾರು ಸಂಖ್ಯೆಯಲ್ಲಿ ಸಾರ್ವಜನಿಕರು ನೆರೆದು ಕ್ರಾಂತಿವೀರರಿಗೆ ತಮ್ಮ ಕೃತಜ್ಞತೆಗಳನ್ನು ವ್ಯಕ್ತಪಡಿಸಿದರು. ಈ ಕಾರ್ಯಕ್ರಮಕ್ಕೆ ಸುಳ್ಯದ ನಾಗರಿಕ ಪ್ರಮುಖರು ಹಲವರು ಪ್ರಾಯೋಜಕತ್ವವನ್ನು ಒದಗಿಸಿದ್ದರು. ಎಂ. ಪಿ. ಉಮೇಶ್, ಸುದರ್ಶನ ಶೆಟ್ಟಿ, ಸುರಭಿಯ ಜಯಂತ್, ಕಟ್ಟೇಕಾರ್ ವಸತಿ ನಿಲಯ, ಗುರುಪ್ರಕಾಶ್ ಕೇಬಲ್ಸ್ ಮಾಲಿಕರು ಮೊದಲಾದವರು ಪ್ರಾಯೋಜಕರಾಗಿವಿತ್ತ ನೆರವನ್ನಿತ್ತು ಪ್ರೋತ್ಸಾಹಿಸಿದರು. ಅಲ್ಲದೆ ಕೆ.ಕೆ. ಮೋಹನ್‌ದಾಸ್, ವಿ. ವಿ. ಬಾಲನ್ ಸಂಪಾಜೆ, ತೇಜಕುಮಾರ್ ಬಡ್ಡಡ್ಕ, ಶಾಹಿದ್, ಬಿ. ನಾಗರಾಜ ಶೆಟ್ಟಿ ಮತ್ತು ಎನ್. ಎಸ್. ದೇವಿಪ್ರಸಾದ್ ಮುಂತಾದವರು ಪತ್ರಿಕೆಗಳಲ್ಲಿ ಪ್ರಚಾರನೀಡಿ ಅದರ ವೆಚ್ಚವನ್ನು ಭರಿಸಿದರು. ಸುಳ್ಯದ ಪ್ರಮುಖ ಸಂಘ ಸಂಸ್ಥೆಗಳಾದ ರೋಟರಿ, ಲಯನ್ಸ್, ಪಯಸ್ವಿನಿ ಜೂನಿಯರ್ ಚೇಂಬರ್, ರೋಟರ್‍ಯಾಕ್ಟ್, ಶಾರದಾಂಬ ಸೇವಾ ಸಮಿತಿ ಮೊದಲಾದ ಸೇವಾ ಸಂಸ್ಥೆಗಳೂ ಸಭಾ ಕಾರ್ಯಕ್ರಮ ಮತ್ತು ಮೆರವಣಿಗೆ ಕಾರ್ಯಕ್ರಮಗಳಲ್ಲಿ ತುಂಬು ನೆರವನ್ನಿತ್ತುವು. ಇವುಗಳೆಲ್ಲದರ ಸಹಕಾರದಿಂದ 2001ರ ಕಾರ್ಯಕ್ರಮ ಯಶಸ್ವಿಯಾಯಿತು.

## ೫. 2002ರ ನಿಯೋಜಿತ ವಾಹನ ಜಾಥಾ ಮತ್ತು ಸಭಾ ಕಾರ್ಯಕ್ರಮ

ಅಮರಕ್ರಾಂತಿ ಉತ್ಸವಾಚರಣೆ ಆರಂಭಗೊಂಡ ಐದು ವರ್ಷಗಳಲ್ಲಿ ವರ್ಷದಿಂದ ವರ್ಷಕ್ಕೆ ಜನಸ್ಪಂದನ ಹೆಚ್ಚಾಗುತ್ತಿದೆ. ಹಾಗೆಂದೇ ಐದನೆಯ ಏಪ್ರಿಲ್ 2002 ರಂದು ವ್ಯಾಪಕವಾದ ಕಾರ್ಯಕ್ರಮಗಳನ್ನು ನಿಯೋಜಿಸಲಾಯಿತು. ಈ ವರ್ಷ ಏಪ್ರಿಲ್ ಐದರಂದು ಕಲ್ಯಾಣಪ್ಪನ ದಂಡು ನಡೆದಲ್ಲಿ ಕಾಲ್ನಡಿಗೆ ಜಾಥಾ ಸಾಗಿದ ಸ್ಥಳಗಳಲ್ಲಿ ವಾಹನಜಾಥಾವನ್ನು, ಮತ್ತು ಸಭಾಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಯಿತು. ಸುಳ್ಯದ ಚೆನ್ನಕೇಶವ ದೇವಮಂದಿರದಿಂದ ಆರಂಭಗೊಂಡ ಮೆರವಣಿಗೆ ವಾಹನಜಾಥಾ ವಿವಿಧ ಸ್ಥಳಗಳಲ್ಲಿ ಸಾಗಿ ಸಭೆ ನಡೆಸಿ ಅಂತಿಮವಾಗಿ ಮಂಗಳೂರಿನ ರಾಜ್ಯ ಸರ್ಕಾರಿ ನೌಕರರ ಕಟ್ಟಡದ ಮುಂಭಾಗದಲ್ಲಿ ಅಂತ್ಯಗೊಂಡು ಸಭೆ ಜರಗಿಸಲಾಯಿತು. ಅಂದಿನ ಸಭೆಯಲ್ಲಿ 'ಕೊಡಗು ಭಾಷಾ ಸಾಮರಸ್ಯ ಗೋಷ್ಠಿ'ಯ ಹೊತ್ತಗೆಯನ್ನು ಬಿಡುಗಡೆಗೊಳಿಸಲಾಯಿತು. ಇದಕ್ಕಾಗಿ ಸುಳ್ಯದಲ್ಲಿ ಮತ್ತು ಮಂಗಳೂರಿನಲ್ಲಿ ಪೂರ್ವಭಾವಿಯಾಗಿ ಹಲವು ಸಿದ್ಧತಾ ಸಭೆಗಳನ್ನು ಮತ್ತು ಪತ್ರಿಕಾ ಗೋಷ್ಠಿಗಳನ್ನು ನಡೆಸಿ ತಯಾರಿಕ್ರಮಗಳನ್ನು ಕೈಗೊಳ್ಳಲಾಯಿತು. ಎಲ್ಲ ಸ್ಥಳಗಳ ಜೇಸಿಸ್ ಪ್ರಮುಖರಿಗೆ ಆಯೋಜನೆಗಾಗಿ ಪತ್ರ

ಬರೆದು ನೆರವು ಕೋರಲಾಯಿತು. ಮಂಗಳೂರಿನಲ್ಲಿ ಲೋಕಯ್ಯ ಗೌಡರು ಸಮಾರಂಭಕ್ಕೆ ಮೂರು ನೂರರಷ್ಟು ಜನರನ್ನು ಕಲೆ ಹಾಕಿದ್ದರು. ಕೊಡವ ಅಕಾಡೆಮಿ ಅಧ್ಯಕ್ಷ ಬಾಚರಣೆಯಂಡ ಅಪ್ಪಣ್ಣ ಖ್ಯಾತ ಸಾಹಿತಿ ಅಮೃತ ಸೋಮೇಶ್ವರ, ಯಕ್ಷಕಲಾವಿದ ಕುಂಬಳೆ ಸುಂದರರಾವ್ ಅತಿಥಿಗಳಾಗಿ ಭಾಗವಹಿಸಿದ್ದರು. ಈಚೆಗೆ ಈ ಕಾರ್ಯಕ್ಕೆ ಸಿಗುತ್ತಿರುವ ವ್ಯಾಪಕ ಜನಬೆಂಬಲವನ್ನು ಗಮನಿಸಿ ಉತ್ಸವ ಸಮಿತಿಯನ್ನು ಶಾಸನಬದ್ಧವಾದ ಪ್ರತಿಷ್ಠಾನವನ್ನಾಗಿ ಪರಿವರ್ತಿಸುವ ಆಲೋಚನೆ ಕೂಡಾ ಸಮಿತಿಯ ಪದಾಧಿಕಾರಿಗಳಲ್ಲಿದೆ. ಈ ಎಲ್ಲದರ ಹಿನ್ನಲೆಯಲ್ಲಿ ಮುಂಬರುವ ವರ್ಷಗಳ ಕಾರ್ಯಕ್ರಮಗಳು ಯಶಸ್ವಿಯಾಗಿ ಜರುಗುವುದೆಂಬ ಆಶಯ ಎಲ್ಲರದ್ದಾಗಿದೆ.



# ಅಮರ ಕ್ರಾಂತಿ

## (ಬೀದಿ ನಾಟಕ)

೧೯೯೮ ಮಾರ್ಚ್ ೩೦ರಂದು ಸುಳ್ಯದಿಂದ ಹೊರಟ ಅಮರಕ್ರಾಂತಿ ಕಾಲ್ನಡಿಗೆ ಜಾಥಾ ೧೯೯೮ ಏಪ್ರಿಲ್ ೧ರಂದು ಮಂಗಳೂರಿಗೆ ತಲಪಿತು. ಕಲ್ಯಾಣಸ್ವಾಮಿ ಕಾಲದ ಸ್ವಾತಂತ್ರ್ಯ ಹೋರಾಟದ ಬಗ್ಗೆ ಅರಿವು ಮೂಡಿಸಲು ಬಳಸಲಾದ ಬೀದಿ ನಾಟಕವಿದು.

| | | |
|---|---|---|
| ರಚನೆ ಮತ್ತು ಲಾವಣಿ | : | ಡಾ\| ಪ್ರಭಾಕರ ಶಿಶಿಲ |
| ನಿರ್ದೇಶನ | : | ನೀನಾಸಂ ಪದವೀಧರ ಜೀವನರಾಂ ಸುಳ್ಯ |
| ನಟ ನಟಿಯರು | : | ಜೀವನರಾಂ ಸುಳ್ಯ, ಡಾ\| ಪ್ರಭಾಕರ ಶಿಶಿಲ ಜನಾರ್ದನ ಕಣಕ್ಕೂರು, ಗೀತಾ ಮುಳ್ಯ, ಪದ್ಮಾ ಕೊಡಗು, ನಾಗರಾಜ, ಜಯಪ್ರಕಾಶ್, ಸಂಜೀವ ಕುದ್ಪಾಜೆ, ಅಜಯ್, ಕುಸುಮಾವತಿ, ಸುಜಾತ, ಕಾರ್ತಿಕ್, ರಾಜಾರಾಂ ಗುಂಡ್ಯ, ನವರತ್ನರಾಂ, ಆರತಿ, ಅರುಣ, ಪ್ರದೀಪ್, ವಿಜಯ, ಕೌಶಲ್ ಮತ್ತು ನಿಹಾಲ್. |

ಪ್ರಯೋಗಗಳು

| | | |
|---|---|---|
| ಮಾರ್ಚ್ ೩೦, ೧೯೯೮ | : | ಪೈಚಾರು, ಸೋಣಂಗೇರಿ, ಐವರ್ನಾಡು ಮತ್ತು ಬೆಳ್ಳಾರೆ |
| ಮಾರ್ಚ್ ೩೧, ೧೯೯೮ | : | ಕುಂಬ್ರ ಕಾರು ನಿಲ್ದಾಣ |
| ಏಪ್ರಿಲ್ ೧, ೧೯೯೮ | : | ಪುತ್ತೂರು ಬಸ್ ನಿಲ್ದಾಣ |
| ಏಪ್ರಿಲ್ ೨, ೧೯೯೮ | : | ಮಾಣಿ ಶಾಲಾವಠಾರ |
| ಏಪ್ರಿಲ್ ೩, ೧೯೯೮ | : | ಜೋಡುಮಾರ್ಗ ಕಾರು ನಿಲ್ದಾಣ (ಬಿ.ಸಿ. ರೋಡು) |
| ಏಪ್ರಿಲ್ ೪, ೧೯೯೮ | : | ಫರಂಗಿಪೇಟೆ ಮೈದಾನ |
| ಏಪ್ರಿಲ್ ೫, ೧೯೯೮ | : | ಸಂತ ಎಲೋಷಿಯಸ್ ಕಾಲೇಜು ಆವರಣ (ಮಂಗಳೂರು) |

ಅನುಬಂಧ ೨

# ಬೀದಿನಾಟಕದಲ್ಲೊಂದು ಹೊಸ ಪ್ರಯೋಗ

ಪ್ರಯೋಗ ರಂಗಭೂಮಿ ಇತ್ತೀಚೆಗೆ ಮಹತ್ತರವಾದ ಬೆಳವಣಿಗೆಯನ್ನು ಕಾಣುತ್ತಿರುವುದು ಒಂದು ಒಳ್ಳೆಯ ಪರಿವರ್ತನೆ. ಆದರೆ ಇದಕ್ಕೆ ವಿರುದ್ಧವಾಗಿ, ನಿರ್ದಿಷ್ಟ ರಂಗ-ಪರಿಕರ, ರಂಗ ವಿನ್ಯಾಸಗಳಿಲ್ಲದೆ ಬೇರೆಯಾಗಿಯೇ ನಿಲ್ಲುವ ಬೀದಿ ನಾಟಕಗಳು ಪ್ರಯೋಗ ರಂಗಭೂಮಿಯಿಂದ ಬಹುದೂರ ಉಳಿದಿರುತ್ತವೆ. ಈ ರಂಗಭೂಮಿಯ ಒಟ್ಟು ವ್ಯವಸ್ಥೆಯನ್ನು ಬೀದಿ ನಾಟಕಗಳಲ್ಲಿ ಅಳವಡಿಸಿಕೊಂಡವರೇ ಇಲ್ಲ ಅನ್ನಬಹುದೇನೋ. ಆದರೆ ಇದಕ್ಕೆ ಭಿನ್ನವಾಗಿ ಇತ್ತೀಚೆಗೆ ಸುಳ್ಯದಿಂದ ಮಂಗಳೂರಿನವರೆಗೆ ನಡೆದ ಸ್ವಾತಂತ್ರ್ಯದಂಗೆ ಅಮರ ಕ್ರಾಂತಿ ಉತ್ಸವದ ಕಲಾ ತಂಡ ಅಭಿವ್ಯಕ್ತಗೊಳಿಸಿದ ಬೀದಿ ನಾಟಕ 'ಅಮರ ಕ್ರಾಂತಿ' ಬೀದಿನಾಟಕಕ್ಕೆ ಹೊಸ ಚೌಕಟ್ಟನ್ನು ನಿರ್ಮಿಸಿ ಹೊಸ ಅಧ್ಯಾಯವೊಂದಕ್ಕೆ ನಾಂದಿ ಹಾಡಿತು.

ಸದಾ ಹೊಸತರೆಡೆಗೆ ತುಡಿಯುತ್ತಿರುವ ನೀನಾಸಂ ಪದವೀಧರ ರಂಗನಟ ಅನುಭವಿ ರಂಗ ನಿರ್ದೇಶಕ ಜೀವನ್‌ರಾಂರ 'ಪ್ರಯೋಗಶೀಲತೆ' ತೀರ ಚಾರಿತ್ರಿಕ ಘಟನಾವಳಿಗಳನ್ನು ಕೂಡಾ ಬೀದಿ ನಾಟಕಗಳಲ್ಲಿ ಅಳವಡಿಸಿಕೊಂಡು ನವೀನತೆಯನ್ನು ಮತ್ತು ಸಹಜತೆಯನ್ನು ನೀಡಬಹುದು ಎಂಬುದನ್ನು ತೋರಿಸಿ ಕೊಟ್ಟಿತು. ಜೀವನ್‌ರಾಂ ಸುಳ್ಯ ನಿರ್ದೇಶಿಸಿದ 'ಅಮರ ಕ್ರಾಂತಿ' ಕಥಾ ಹಂದರ ಮತ್ತು ಲಾವಣಿಯನ್ನು ಹೆಣೆದು ಸ್ವತಃ ಅಭಿನಯಿಸಿದವರು ಡಾ| ಪ್ರಭಾಕರ ಶಿಶಿಲ.

ಎರಡು ಕಥಾವಸ್ತುಗಳನ್ನು ಹೊಂದಿರುವ 'ಅಮರಕ್ರಾಂತಿ' ಟಿಪ್ಪುವಿನ ವೀರಗಾಥೆ ಮತ್ತು ಕಲ್ಯಾಣಸ್ವಾಮಿಯ ನೇತೃತ್ವದ ಸುಳ್ಯದ ಅಮರ ಕ್ರಾಂತಿ ಸ್ವಾತಂತ್ರ್ಯ ದಂಗೆಯನ್ನು ನಮ್ಮ ಮುಂದೆ ಬಿಚ್ಚಿಡುತ್ತದೆ. ಪ್ರಾರಂಭದಲ್ಲಿ ಮೈಸೂರಿನ ಹುಲಿ ಟಿಪ್ಪು ಸುಲ್ತಾನನ ದೇಶಪ್ರೇಮ, ಅವನ ಮತ್ತು ಪ್ರಜೆಗಳ ನಡುವಿನ ಹೊಂದಾಣಿಕೆ, ತ್ಯಾಗ ಇವು ಬ್ರಿಟಿಷ್ ಸರಕಾರದ ದಮನಕಾರಿ ನೀತಿಯನ್ನು ವಿರೋಧಿಸುತ್ತವೆ. ಒಗ್ಗಟ್ಟಿನಿಂದ ಬ್ರಿಟಿಷರನ್ನು ಮಣಿಸಿದ್ದ ಟಿಪ್ಪು, ಸ್ವಜನ ಪಕ್ಷಪಾತ, ರಾಜಕೀಯ ಒಳ ಪಿತೂರಿಗಳಿಗೆ ತುತ್ತಾಗಿ ಪರಕೀಯರಿಗೆ ಬಲಿಯಾಗುವ ದುರಂತವನ್ನು ವಾಸ್ತವಕ್ಕೆ ತೀರ ಹತ್ತಿರ ತರಲಾಗಿದೆ.

ಇಲ್ಲಿ ಒಟ್ಟು ವ್ಯವಸ್ಥೆಯನ್ನು ಕೌಶಲದಿಂದ ಜೀವಂತಗೊಳಿಸಲಾಗಿದೆ. ತಂಡದ ಪ್ರಸಾಧನ ನಾಟಕದ ಓಘಕ್ಕೆ ಪೂರಕವಾಗಿದೆ. ಹುಲಿ ಮುಖವಾಡ, ಟಿಪ್ಪು, ಗೋಮುಖವಾಡದ ಮುಗ್ಧ ಜನತೆ, ಬೇಟೆಗಾರರಾದ ಬ್ರಿಟಿಷ್ ಅಧಿಕಾರಿಗಳು ಆಗಿನ ಜನಜೀವನಕ್ಕೆ ಹಿಡಿದ ಕೈಗನ್ನಡಿ. ಹುಲಿಯಿಂದ (ಟಿಪ್ಪು) ದನಗಳಿಗೆ (ಜನ) ರಕ್ಷಣೆ, ಉತ್ತೇಜನ ಬಹಳ ಮಾರ್ಮಿಕವಾಗಿ ಮೂಡಿ ಬಂದಿದೆ. ಜೀವನ್‌ರಾಂ ಸುಳ್ಯ ಟಿಪ್ಪುವಾಗಿ ಮಿಂಚಿದರೆ, ಡಾ| ಶಿಶಿಲರ ಲಾವಣಿ ನಾಟಕಕ್ಕೆ ಜೀವಂತಿಕೆ ನೀಡಿದೆ.

ಮುಖ್ಯವಾದ 'ಅಮರಕ್ರಾಂತಿ ದಂಗೆ' ಕೊಡಗು ಮತ್ತು ಸುಳ್ಯದ ಸ್ವಾತಂತ್ರ್ಯ ವೀರರ ವೀರಗಾಥೆಯನ್ನು ನಮ್ಮ ಮುಂದೆ ಬಿಚ್ಚಿಡುತ್ತದೆ. ಕೊಡಗಿನಿಂದ ಆರಂಭ ಆಗುವ ದಂಗೆಯ ಮೊದಲ ನಾಯಕ 'ಅಪರಂಪರ'. ಬ್ರಿಟಿಷರ ಜನವಿರೋಧಿ ನೀತಿಯನ್ನು ಎದುರಿಸುತ್ತಾ ಮುನ್ನಡೆವ

ಅಪರಂಪರನ ವಿರುದ್ಧ ಅಮಾನುಷ ಆಕ್ರಮಣ ನಡೆಯುತ್ತದೆ. ಆದರೂ ಆ ಸ್ವಾತಂತ್ರ್ಯ ಯೋಧನ ಕೆಚ್ಚೆದೆಯ ನುಡಿಗಳು ಬೆಚ್ಚಿ ಬೀಳಿಸುತ್ತವೆ. "ಐದು ಸಾವಿರ ಮೈಲು ದೂರದಿಂದ ಬಂದ ನಿಮಗೇ ನಮ್ಮ ಸಿಂಹಾಸನದ ಮೇಲೆ ಇಷ್ಟು ಹಕ್ಕಿರಬೇಕಾದರೆ, ಇಲ್ಲೇ ಹುಟ್ಟಿ ಬೆಳೆದ ನಮಗೆಷ್ಟಿರಬೇಡ." "ನಾನು ಕೊಳೆತು ಸತ್ತರೆ, ನೀನು ಸತ್ತು ಕೊಳೆಯುತ್ತೀಯೆ" ಎಂಬ ಮಾತುಗಳು ಇಂದಿಗೂ ರೋಮಾಂಚನಗೊಳಿಸುತ್ತವೆ. 'ಅಪರಂಪರ'ನ ಪಾತ್ರಕ್ಕೆ ಜೀವ ತುಂಬಿದ ರಂಗನಟ ನೀನಾಸಂ ಪದವೀಧರೆ ಪದ್ಮಾ ಕೊಡಗು ಲವಲವಿಕೆಯ ಅಭಿನಯ ನೀಡಿದ್ದಾರೆ.

ಅಮರಕ್ರಾಂತಿಯ ಮುಖ್ಯ ನಾಯಕ ಕಲ್ಯಾಣಸ್ವಾಮಿಯ ಕಾರ್ಯತತ್ಪರತೆ, ಜನ ಸಂಘಟನೆಯಲ್ಲಿ ಆತನ ನೈಪುಣ್ಯ, ಜನತೆಗೆ ನೀಡುತ್ತಿದ್ದ ಪ್ರೋತ್ಸಾಹ ಇಡೀ ನಾಟಕದುದ್ದಕ್ಕೂ ಕಾಣ ಬರುತ್ತವೆ. ದಂಗೆಗೆ ದೊರೆತಿರುವ ಬೆಂಬಲ ಅಂದಿನ ಜನ ಬ್ರಿಟಿಷರ ವಿರುದ್ಧ ಸಿಡಿದೆದ್ದಿದ್ದರು ಎಂಬುದಕ್ಕೆ ಸಾಕ್ಷಿ. ಕೊನೆಯ ದಿನ ಬ್ರಿಟಿಷ್ ಧ್ವಜವನ್ನು ಉರಿಸಿ, ಅಮರಕ್ರಾಂತಿಯ ಧ್ವಜವನ್ನು ಏರಿಸುವ ಸನ್ನಿವೇಶ, ಜನರ ಆಕ್ರೋಶದ ಬೆಂಕಿಯಾಗಿತ್ತು. ಹದಿಮೂರನೆಯ ದಿನ ಮತ್ತೆ ಬ್ರಿಟಿಷರ ಕುತಂತ್ರದ ದಾಳಿಗೆ ಸಿಲುಕಿ ಒದ್ದಾಡುವ ಸೈನಿಕರ ಚಿತ್ರಣ ಹೃದಯವಿದ್ರಾವಕವಾಗಿ ಚಿತ್ರಿತವಾಗಿದೆ. ಕೊನೆಗೆ ರಂಗ ಮಧ್ಯದಲ್ಲಿ ಉಳಿಯುವ ಕೆಂಪು ಪಟ್ಟಿಗಳು ಇಡೀ ಕ್ರಾಂತಿಯನ್ನು ಸಾಂಕೇತಿಕವಾಗಿ ರಕ್ತಮಯವಾಗಿಸಿವೆ.

'ಅಮರಕ್ರಾಂತಿ' ನಾಟಕ ಚರಿತ್ರೆಯಲ್ಲಿದ್ದಂತೆ ಚಿತ್ರಿತವಾಗಿದೆಯೇ ಎನ್ನುವುದಕ್ಕಿಂತ ಅದೇ ಸೂಕ್ಷ್ಮತೆಯನ್ನು ಬೀದಿ ನಾಟಕಕ್ಕೆ ಹೇಗೆ ಅಳವಡಿಸಿಕೊಂಡಿದ್ದಾರೆ ಎಂಬುದನ್ನು ನೋಡಿದರೆ ಇದು ಹೆಚ್ಚು ಪರಿಣಾಮಕಾರಿಯಾಗಿದೆ ಎಂಬುದರಲ್ಲಿ ಎರಡು ಮಾತಿಲ್ಲ. ಕಲ್ಯಾಣಸ್ವಾಮಿಯಾಗಿ ಜೀವನ್‌ರಾಂ ಸುಳ್ಯ, ಬೀರಣ್ಣ ಬಂಟನಾಗಿ ಪದ್ಮಾ ಕೊಡಗು, ಹುಲಿಕಡಿದ ನಂಜಯ್ಯನಾಗಿ ಗೀತಾ ನಾಯಕ್, ಕೆದಂಬಾಡಿ ರಾಮ ಗೌಡನಾಗಿ ಜನಾರ್ದನ ಕಣಕ್ಕೂರು, ಬಂಗರಸನಾಗಿ ಡಾ| ಪ್ರಭಾಕರ ಶಿಶಿಲ ಲವಲವಿಕೆಯಿಂದ ಕಾಣಬರುತ್ತಾರೆ. ಉಳಿದಂತೆ ಅರುಣಾ ಸಂಪಾಜೆ, ರಾಜಾರಾಮ್, ಆರತಿ, ಸುಜಾತಾ, ಅಜಯ್, ನವರತ್ನರಾಮ್, ಜಯಪ್ರಕಾಶ್ ಯಥೋಚಿತ ಅಭಿನಯ ನೀಡಿದ್ದಾರೆ. ಮಾ| ಕೌಶಲ್ ಸದಾಶಿವ ವಿಶೇಷ ಗಮನಸೆಳೆಯುತ್ತಾನೆ. ಕುಸುಮಾವತಿ, ಕಾರ್ತಿಕ ಕಣಕ್ಕೂರು, ನಾಗರಾಜರ ಹಿನ್ನೆಲೆ ಸಂಗೀತ ನಾಟಕಕ್ಕೆ ಪೂರಕವಾಗಿತ್ತು.

ನಿರ್ದಿಷ್ಟ ರಂಗಚೌಕಟ್ಟು ಇಲ್ಲದ ಬೀದಿನಾಟಕಕ್ಕೆ ಪ್ರಯೋಗ ರಂಗಭೂಮಿಯ ಆಯಾಮವನ್ನು ನೀಡಿದ ನಾಟಕವಿದು. ಒಟ್ಟು ವ್ಯವಸ್ಥೆಯಲ್ಲಿ ರಂಗಭೂಮಿಯ ಛಾಯೆ ನಿಚ್ಚಳವಾಗಿ ಪ್ರತಿಬಿಂಬಿತವಾಗಿತ್ತು. ಬೀದಿನಾಟಕ ಬೊಬ್ಬೆ ಭರಾಟೆಗಳಿಂದಲೇ ಜನಮುಟ್ಟುತ್ತದೆ ಎಂಬ ಕಲ್ಪನೆಗೆ ಭಿನ್ನವಾಗಿ ಈ ನಾಟಕ ಜನರನ್ನು ಮುಟ್ಟಿ ತಟ್ಟುತ್ತದೆ. ಭಾವನೆಗಳಿಗೆ ಒತ್ತು ನೀಡಿರುವ ಜೀವನ್‌ರಾಂ 'ಮೌನ'ವನ್ನು ಮಾತನಾಡಿಸಿದ್ದಾರೆ. ಬೀದಿನಾಟಕ ಪ್ರಕಾರಕ್ಕೆ ಹೊಸತನ, ಹೊಸ ಆಯಾಮ ನೀಡಿದ ಯಶಸ್ವೀ ಪ್ರಯೋಗ "ಅಮರಕ್ರಾಂತಿ".

**- ಸುಬ್ಬಪ್ಪ, ಕೈಕಂಬ (ಉದಯವಾಣಿ)**

ಅನುಬಂಧ ೩

# 'ಅಮರ ಕ್ರಾಂತಿ'

**ಕಾಲ್ನಡಿಗೆ ಜಾಥಾ ಸಮಿತಿ ಮತ್ತು ಜಾಥಾ ನಡೆದವರ ಪಟ್ಟಿ**

೧. ಡಾ| ಪ್ರಭಾಕರ ಶಿಶಿಲ., ನೆಹರು ಸ್ಮಾರಕ ಕಾಲೇಜು, ಸುಳ್ಯ
೨. ಜೀವನರಾಂ ಸುಳ್ಯ, ಪರಿವಾರ ಮನೆ, ಸುಳ್ಯ
೩. ಮಾ| ಪೃಥ್ವಿಸಾಗರ್ ಶಿಶಿಲ, 'ಕಾವ್ಯ', ಕಾಂತಮಂಗಲ, ಅಜ್ಜಾವರ ಅಂಚೆ
೪. ಜನಾರ್ದನ ಕಣಕ್ಕೂರು, 'ಪ್ರಕೃತಿ', ಕಾಂತಮಂಗಲ, ಅಜ್ಜಾವರ ಅಂಚೆ
೫. ಕಾರ್ತಿಕ್ ಕಣಕ್ಕೂರು, 'ಪ್ರಕೃತಿ', ಕಾಂತಮಂಗಲ, ಅಜ್ಜಾವರ
೬. ಪ್ರಸಾದ್ ಕೆಮ್ಮಿಂಜೆ, ಕೆಮ್ಮಿಂಜೆ ಮನೆ, ಸುಳ್ಯ
೭. ಎನ್. ಎಸ್. ದೇವಿಪ್ರಸಾದ್ ಸಂಪಾಜೆ, ಪಿ. ಬಿ. ನಂ. ೧, ಅಂಚೆ : ಸಂಪಾಜೆ
೮. ಕುಕ್ಕೇಟಿ ಮಾಧವ ಗೌಡ, ಕುಕ್ಕೇಟಿ ಮನೆ, ಸುಳ್ಯ
೯. ಸಂಜೀವ ಕುದ್ಪಾಜೆ, ಕುದ್ಪಾಜೆ ಮನೆ, ಎನ್. ಎಂ. ಸಿ., ಸುಳ್ಯ
೧೦. ಎಂ. ಶಿವಣ್ಣ ನೆಲಮನೆ, ನೆಹರು ಸ್ಮಾರಕ ಕಾಲೇಜು, ಸುಳ್ಯ
೧೧. ಡಿ. ಜವರೇಗೌಡ, ನೆಹರು ಸ್ಮಾರಕ ಕಾಲೇಜು, ಸುಳ್ಯ
೧೨. ಕು. ಪ್ರತೀಕ್ಷಾ ಶಿಶಿಲ, 'ಕಾವ್ಯ', ಕಾಂತಮಂಗಲ
೧೩. ಶೈಲಿ ಪ್ರಭಾಕರ್, ರೋಟರಿ ಶಾಲೆ, ಸುಳ್ಯ
೧೪. ಎಂ. ಬಿ. ಸದಾಶಿವ, ಮೋಂಟಡ್ಕ ಮನೆ, ಸುಳ್ಯ
೧೫. ಹರಿಣಿ ಸದಾಶಿವ, ಮೋಂಟಡ್ಕ ಮನೆ, ಸುಳ್ಯ
೧೬. ಪದ್ಮಾ ಕೊಡಗು, ಪರಿವಾರ ರಂಗ, ಸುಳ್ಯ
೧೭. ಗೀತಾ ನಾಯಕ್, ಪರಿವಾರ ರಂಗ, ಸುಳ್ಯ
೧೮. ಅಜಯ ಪಿ. ರೈ, ಪರಿವಾರ ರಂಗ, ಸುಳ್ಯ
೧೯. ಜಯಪ್ರಕಾಶ್ ಮುಳ್ಯ, ಪರಿವಾರ ರಂಗ, ಸುಳ್ಯ
೨೦. ನವರತ್ನರಾಂ, ಪರಿವಾರ ರಂಗ, ಸುಳ್ಯ
೨೧. ಅರುಣ ಕನ್ಯಾನ, ನಿಸರ್ಗ, ಸಂಪಾಜೆ
೨೨. ಆರತಿ ಕಾಸ್ಪಾಡಿ, ನಿಸರ್ಗ, ಸಂಪಾಜೆ
೨೩. ಕುಸುಮಾವತಿ ಮುಳ್ಯ, ಪರಿವಾರ ರಂಗ, ಸುಳ್ಯ
೨೪. ಸುಜಾತ ಕಾಂತಮಂಗಲ, ಪರಿವಾರ ರಂಗ, ಸುಳ್ಯ
೨೫. ರಾಜಾರಾಮ ಗುಂಡ್ಯ, ಹವ್ಯಾಸಿ, ಬಡ್ಡಡ್ಕ
೨೬. ಜಯಶ್ರೀ ಎಸ್. ಎನ್., ಪಯಸ್ವಿನಿ ಗೈಡ್ಸ್-ಪೂಮಲೆ ಸ್ಕೌಟ್ಸ್-ರೋಟರಿ ಶಾಲೆ, ಸುಳ್ಯ
೨೭. ಶ್ರೀದೇವಿ ಕೆ. ಜಿ., ಪಯಸ್ವಿನಿ ಗೈಡ್ಸ್-ಪೂಮಲೆ ಸ್ಕೌಟ್ಸ್-ರೋಟರಿ ಶಾಲೆ, ಸುಳ್ಯ
೨೮. ಶುಭಾ ಟಿ., ಪಯಸ್ವಿನಿ ಗೈಡ್ಸ್-ಪೂಮಲೆ ಸ್ಕೌಟ್ಸ್-ರೋಟರಿ ಶಾಲೆ, ಸುಳ್ಯ
೨೯. ಚೈತ್ರಾ ಜಿ. ಪಟೇಲ್, ಪಯಸ್ವಿನಿ ಗೈಡ್ಸ್-ಪೂಮಲೆ ಸ್ಕೌಟ್ಸ್-ರೋಟರಿ ಶಾಲೆ, ಸುಳ್ಯ
೩೦. ರಶ್ಮಿ ಬಿ. ಎಸ್., ಪಯಸ್ವಿನಿ ಗೈಡ್ಸ್-ಪೂಮಲೆ ಸ್ಕೌಟ್ಸ್-ರೋಟರಿ ಶಾಲೆ, ಸುಳ್ಯ
೩೧. ಸ್ವಾತಿ ಕೆ. ಜಿ., ಪಯಸ್ವಿನಿ ಗೈಡ್ಸ್-ಪೂಮಲೆ ಸ್ಕೌಟ್ಸ್-ರೋಟರಿ ಶಾಲೆ, ಸುಳ್ಯ
೩೨. ಪ್ರಿಯಾಂಕಾ, ಪಯಸ್ವಿನಿ ಗೈಡ್ಸ್-ಪೂಮಲೆ ಸ್ಕೌಟ್ಸ್-ರೋಟರಿ ಶಾಲೆ, ಸುಳ್ಯ
೩೩. ಪ್ರಜ್ಞಾ ನಾಯಕ್, ಪಯಸ್ವಿನಿ ಗೈಡ್ಸ್-ಪೂಮಲೆ ಸ್ಕೌಟ್ಸ್-ರೋಟರಿ ಶಾಲೆ, ಸುಳ್ಯ
೩೪. ಸಂದೇಶ್, ಪಯಸ್ವಿನಿ ಗೈಡ್ಸ್-ಪೂಮಲೆ ಸ್ಕೌಟ್ಸ್-ರೋಟರಿ ಶಾಲೆ, ಸುಳ್ಯ
೩೫. ದಿನೇಶ್ ಅಂಬೆಕಲ್ಲು, ಪಯಸ್ವಿನಿ ಜೇಸೀಸ್, ಸುಳ್ಯ

೩೬. ಚಂದ್ರಶೇಖರ್ ಎ., ಪಯಸ್ವಿನಿ ಜೇಸೀಸ್, ಸುಳ್ಯ
೩೭. ಐ. ಬಿ. ಚಂದ್ರಶೇಖರ್, ಪಯಸ್ವಿನಿ ಜೇಸೀಸ್, ಸುಳ್ಯ
೩೮. ಜಯಪ್ರಕಾಶ್ ಕೆ., ಪಯಸ್ವಿನಿ ಜೇಸೀಸ್, ಸುಳ್ಯ
೩೯. ಪ್ರದೀಪ್ ಬಿ. ಎನ್., ಪಯಸ್ವಿನಿ ಜೇಸೀಸ್, ಸುಳ್ಯ
೪೦. ಸತೀಶ ಕೆ. ಎಲ್., ಪಯಸ್ವಿನಿ ಜೇಸೀಸ್, ಸುಳ್ಯ
೪೧. ರಾಧೇಶ್ ಕೆಮ್ಮಿಂಜೆ, ಪಯಸ್ವಿನಿ ಜೇಸೀಸ್, ಸುಳ್ಯ
೪೨. ಬಾಸುಮ ಕೊಡಗು, ರಂಗನಿರ್ದೇಶಕ, ಸುಳ್ಯ
೪೩. ಪೂವಪ್ಪ ಕಣಿಯೂರು, ಎನ್. ಎಂ. ಸಿ., ಸುಳ್ಯ
೪೪. ಜನಾರ್ದನ ಎರ್ಪಕಟ್ಟೆ, ದೂರಸಂಪರ್ಕ ಇಲಾಖೆ, ಸುಳ್ಯ
೪೫. ಮೋಹನ ಅರಂಬೂರು, ಛಾಯಾಗ್ರಾಹಕ, ಅರಂಬೂರು ಮನೆ, ಸುಳ್ಯ
೪೬. ಡಾ| ಚಂದ್ರಶೇಖರ ಬಿ. ದಾಮ್ಲೆ, ಎನ್. ಎಂ. ಸಿ., ಸುಳ್ಯ
೪೭. ಸೂರಯ್ಯ, ವಿಶ್ವಾಸ್ ಸ್ಟೋರ್, ಸುಳ್ಯ
೪೮. ಕೆ. ವಿ. ಹೇಮನಾಥ್, ಕುರುಂಜಿ ಮನೆ, ಸುಳ್ಯ
೪೯. ಕುಕ್ಕೆಟ್ಟಿ ಚಿನ್ಮಯರಾಜ್, ಕುಕ್ಕೆಟ್ಟಿಮನೆ, ಸುಳ್ಯ
೫೦. ರಾಜಾ, ಸಿಟಿಸೆಂಟರ್, ಸುಳ್ಯ
೫೧. ಯೋಗೀಶ, ಸಿಟಿ ಸೆಂಟರ್, ಸುಳ್ಯ
೫೨. ಇಂದಿರಾ ದೇವಿಪ್ರಸಾದ್, ಸಂಪಾಜೆ
೫೩. ನಿಹಾಲ್ ಎಂ. ಎಸ್., ಮೋಂಟಡ್ಕ ಮನೆ, ಸುಳ್ಯ
೫೪. ಚಂದ್ರಾಡ್ಕಾರ್, ಅಡ್ಕಾರ್, ಸುಳ್ಯ
೫೫. ಧನಲಕ್ಷ್ಮಿ ಕುದ್ಪಾಜೆ, ಕುದ್ಪಾಜೆ, ಸುಳ್ಯ
೫೬. ಕುಕ್ಕೇಟಿ ಚಂದ್ರಾ ಮಾಧವ ಗೌಡ, ಕುಕ್ಕೇಟಿ ಮನೆ, ಸುಳ್ಯ
೫೭. ಗಿರಿಜಾ ಜನಾರ್ದನ, 'ಪ್ರಕೃತಿ', ಕಾಂತಮಂಗಲ
೫೮. ಕೌಶಲ್ ಎಂ. ಎಸ್., ಮೋಂಟಡ್ಕ ಮನೆ, ಸುಳ್ಯ
೫೯. ಕುಕ್ಕೇಟಿ ರಜನೀಶ್, ಕುಕ್ಕೇಟಿ ಮನೆ, ಸುಳ್ಯ
೬೦. ಕುಕ್ಕೇಟಿ ರಂಜಿತ್, ಕುಕ್ಕೇಟಿ ಮನೆ, ಸುಳ್ಯ
೬೧. ಸಂದೀಪ್ ಮ್ಯಾಥ್ಯೂ, ರಥಬೀದಿ, ಸುಳ್ಯ
೬೨. ಕುಕ್ಕೇಟಿ ಲಕ್ಷ್ಮಣ ಗೌಡ, ಕುಕ್ಕೇಟಿ ಮನೆ, ಮಂಡೆಕೋಲು
೬೩. ಮಡಪ್ಪಾಡಿ ಮಾಧವ ಗೌಡ, ದೇವಸ್ಯ, ಸುಳ್ಯ
೬೪. ಬಾಲಚಂದ್ರ ಗೌಡ, ಚಾಲಕರು, ಶಾಂತಿನಗರ, ಸುಳ್ಯ
೬೫. ಡಿ. ಜಿ. ನಡ್ಕ, ನಡ್ಕ ಮನೆ, ಸುಳ್ಯ
೬೬. ಓರಿಯಡ್ಕ ಹೂವಯ್ಯ ಗೌಡ, ಓರಿಯಡ್ಕ ಮನೆ, ಅಮರಮುಡ್ನೂರು ಗ್ರಾಮ
೬೭. ದಿಲೀಪ್ ತಾಳಿಪಡ್ಪು, ಪುತ್ತೂರು
೬೮. ಕುಕ್ಕೇಟಿ ಅವಿನಾಶ್, ಕುಕ್ಕೇಟಿ ಮನೆ, ಮಂಡೆಕೋಲು
೬೯. ಕುಡೇಕಲ್ಲು ವಿಜಯಕುಮಾರ್, ಕುಡೇಕಲ್ಲು ಮನೆ, ಆಲೆಟ್ಟಿ ಗ್ರಾಮ
೭೦. ಗಂಗಾಧರ ಸಿ. ಎಸ್., ಪಯಸ್ವಿನಿ ಜೇಸೀಸ್, ಸುಳ್ಯ
೭೧. ದಿನೇಶ್ ಮಡಪ್ಪಾಡಿ, ಯುವಜನ ಸಂಯುಕ್ತ ಮಂಡಳಿ, ಸುಳ್ಯ
೭೨. ಕೆ. ಎನ್. ದೇವಿಪ್ರಸಾದ್, ಉಪನ್ಯಾಸಕರು, ಎನ್. ಎಂ. ಸಿ., ಸುಳ್ಯ
೭೩. ಎನ್. ಡಿ. ದೇವಿಚರಣ್ ಸಂಪಾಜೆ

• • •

ಅನುಬಂಧ ೪

## ಅಮರ ಕ್ರಾಂತಿ ಕಾಲ್ನಡಿಗೆ ಜಾಥಾ : ವೈಶಿಷ್ಟ್ಯಗಳು

- ಮಾರ್ಚ್ ೩೦ರಂದು ಸುಳ್ಯದಿಂದ ಆರಂಭಗೊಂಡ ಜಾಥಾ ಎಪ್ರಿಲ್ ೫ರಂದು ಮಂಗಳೂರಲ್ಲಿ ಮುಕ್ತಾಯಗೊಂಡಿತು.
- ಜಾಥಾದ ಯಶಸ್ಸಿಗೆ ಸುಳ್ಯದ ಲಯನ್ಸ್, ರೋಟರಿ, ಜೇಸೀಸ್, ರೋಟರ್ಯಾಕ್ಟ್ ಮತ್ತು ಸಂಯುಕ್ತ ಯುವಜನ ಮಂಡಳಿ ವಿಶೇಷ ನೆರವು ನೀಡಿದ್ದರು.
- ಜಾಥಾ ತಂಡವನ್ನು ಎದುರುಗೊಳ್ಳಲು ಎಲ್ಲಾ ಊರುಗಳಲ್ಲಿ ಸ್ವಾಗತ ಸಮಿತಿಗಳ ರಚನೆಯಾಗಿತ್ತು. ಜಿಲ್ಲಾ ಲಯನ್ಸ್, ರೋಟರಿ, ಜೇಸೀಸ್, ರೋಟರಿ ಗ್ರಾಮೀಣ ದಳ ಮತ್ತು ಸಂಯುಕ್ತ ಯುವಜನ ಮಂಡಳಿ ಜಾಥಾ ಸಂಘಟನೆಯ ಉಸ್ತುವಾರಿ ನೋಡಿಕೊಂಡವು.
- ಜಾಥಾದುದ್ದಕ್ಕೂ ಅಲ್ಲಲ್ಲಿ ಉತ್ಸವ ಸಮಿತಿಯ ಪ್ರಮುಖರಾದ ದೇವಿಪ್ರಸಾದ್, ಕುಕ್ಕೆಟ್ಟಿ ಮಾಧವ ಗೌಡ, ಜನಾರ್ದನ ಕಣಕ್ಕೂರು, ಎಂ. ಬಿ. ಸದಾಶಿವ, ಪ್ರೊ. ಶಿವಣ್ಣ, ಪ್ರೊ. ಜವರೇಗೌಡ, ಡಾ. ಶಿಶಿಲ ಮುಂತಾದವರನ್ನು ಹಾರ ಹಾಕಿ ಸನ್ಮಾನಿಸಲಾಯಿತು.
- ಜಾಥಾದುದ್ದಕ್ಕೂ ಅಲ್ಲಲ್ಲಿ ಊರವರು ತಂಪುಪಾನೀಯ ಮತ್ತು ಪಾನಕಗಳ ವ್ಯವಸ್ಥೆ ಮಾಡಿದ್ದರು.
- ನೇರಳಕಟ್ಟೆಯಿಂದ ಮಾಣಿಯವರೆಗೆ ೨೦೦ ದೊಂದಿಗಳ ಬೆಳಕಲ್ಲಿ, ಬ್ಯಾಂಡು ವಾಲಗ, ಕೊಂಬು-ಕಹಳೆಗಳೊಡನೆ ಜಾಥಾ ಸಾಗಿತು.
- ಜಾಥಾದುದ್ದಕ್ಕೂ ಅರಂಬೂರು ಮೋಹನರ ವೀಡಿಯೋ ಚಿತ್ರೀಕರಣವಿತ್ತು. ಮೋಹನ, ಹರಿಣಿ, ಕೆಮ್ಮಿಂಜೆ, ಬಾಸುಮ, ಚಂದ್ರಾಡ್ಕರ್, ಎಂ. ಜಿ. ಕಜೆ ಛಾಯಾಚಿತ್ರಗಳನ್ನು ತೆಗೆದರು.
- ಸುಳ್ಯ ರೋಟರಿ ಶಾಲೆಯ ಪಯಸ್ವಿನಿ ಗೈಡ್ಸ್ ದಳದ ಹತ್ತು ಮಂದಿ ಮತ್ತು ಪೂಮಲೆ ಸ್ಕೌಟ್ಸ್‌ನ ಪೃಥ್ವೀಸಾಗರ್, ಕಾರ್ತಿಕ್ ಮತ್ತು ಸಂದೇಶ್, ಗೈಡ್ ಕ್ಯಾಪ್ಟನ್ ಶೈಲಿ ಪ್ರಭಾಕರರ ನೇತೃತ್ವದಲ್ಲಿ ಏಳು ದಿನಗಳ ಕಾಲ್ನಡಿಗೆ ಜಾಥಾದಲ್ಲಿ ಪಾಲ್ಗೊಂಡರು.
- ನೀನಾಸಂ ಪದವೀಧರ ಜೀವನ್‌ರಾಂ ನಿರ್ದೇಶನದಲ್ಲಿ ಒಂದೇ ದಿನದಲ್ಲಿ ದಿಢೀರಾಗಿ ಸಿದ್ಧಗೊಂಡ ಬೀದಿನಾಟಕ 'ಅಮರ ಕ್ರಾಂತಿ' (ರಚನೆ : ಡಾ| ಶಿಶಿಲ) - ಜಾಥಾದ ಪ್ರಮುಖ ಆಕರ್ಷಣೆಯಾಗಿತ್ತು. ಪುರುಷ ಪಾತ್ರಧಾರಿಗಳಾಗಿ ಪದ್ಮಾ ಕೊಡಗು ಮತ್ತು ಗೀತಾ ಮುಳ್ಯ ಮಿಂಚಿದರು. ಉತ್ತಮ ಅಭಿನಯದಿಂದ ಜೀವನ್‌ರಾಂ, ಕಣಕ್ಕೂರ್,

ಅಜಯ್, ಜಯಪ್ರಕಾಶ್, ಕೌಶಲ್, ಕುದ್ಪಾಜೆ, ಆರತಿ, ಅರುಣ, ನವರತ್ನ, ಕುಸುಮಾವತಿ, ಸುಜಾತಾ, ನಾಗರಾಜ, ಕಾರ್ತಿಕ್, ರಾಜಾರಾಂ ಮುಂತಾದವರು ಗಮನ ಸೆಳೆದರು.

- ದೇವಿಪ್ರಸಾದ್ ಸಂಪಾಜೆ (೫೬) ಕಾಲ್ನಡಿಗೆ ಜಾಥಾದಲ್ಲಿ ಪಾಲ್ಗೊಂಡ ಅತ್ಯಂತ ಹಿರಿಯರು. ನಾಲ್ಕು ವರ್ಷದ ನಿಹಾಲ್ (ಎಂ. ಬಿ. ಸದಾಶಿವರ ಪುತ್ರ) ಅತ್ಯಂತ ಕಿರಿಯ. ಈತ ಆರು ದಿನ ಜಾಥಾದಲ್ಲಿ ಪಾಲ್ಗೊಂಡಿದ್ದ. ಏಳೂ ದಿನ ಪಾಲ್ಗೊಂಡವರಲ್ಲಿ ಅತ್ಯಂತ ಕಿರಿಯವರೆಂಬ ಕೀರ್ತಿ ಆರು ವರ್ಷದ ಪ್ರತೀಕ್ಷಾ ಶಿಶಿಲಳಿಗೆ ಸಂದಿತು.
- ಡಾ| ಶಿಶಿಲರ ಕುಟುಂಬ ಏಳೂ ದಿನ ಜಾಥಾದಲ್ಲಿ ಪಾಲ್ಗೊಂಡ ಏಕೈಕ ಕುಟುಂಬವೆಂಬ ಹೆಸರು ಗಳಿಸಿತು.
- ಸದಾಶಿವ - ಹರಿಣಿ, ಶೈಲಿ-ಪ್ರಭಾಕರ್ ಏಳೂ ದಿನ ಜಾಥಾದಲ್ಲಿ ಪಾಲ್ಗೊಂಡ ದಂಪತಿಗಳು.
- ಎನ್. ಎಂ. ಸಿ. ಯ ಪ್ರೊ. ಶಿವಣ್ಣ, ಡಾ| ಶಿಶಿಲ, ಪ್ರೊ| ಜವರೇಗೌಡ ಮತ್ತು ಕುದ್ಪಾಜೆ ಸುಳ್ಯದಿಂದ ಮಂಗಳೂರಿನವರೆಗೂ ನಡೆದು ದಾಖಲೆ ನಿರ್ಮಿಸಿದರು.
- ಮಾಜಿ ಮುಖ್ಯಮಂತ್ರಿ ವೀರಪ್ಪ ಮೊಯ್ಲಿ, ಜಿಲ್ಲಾ ಉಸ್ತುವಾರಿ ಮಂತ್ರಿ ಮೊಯ್ದಿನ್, ಮಾಜಿ ಮಂತ್ರಿ ಬ್ಲೇಸಿಯಸ್ ಡಿ'ಸೋಜಾ, ಶಾಸಕರಾದ ವಿನಯಚಂದ್ರ, ಅಭಯಚಂದ್ರ, ಕುಂಬಳೆ ಸುಂದರ ರಾವ್, ಸ್ವಾತಂತ್ರ್ಯ ಹೋರಾಟಗಾರರಾದ ಐಕಳ ಸಂಜೀವನಾಥ, ಅಮ್ಮೆಂಬಳ ಬಾಳಪ್ಪ, ಪ್ರಗತಿಪರ ಚಿಂತಕರಾದ ಬೋಳಂತಕೋಡಿ, ತುದಿಯಡ್ಕ ವಿಷ್ಣ್ವಯ್ಯ, ಪ್ರೊ| ಕೋಡಿ ಕುಶಾಲಪ್ಪ ಗೌಡ, ಪೆರಾಜೆ ಶ್ರೀನಿವಾಸ ರಾವ್, ಕಿಟ್ಟಣ್ಣ ರೈ, ಮಹಾಬಲ ರೈ ಮುಂತಾದವರು ಜಾಥಾಕ್ಕೆ ವಿಶೇಷ ಮೆರುಗು ತಂದಿತ್ತರು.

- ಸುದ್ದಿ ಬಿಡುಗಡೆ, ಸುಳ್ಯ



## ಎನ್. ಎಸ್. ದೇವಿಪ್ರಸಾದ್ ಸಂಪಾಜೆಯವರ ಕೃತಿಯಾದ ಅಮರ ಸುಳ್ಯದ ಸ್ವಾತಂತ್ರ್ಯ ಸಮರದ ಹಿರಿಯ ಸಾಹಿತಿಗಳ ಮತ್ತು ವಿಮರ್ಶಕರ ಅಭಿಪ್ರಾಯಗಳು.



"ನಮ್ಮ ಹಿರಿಯರು ಮಾಡಿದ ಅಂದಿನ ಸಾಹಸ, ಸಾಧನೆ, ತ್ಯಾಗ, ಬಲಿದಾನಗಳು ಇಂದಿನ ೃತಘ್ನ ಸಮಾಜದ ಅವಜ್ಞೆಯಿಂದ, ಉದಾಸೀನ ಮನಸ್ಕತೆಯಿಂದ ಅರಿವಳಿಕೆಗೆ ಪಕ್ಕಾಗಿವೆ. ಈ ೆಲದ ನೀರುಂಡು, ಅವರು ಉಸಿರಾಡಿದ ಗಾಳಿಯನ್ನೇ ಉಸಿರಾಡಿ, ಉದರಂಭರಣ ಮಾಡುತ್ತಿರುವ ಾವು ಅಂತಹ ಹಿರಿಯರಿಗೆ ಕೃತಜ್ಞತೆ ತೋರದೆ, ಅವರ ನೆನಪನ್ನು ಹಸಿರಾಗಿರಿಸದೆ, ಅವರಿಂದ ಸ್ಫೂರ್ತಿಯನ್ನು ಪಡೆದು, ನಮ್ಮ ಜೀವನವನ್ನು ಅಭಿಮಾನ ಧನರಾಗಿ ನಡೆಸದೆ, ಜಡದೇಹಿಗಳಾಗಿ, ಜಡಮತಿಗಳಾಗಿ, ಹೇಗೋ ಹಾಗೆ ಜೀವಿಸಿದ್ದರೆ, ಸ್ವಾಭಿಮಾನಶಾಲಿಗಳಾದ ಇತರ ಜನಾಂಗಗಳಿಗಿಂತ ಂದೆ ಬಿದ್ದು ಹೇಳ ಹೆಸರಿಲ್ಲದೆ ನಶಿಸುವುದು ನಿಶ್ಚಯ."

ಈ ಪ್ರದೇಶದ ಜನತೆ ಎಳೆಯರೂ, ಹಳೆಯರೂ ಸೇರಿದಂತೆ ಇದನ್ನೋದಿ ಸ್ಫೂರ್ತಿ ಪಡೆದು ಮುಂದೆ ನಡೆಯಬೇಕಾದ ಕಾರ್ಯಭಾರಗಳನ್ನು ನೆರವೇರಿಸಲಿ, ಅಖಂಡ ಕರ್ನಾಟಕದ ನೆರೆಡೆಯ ಜನತೆ ಇದನ್ನೋದಿ, ಈ ಪ್ರದೇಶದ ಹಿಂದಿನ ತಲೆಮಾರಿನವರ ಸಾಹಸಗಾಥೆಯನ್ನು ೇಳಿ ಪುಳಕಿತಗೊಳ್ಳುವಂತಾಗಲಿ, ದೇವಿಪ್ರಸಾದರ ಸಾಹಿತ್ಯಿಕ, ಸಾಮಾಜಿಕ ಸೇವಾ ಕೈಂಕರ್ಯಗಳಿಗೆ ಭಗವತ್ಕೃಪೆಯಿಂದ ನಿರಂತರ ಯಶಸ್ಸು ದೊರೆಯುತ್ತಿರಲಿ ಎಂಬುದು ನನ್ನ ಹಾರ್ದಿಕ ಬಯಕೆ.

**ಪ್ರೊ| ಕೋಡಿ ಕುಶಾಲಪ್ಪ ಗೌಡ (ಮುನ್ನುಡಿಯಿಂದ)**

---

ಈ ಐತಿಹಾಸಿಕ ಮಹತ್ವವುಳ್ಳ ಸ್ವಾತಂತ್ರ್ಯ ಸಮರೇತಿಹಾಸ, ವಿವಿಧ ಸಂಶೋಧಕ ವಿದ್ವಾಂಸರ ೇಖನಗಳಿಂದ, ಹಿಂದಿನ ದಾಖಲೆಗಳಿಂದ ಸಾರಾಂಶ ರೂಪದಲ್ಲಿ ಹೀಗೆ ಪ್ರಕಟವಾಗುತ್ತಿರುವುದು ಇದೇ ಪ್ರಥಮ. ಇಂತಹ ಸಾಹಸ ಕಾರ್ಯಕ್ಕೆ ಆಸಕ್ತಿ ವಹಿಸಿದ ಶ್ರೀ ದೇವಿಪ್ರಸಾದರೇ ಮೊದಲಾದ ೇಶಾಭಿಮಾನಿಗಳ ಈ ಸತ್ಕಾರ್ಯ ಪ್ರಶಂಸನೀಯ. ಇಂತಹ ಒಂದು ಚಾರಿತ್ರಿಕ ಮಹತ್ವದ ೃತಿಯನ್ನು ಪ್ರಕಟಿಸಿದ ಪುತ್ತೂರು ಕನ್ನಡ ಪ್ರಪಂಚ ಪ್ರಕಾಶನದ ನಿಮ್ಮೆಲ್ಲರಿಗೆ ನಾಡು ನುಡಿಗಳ ಅಭಿಮಾನಿಗಳೆಲ್ಲರೂ ಕೃತಜ್ಞರು.

ಈ ಕೃತಿಯಲ್ಲಿ ಅಮರ ಕ್ರಾಂತಿಯ ಕಾಲ್ನಡಿಗೆ ಜಾಥಾದ ವಿವರವಾದ ವರದಿಯು ಂದಿರುವುದು ಸ್ಫೂರ್ತಿದಾಯಕವಾಗಿದೆ.

**ಕಯ್ಯಾರ ಕಿಞ್ಞಣ್ಣ ರೈ (ಪುತ್ತೂರು ಕನ್ನಡ ಪ್ರಪಂಚ ಪ್ರಕಾಶನಕ್ಕೆ ಬರೆದ ಪತ್ರದಿಂದ)**

---

ಈ ಕಾಲದಲ್ಲಿ ಈ ಬಗೆಯಾಗಿ ಶ್ರದ್ಧೆಯಿಂದ ಶ್ರಮಿಸುವವರು ವಿರಳ. ಉತ್ತಮವಾದೊಂದು ಂಥವನ್ನು ರೂಪಿಸಿ ಅದೆಷ್ಟೋ ಮರೆವು ಮುಸುಕಿದ ವಸ್ತುಸತ್ಯಗಳನ್ನು ಅನಾವರಣಗೊಳಿಸಿದುದಕ್ಕಾಗಿ ನ್ನಡಿಗರು ನಿಮಗೆ ಋಣಿಗಳಾಗಿರಬೇಕು.

ಕ್ರಾಂತಿಯ ಕುರಿತು ಲೆವಿನನ ವರದಿ ಹಾಗೂ ರಿಕ್ಟರ್ ಗಜೆಟಿಯರ್ ಮಾಹಿತಿಗಳು ತುಂಬ ಉಪಯುಕ್ತವಾಗಿವೆ. ನ್ಯಾಯಾಂಗ ಸೂಚಿಯಂಥ ಅಧಿಕೃತ ಮಾಹಿತಿಗಳು ಗ್ರಂಥಕ್ಕೆ ಪ್ರಮಾಣ ಪಟ್ಟಿಯನ್ನು ಇತ್ತಿವೆ. ಈ ಕೃತಿ ಒಂದು ಅಪೂರ್ವ ಕೊಡುಗೆಯಾಗಿದೆ.

**ಅಮೃತ ಸೋಮೇಶ್ವರ (ಪತ್ರದಿಂದ)**

---

ಸ್ವಾತಂತ್ರ್ಯ ಸಮರದ ನಿಜ ಸ್ವರೂಪವನ್ನು ನೀವು ಪುಸ್ತಕದಲ್ಲಿ ಚೆನ್ನಾಗಿ ಬಿಂಬಿಸಿದ್ದೀರಿ. ಅದೊಂದು ಅಧಿಕೃತ ದಾಖಲೆಯಾಗಿಯೂ ಪರಿಣಮಿಸಿದೆ. ಚಾರಿತ್ರಿಕ ಘಟನೆಗಳನ್ನು ಸ್ಪಷ್ಟ ಆಧಾರಗಳೊಂದಿಗೆ ದಾಖಲಿಸಲು ನೀವು ತುಂಬ ಶ್ರಮಿಸಿದ್ದೀರಿ. ಅದು ಸಾರ್ಥಕವಾಗಿದೆ. ಈ ಗ್ರಂಥ ಒಂದು ಆಕರ ಗ್ರಂಥವಾಗಿ ಪರಿಣಮಿಸಿದೆಯೆಂದೂ ನನಗನಿಸಿದೆ. ಅಮರ ಸುಳ್ಯದ ಮಗನಾದ ನಾನು ನಿಮಗೆ ಅತ್ಯಂತ ಹೃದಯ ತುಂಬಿದ ಕೃತಜ್ಞತೆಯನ್ನು ಅರ್ಪಿಸುತ್ತೇನೆ, ಈ ಬಗ್ಗೆ.

**ಕೆ. ಸಚ್ಚಿದಾನಂದಯ್ಯ (ಚಿರಂತನ)**

---

ಅಮರ ಸುಳ್ಯದ ಕ್ರಾಂತಿಯ ಚರಿತ್ರೆಯನ್ನು ಬರೆದಿರುವ ದೇವಿಪ್ರಸಾದ್ ಸಂಪಾಜೆಯವರು ಮಂಗಳೂರಿನ ಕಲೆಕ್ಟರ್ ಎಂ. ಲೆವಿನ್ನಿನ ವರದಿಯ ಪೂರ್ಣ ಪಾಠವನ್ನು ಈ ವರದಿಯಲ್ಲಿ ನೀಡಿದ್ದಾರೆ. ಬಂಡಾಯಗಾರರ ನಡವಳಿಕೆ ಮೇಲ್ಮಟ್ಟದ್ದು" ಎಂದು ಲೆವಿನ್ ಅಭಿಪ್ರಾಯಪಟ್ಟಿದ್ದಾನೆ.

ಸ್ವಾತಂತ್ರ್ಯ ಹೋರಾಟದ ಇತಿಹಾಸದ ಅಮರ ಸುಳ್ಯದ ಸ್ವಾತಂತ್ರ್ಯ ಸಮರದ ವೀರರಿಗೆ ಸಿಗಬೇಕಾದ ಸ್ಥಾನಮಾನ ಸಿಕ್ಕಿಲ್ಲ. ಕರ್ನಾಟಕದ ಇತಿಹಾಸದ ಅಲಕ್ಷಿತ ಅಧ್ಯಾಯವೊಂದರ ಮೇಲೆ ಬೆಳಕು ಚೆಲ್ಲುವುದರಲ್ಲಿ ಲೇಖಕ ದೇವಿಪ್ರಸಾದ್ ಸಂಪಾಜೆ ಯಶಸ್ವಿಯಾಗಿದ್ದಾರೆ.

**ಪತಂಚಲ ಕಾಪ್ಪ (ಉದಯವಾಣಿ)**

---

ಬ್ರಿಟಿಷರು ಹಾಗೂ ಅವರ ಅನುಯಾಯಿಗಳು, ದೇಶದ ಮೂಲೆಮೂಲೆಗಳಲ್ಲಿ ನಡೆದ ಮಹತ್ವದ ರಾಷ್ಟ್ರೀಯ ಚಟುವಟಿಕೆಗಳನ್ನು ನಗಣ್ಯವಾಗಿ ಪರಿಗಣಿಸಿದುದರಲ್ಲಿ ಅಚ್ಚರಿಯೇನೂ ಇಲ್ಲ. 1837ರಲ್ಲಿ ಕೊಡಗು ಸುಳ್ಯ ಕಾಸರಗೋಡು ಮಂಗಳೂರು ಪ್ರದೇಶದಲ್ಲಿ ಬ್ರಿಟಿಷರನ್ನು ನಡುಗಿಸಿದ ಅಮರ ಸುಳ್ಯದ ಕ್ರಾಂತಿ ಇದಕ್ಕೊಂದು ನಿದರ್ಶನ.

ನಿರಂಜನರು ಬರೆದ 'ಕಲ್ಯಾಣ ಸ್ವಾಮಿ' ಕಾದಂಬರಿಯ ಪ್ರಭಾವದಿಂದ ಸತ್ಯಶೋಧನೆಗೆ ಇಳಿದ ಎನ್.ಎಸ್. ದೇವಿಪ್ರಸಾದ್ ಸಂಪಾಜೆ ಅವರ ನಿರಂತರ ಪ್ರಯತ್ನದ ಫಲವಾಗಿ 1998ರ ಎಪ್ರಿಲ್ ತಿಂಗಳಲ್ಲಿ ಅಮರ ಕ್ರಾಂತಿ ಜಾಥಾ(ಸುಳ್ಯದಿಂದ ಮಂಗಳೂರು ತನಕ) ನಡೆದುದಲ್ಲದೆ ಅಮರ ಸುಳ್ಯದ ಸ್ವಾತಂತ್ರ್ಯ ಸಮರ ಕೃತಿಯು ಪುತ್ತೂರಲ್ಲಿ 'ನಿರಂಜನ 75' ಕಾರ್ಯಕ್ರಮದ ವೇಳೆ ಬಿಡುಗಡೆಗೊಂಡಿತು.

**ಅರ್ತಿಕಜೆ (ಕನ್ನಡ ಜನಾಂತರಂಗ)**

---

ಸಂಗ್ರಾಮದ ಕುರಿತಂತೆ ಬಹಳಷ್ಟು ಅಧಿಕೃತವಾದ ಮಾಹಿತಿಗಳನ್ನು ಒದಗಿಸಿದ್ದಾರೆ. ಜೊತೆಗೆ ಚರ್ಚಿಸಿದ್ದಾರೆ. ತೀರ್ಮಾನಿಸಿದ್ದಾರೆ. ಭಾಗ ಒಂದರಲ್ಲಿ ಕ್ರಾಂತಿಯ ಹಿನ್ನಲೆ ಮತ್ತು ಪರಿಣಾಮಗಳನ್ನು ಸುದೀರ್ಘವಾಗಿ, ಸಮರ್ಥವಾಗಿ ವಿಶ್ಲೇಷಿಸಿದ್ದಾರೆ.

ಒಂದು ಅಪೂರ್ವವಾದ ಪ್ರಯತ್ನ. ಸಾರ್ಥಕ ಸಂಶೋಧನೆ. ಆದರೂ ಇದರ ಕುರಿತು ಲೇಖಕರು ಅತೃಪ್ತಿ ಉಳಿಸಿಕೊಂಡೇ ಇದ್ದಾರೆ. ಒಟ್ಟಿನಲ್ಲಿ ಬ್ರಿಟಿಷರು ಸಾಕಷ್ಟು ದಾಖಲೆಗಳನ್ನು ಬಿಟ್ಟು ಹೋಗಿದ್ದಾರೆ. ಅವರು ಬರೆದ ಸಾಲುಗಳ ಮಧ್ಯೆ ಸತ್ಯಾನ್ವೇಷಣೆ ಸಾಧ್ಯ. ಅಲ್ಲದೆ ಫ್ರೆಂಚರು, ಜರ್ಮನರು, ಪೋರ್ಚುಗೀಸರು ಏನು ದಾಖಲಿಸಿಟ್ಟಿದ್ದಾರೆ? ಎಂದೂ ಇನ್ನೊಂದು ಕಡೆ ಚೆನ್ನೈಯ ಪತ್ರಾಗಾರದಲ್ಲಿ ಕಾಟನನ ವರದಿ, ಅದಕ್ಕೆ ಕಬ್ಬನ್ ಬರೆದ ಟಿಪ್ಪಣಿ, ಖೈದಿಗಳ ವಿಚಾರಣಾ ವರದಿ, ನ್ಯಾಯಾಲಯ ತೀರ್ಪುಗಳು ಅಮರ ಕ್ರಾಂತಿಯ ಬಗ್ಗೆ ಇನ್ನಷ್ಟು ಬೆಳಕು ಬೀರಬಲ್ಲವು ಎಂದೂ ಹೇಳುವಲ್ಲಿ ಅವರಲ್ಲಿನ ವಿನಯ ವಿಜೃಂಭಿಸುತ್ತದೆ ಮತ್ತು ಅವರ ಮುಂದಿನ ಪ್ರಯತ್ನಗಳ ಬಗ್ಗೆ ಭರವಸೆ ಹೆಚ್ಚಿಸುತ್ತದೆ.

ವಿ. ಗ. ನಾಯಕ (ಈದಿನ)

---

ಸಂಪಾಜೆಯ ಗಣ್ಯ, ಜನಪ್ರಿಯ ನಾಯಕರೂ, ಸ್ವತಹ ಕಲಾವಿದರೂ, ದೂರ ದೃಷ್ಟಿಕೋನದ ವಿಚಾರಶೀಲರೂ ಆದ ಎನ್. ಎಸ್. ದೇವಿಪ್ರಸಾದ್‌ರವರು ಬ್ರಿಟಿಷ್ ಚರಿತ್ರೆಕಾರರು ಭಾರತದ ಚರಿತ್ರೆಯುನ್ನು ಹೇಗೆ ತಮಗೆ ಅನುಕೂಲವಾಗುವಂತೆ ಬರೆದು ಭಾರತೀಯರಿಗೆ ಅನ್ಯಾಯವುಂಟುಮಾಡಿದರು ಎಂಬಂಶವನ್ನು ಚಿತ್ತಭಿತ್ತಿಯಲ್ಲಿ ಬಿಂಬಿಸುವಂತೆ ಕೆತ್ತಿದ್ದಾರೆ.

ರೋಮಾಂಚಕ ಸ್ವಾತಂತ್ರ್ಯ ಹೋರಾಟದ ಇತಿಹಾಸವನ್ನು ತಮ್ಮ ಪುಸ್ತಕದಲ್ಲಿ ದೇವಿಪ್ರಸಾದ್‌ರವರು ದಾಖಲೆಗಳು, ಬ್ರಿಟಿಷ್ ಅಧಿಕಾರಿಗಳ ವರದಿಗಳು, ದಂಗೆಯ ಹಿನ್ನಲೆಯ ದೃಢೀಕೃತ ಅಂಕಿ ಅಂಶಗಳು, ವಿವಿಧ ಪರಿಶಿಷ್ಟಗಳು ಮುಂತಾದ ವಾಸ್ತವ ವೈಶಿಷ್ಟ್ಯಗಳೊಂದಿಗೆ ವಿವರಿಸಿರುವುದು ನಿಜಕ್ಕೂ ಆಕರ್ಷಣೀಯವಾಗಿದೆ.

ವಿ. ಎಸ್. ರಾಮಕೃಷ್ಣ(ಕೊಡಗು ಸಮಾಚಾರ)

---

"ಮೂರು ದಾರಿಗಳು" ಚಿತ್ರದ ನಿರ್ಮಾಪಕರಾದ ದೇವಿಪ್ರಸಾದ್ ಸದಭಿರುಚಿಯ ವ್ಯಕ್ತಿ. ರಂಗಭೂಮಿ ಮತ್ತು ಸಾಹಿತ್ಯಿಕ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡವರು. ಕೊಡಗಿನ ಸಂಪಾಜೆಯಲ್ಲಿ ನೆಲಸಿರುವ ಎನ್. ಎಸ್. ದೇವಿಪ್ರಸಾದ್ ಅವರು ರಚಿಸಿರುವ ಅಮರ ಸುಳ್ಯದ ಸ್ವಾತಂತ್ರ್ಯ ಸಮರ ಎಂಬ ಕೃತಿಯೂ ಕೊಡವರ ಕೋಪವನ್ನು ಎದುರಿಸುತ್ತಿದೆ.

ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸಿದ್ದ ಅಪ್ಪಯ್ಯ ಗೌಡರನ್ನು ಇಂಗ್ಲಿಷರು 1837ರಲ್ಲಿ ಗಲ್ಲಿಗೆ ಏರಿಸಿದ್ದರೂ ಈ ವರೆಗೆ ಅವರ ಪ್ರತಿಮೆಯನ್ನು ಪ್ರತಿಷ್ಠಾಪಿಸಲಿಲ್ಲ ಎಂದು ದೇವಿಪ್ರಸಾದ್ ಬರೆದಿರುವುದು, ದಾಖಲೆಯೊಂದನ್ನು ಆಧರಿಸಿ ಬ್ರಿಟಿಷರಿಗೆ ಸಹಾಯ ಮಾಡಿದವರ ಮೂವತ್ನಾಲ್ಕು ಮಂದಿಯ ಹೆಸರನ್ನು (ಮೂವತ್ತೆರಡು ಮಂದಿ ಕೊಡವರೇ) ಉಲ್ಲೇಖಿಸಿರುವುದು ಕೆಲವರ ಒದ್ದಾಟಕ್ಕೆ ಕಾರಣವಾಗಿದೆ.

ಮೂವತ್ತೆರಡು ಮಂದಿ ಕೊಡವರ ಮನೆ ಹೆಸರನ್ನೂ ಕೊಟ್ಟಿರುವುದು ಕೊಡವರ ಕೋಪಕ್ಕೆ ಮುಖ್ಯ ಕಾರಣ. ಬ್ರಿಟಿಷರಿಗೆ ಸಹಾಯ ಮಾಡಿದವರ ಹೆಸರನ್ನು ದಾಖಲೆ ಸಹಿತ ಬರೆದಾಗ ಕೋಪಿಸಿಕೊಳ್ಳುವ ಅಗತ್ಯವಾದರೂ ಏನು?

ಟಿ. ಕೆ. ತ್ಯಾಗರಾಜ್ (ಲಂಕೇಶ್ ಪತ್ರಿಕೆ)





ಎಸ್. ಎಸ್. ದೇವಿಪ್ರಸಾದ್ ಸಂಪಾಜೆ

ಅಮರ ಸುಳ್ಯದ ರೈತಾಪಿ ಜನರ ಹೋರಾಟವನ್ನು ಕಲ್ಯಾಣಪ್ಪನ ಕಾಟಕಾಯಿ (ದರೋಡೆ) ಎಂದು ಚಿತ್ರಿಸುವಲ್ಲಿ ಬ್ರಿಟಿಷರು ಸಫಲರಾದುದು ಇತಿಹಾಸಕ್ಕೆ ಬಗೆದ ದೊಡ್ಡ ಅಪಚಾರ. ಇತಿಹಾಸಕಾರರೂ ಕೂಡಾ ಇದನ್ನೇ ನಂಬಿದ್ದು ದೊಡ್ಡ ದುರಂತ. ಸ್ವಾತಂತ್ರ್ಯಕ್ಕಾಗಿ ಬ್ರಿಟಿಷರ ವಿರುದ್ಧ ಹೋರಾಡಿದವರು ದರೋಡೆಕೋರರೆಂದಾದರೆ ಗಾಂಧೀಜಿ, ನೆಹರೂ, ತಿಲಕ್, ಗೋಖಲೆ, ಸುಭಾಶ್ಚಂದ್ರ ಬೋಸರನ್ನು ಯಾರ ಸಾಲಿಗೆ ಸೇರಿಸಬೇಕಾಗುತ್ತದೆ?

ಅಮರ ಸುಳ್ಯ ಬಂಡಾಯವನ್ನು ಕಾಟಕಾಯಿ ಮಾಡಿದ್ದು ಒಂದು ತಪ್ಪಾದರೆ, ಬಂಡಾಯದಲ್ಲಿ ಪಾಲ್ಗೊಂಡವರ ಕುಟುಂಬಗಳನ್ನು ದೌರ್ಜನ್ಯಕ್ಕೀಡು ಮಾಡಿದ್ದು, ಸುಳ್ಯ ಸೀಮೆಯ ಅಭಿವೃದ್ಧಿಯನ್ನು ಪೂರ್ತಿಯಾಗಿ ಕಡೆಗಣಿಸಿದ್ದು ಇನ್ನೊಂದು ತಪ್ಪು. ಈ ಬಂಡಾಯವನ್ನು ಅಡಗಿಸಲು ನೆರವಾದವರಿಗೆ ಪ್ರಶಸ್ತಿ ನೀಡಿ ಭೂಮಿಯನ್ನು ಉಂಬಳಿ ನೀಡಿದ್ದು ಬಹು ದೊಡ್ಡ ವ್ಯಂಗ್ಯ. ಅಮರ ಸುಳ್ಯ ಬಂಡಾಯ ಕಾಲದಲ್ಲಿ ಕೊಡಗಿನವರೆಲ್ಲರೂ ಒಟ್ಟಾಗಿ ಬ್ರಿಟಿಷರ ವಿರುದ್ಧ ತಿರುಗಿ ಬೀಳುತ್ತಿದ್ದರೆ ಇತಿಹಾಸ ಬೇರೆಯೇ ಇರುತ್ತಿತ್ತು.

